# ಮಾಂಡೂಕ್ಯ ಪ್ರವಚನ

(ಮಾಂಡೂಕ್ಯೋಪನಿಷತ್ತಿಗೆ ಪರಮಪೂಜ್ಯ ಶ್ರೀ ಶ್ರೀ ಗೌಡಪಾದಾಚಾರ್ಯರು
ರಚಿಸಿರುವ ಕಾರಿಕೆಗಳನ್ನು ಕುರಿತು ಕನ್ನಡ ಪ್ರವಚನ)



ಲೇಖಕರು :
ವಿದ್ವಾನ್ ಎನ್. ರಂಗನಾಥ ಶರ್ಮಾ



ಪ್ರಕಾಶಕರು :
ಸ್ವಯಂಪ್ರಕಾಶ ಗ್ರಂಥಮಾಲಾ
ಆದಿಶಂಕರಾಚಾರ್ಯ ಶ್ರೀ ಶಾರದಾ–ಲಕ್ಷ್ಮೀನೃಸಿಂಹ ಪೀಠ
'ಶ್ರೀಮಠ', ಹರಿಹರಪುರ–577120,

ಸ್ವಯಂಪ್ರಕಾಶ ಗ್ರಂಥಮಾಲಾ– ಪುಷ್ಪ 15

# ಮಾಂಡೂಕ್ಯ ಪ್ರವಚನ

(ಮಾಂಡೂಕ್ಯೋಪನಿಷತ್ತಿಗೆ ಪರಮಪೂಜ್ಯ ಶ್ರೀ ಶ್ರೀ ಗೌಡಪಾದಾಚಾರ್ಯರು ರಚಿಸಿರುವ ಕಾರಿಕೆಗಳನ್ನು ಕುರಿತು ಕನ್ನಡ ಪ್ರವಚನ)

ವಿದ್ವಾನ್ ಕೆ. ರಾಮಕೃಷ್ಣಭಟ್ಟರಿಗೆ
ಶುಭಾಶಂಸನಪೂರ್ವಕ.
- ಎನ್. ರಂಗನಾಥಶರ್ಮಾ
6.8.2006

ಲೇಖಕರು :

ವಿದ್ವಾನ್ ಎನ್. ರಂಗನಾಥ ಶರ್ಮಾ

ಪ್ರಕಾಶಕರು :

**ಸ್ವಯಂಪ್ರಕಾಶ ಗ್ರಂಥಮಾಲಾ**

ಆದಿಶಂಕರಾಚಾರ್ಯ ಶ್ರೀ ಶಾರದಾ–ಲಕ್ಷ್ಮೀನೃಸಿಂಹ ಪೀಠ

**'ಶ್ರೀಮಠ', ಹರಿಹರಪುರ–577120,**

ಚಿಕ್ಕಮಗಳೂರು ಜಿಲ್ಲೆ, ದೂರವಾಣಿ : 08265–274122

**MANDOOKYA PRAVACHANA** - Kannada, written by Vidwan N. Ranganatha Sharma, 896, 4th Main Road, Vijayanagara, Bangalore-560040. Published by **Swayamprakasha Granthamala, Adi Shankaracharya Sri Sharada Lakshmi Narasimha Peetha, "Sreematha", Hariharapura-577120,** Chikmagalur District. Ph. : 08265-274122



First Edition : 2006

Pages : ಟ + xxiv+200

Price : **Rs. 150/-**

Printed at :
**Parimala Mudranalaya**
Srinagar, Bangalore-560 050
Phone : 26525516/26529322

# ಮಾಂಡೂಕ್ಯ ಪ್ರವಚನ

## ಪರಿವಿಡಿ

ಶ್ರೀ

श्री श्री जगद्गुरु शङ्कराचार्य महासंस्थानम् दक्षिणाम्नाय श्री शारदापीठम् शृङ्गेरी

**PRIVATE SECRETARY**
To His Holiness Sri Jagadguru Shankaracharya
Dakshinamnaya Sri Sharada Peetham
**SRINGERI - 577139** (Karnataka)



Camp ಶೃಂಗೇರಿ
Ref D-1/ 2490
Date : 30.11.2005

## ಆಶೀರ್ವಚನ

ಭಾರತೀಯ ಸಂಸ್ಕೃತಿಗೆ ಸನಾತನ ಧರ್ಮಕ್ಕೆ ಮೂಲಭೂತವಾದವು ವೇದಗಳು. ವೇದಗಳ ಕೊನೆಯ ಭಾಗಕ್ಕೆ ಉಪನಿಷತ್ತು ಎಂದು ಹೆಸರು. ಅದರಿಂದಲೇ ಉಪನಿಷತ್ತುಗಳನ್ನು ವೇದಾಂತವೆಂದು ಹೇಳುತ್ತಾರೆ. ಆ ಉಪನಿಷತ್ತುಗಳು ಶತಾಧಿಕವಾಗಿದ್ದರೂ ಪ್ರಧಾನವಾಗಿ **'ಈಶ ಕೇನ ಕಠ ಪ್ರಶ್ನ ಮುಂಡ ಮಾಂಡೂಕ್ಯ ತಿತ್ತಿರಿಃ । ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯಕಂ ದಶ ॥'** ಎಂಬ ದಶೋಪನಿಷತ್ತುಗಳು ಅತ್ಯಂತ ಪ್ರಸಿದ್ಧವಾಗಿವೆ. ಅದ್ವೈತಾತ್ಮತತ್ತ್ವವೇ ಉಪನಿಷತ್ಪ್ರತಿಪಾದ್ಯವಾದುದು. ಅದರಲ್ಲಿಯೂ ಮಾಂಡೂಕ್ಯೋಪನಿಷತ್ತು ಅದ್ವೈತವನ್ನು ಕರತಲಾಮಲಕವಾಗಿ ಪ್ರತಿಪಾದಿಸುತ್ತಿದೆ. ಈ ದಶೋಪನಿಷತ್ತುಗಳಿಗೂ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರು ಅನವದ್ಯವಾದ ಭಾಷ್ಯಗಳನ್ನು ಬರೆದಿದ್ದಾರೆ. ಮಾಂಡೂಕ್ಯದ ಮತ್ತೊಂದು ವೈಶಿಷ್ಟ್ಯವೆಂದರೆ ಅದಕ್ಕೆ ವ್ಯಾಖ್ಯಾನರೂಪವಾಗಿ ಶ್ರೀಶಂಕರ ಭಗವತ್ಪಾದರ ಪರಮಗುರುಗಳಾದ ಗೌಡಪಾದಾಚಾರ್ಯರು ಕಾರಿಕೆಗಳನ್ನು ಬರೆದಿದ್ದಾರೆ. ಅವು ಮಾಂಡೂಕ್ಯಕಾರಿಕೆಗಳೆಂದು ಪ್ರಸಿದ್ಧವಾಗಿವೆ. ಈ ಕಾರಿಕೆಗಳು ಆಗಮ, ವೈತಥ್ಯ, ಅದ್ವೈತ, ಅಲಾತಶಾಂತಿ ಪ್ರಕರಣಗಳಾಗಿ ವಿಂಗಡಿಸಲ್ಪಟ್ಟಿವೆ. ಭಗವತ್ಪಾದರು ಮಾಂಡೂಕ್ಯೋಪನಿಷತ್ತಿಗೂ ಮತ್ತು ಈ ಕಾರಿಕೆಗಳಿಗೂ ರಮಣೀಯವಾದ ಭಾಷ್ಯವನ್ನು ಬರೆದಿದ್ದಾರೆ. ಈ ಭಾಷ್ಯವನ್ನು ಸರಿಯಾಗಿ ಅರ್ಥಮಾಡಿಕೊಂಡವರಿಗೆ ಅದ್ವೈತಸಿದ್ಧಾಂತದಲ್ಲಿ ಸಂಶಯಕ್ಕೆ ಅವಕಾಶವೇ ಇರುವುದಿಲ್ಲ.

**ವಿದ್ವಾನ್ ರಂಗನಾಥ ಶರ್ಮಾರು** ಈ ಭಾಷ್ಯವನ್ನು ಕನ್ನಡಕ್ಕೆ ಅನುವದಿಸಿ ಕನ್ನಡ ಜನತೆಗೆ ಮಹೋಪಕಾರವನ್ನು ಮಾಡಿದ್ದಾರೆ. ಈ ಅನುವಾದವನ್ನು ಶ್ರೀ ಜಗದ್ಗುರು ಮಹಾಸ್ವಾಮಿಗಳವರು ಅವಲೋಕಿಸಿ ತುಂಬಾ ಸಂತೋಷಪಟ್ಟಿದ್ದಾರೆ.

ಶ್ರೀ ಶಾರದಾ ಚಂದ್ರಮೌಳೀಶ್ವರರ ಕೃಪೆಯಿಂದ ಈ ಗ್ರಂಥವು ಅಧ್ಯಾತ್ಮ ಜಿಜ್ಞಾಸುಗಳಿಗೆ ಅತ್ಯಂತೋಪಾದೇಯವಾಗಿ ಅನುವಾದಕರ ಪರಿಶ್ರಮವು ಸಾರ್ಥಕವಾಗಲಿ ಎಂದು ಶ್ರೀ ಶ್ರೀ ಮಹಾಸ್ವಾಮಿಗಳವರು ಆಶೀರ್ವದಿಸಿದ್ದಾರೆ.

ಇಂತು

T. Dakshinamurthy

**ಶ್ರೀ ಆದಿಶಂಕರಾಚಾರ್ಯ ಶ್ರೀ ಶಾರದಾ–ಲಕ್ಷ್ಮೀನೃಸಿಂಹ ಪೀಠ**
**'ಶ್ರೀಮಠ', ಹರಿಹರಪುರ–577120,**
ಚಿಕ್ಕಮಗಳೂರು ಜಿಲ್ಲೆ, ದೂರವಾಣಿ : 08265–274122

**ಪೂಜ್ಯ ಶ್ರೀಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳವರು**

## ಆಶೀರ್ವಚನ

**ವಿಶ್ವದ ಅತ್ಯಂತ ಪ್ರಾಚೀನತಮವಾದ ಜ್ಞಾನನಿಧಿ ಎಂದರೆ ವೇದಗಳು.** ಈ ವೇದಗಳಲ್ಲಿ ಎರಡು ವಿಭಾಗಗಳಿವೆ. ಒಂದು ಕರ್ಮಕಾಂಡ, ಇನ್ನೊಂದು ಜ್ಞಾನಕಾಂಡ. ಕರ್ಮಕಾಂಡವು ಪ್ರಧಾನವಾಗಿ ಯಜ್ಞ–ಯಾಗಾದಿ ಕಾಮ್ಯ ಕರ್ಮಗಳ ಬಗ್ಗೆ ತಿಳಿಸಿದರೆ, ಜ್ಞಾನ ಕಾಂಡವು ಕೇವಲ ತತ್ತ್ವಭಾಗವನ್ನು ಮಾತ್ರ ತಿಳಿಸುತ್ತಿವೆ. ಈ ಜ್ಞಾನಕಾಂಡದ ಭಾಗವೆ ಉಪನಿಷತ್ತುಗಳು. ಈ ಉಪನಿಷತ್ತುಗಳು ಪರಮ ಪಾಪಿಯನ್ನೂ –ಪಾವನನನ್ನಾಗಿ, ಅಜ್ಞಾನಿಯನ್ನು ಜ್ಞಾನಿಯನ್ನಾಗಿ, ಬದ್ಧನನ್ನು–ಮುಕ್ತನನ್ನಾಗಿ ಮಾಡಿ ಮನುಷ್ಯನನ್ನು ಮರ್ತ್ಯಲೋಕದಿಂದ ಅಮೃತತ್ವಕ್ಕೆ ಏರಿಸುವ ಏಣಿಗಳಂತಿವೆ. ಸಕಲ ಚರಾಚರ ವಸ್ತುವಿನ ಹಿಂದೆ ಇರುವ ಅಖಂಡವಾದ ಮೂಲ ಚೈತನ್ಯವನ್ನು ಸಾಕ್ಷಾತ್ಕರಿಸಿಕೊಂಡು ಪ್ರತಿಯೊಬ್ಬ ಮನುಷ್ಯನಿಗೂ ನಿತ್ಯಶಾಂತಿಯನ್ನು ನೀಡುವುದೇ ಈ ಉಪನಿಷತ್ತುಗಳ ಗುರಿಯಾಗಿರುತ್ತದೆ. **ಇಂತಹ ಉಪನಿಷತ್ತುಗಳಲ್ಲಿ ಮಾಂಡೂಕ್ಯ ಉಪನಿಷತ್ತು ಕೂಡ ಒಂದು.** ''ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು'' ಎನ್ನುವಂತೆ ಕೇವಲ ಹನ್ನೆರಡೇ ಮಂತ್ರಗಳು ಈ ಉಪನಿಷತ್ತಿನಲ್ಲಿದ್ದರೂ, ತಾತ್ತ್ವಿಕ ದೃಷ್ಟಿಯಿಂದ ಈ ಉಪನಿಷತ್ತು ಅತ್ಯಂತ ಮುಖ್ಯವಾಗಿದೆ. ಆದ್ದರಿಂದಲೇ ಆದಿಶಂಕರರು ಮುಮುಕ್ಷುಗಳಿಗೆ ಮಾಂಡೂಕ್ಯ ಉಪನಿಷತ್ತು ಒಂದೇ ಸಾಕು ಎಂದು ಹೇಳಿರುತ್ತಾರೆ. ಹಾಗೆಯೇ ಇದರ ಮೇಲೆ ಭಾಷ್ಯವನ್ನು ಬರೆಯುವಾಗ ಇದನ್ನು **''ವೇದಾಂತಾರ್ಥ ಸಾರಸಂಗ್ರಹ''** ಎಂದು ಕರೆದಿರುತ್ತಾರೆ. ಆದಿಶಂಕರರ ಪರಮಗುರುಗಳಾದ ಗೌಡಪಾದಾಚಾರ್ಯರು ಈ ಉಪನಿಷತ್ತಿನ

ಮೇಲೆ ಕಾರಿಕೆಯೊಂದನ್ನು ಬರೆದಿರುತ್ತಾರೆ. ಸಾಮಾನ್ಯ ಜನರಿಗೆ ಈ ಕಾರಿಕೆಯನ್ನು ಯಥಾವತ್ತಾಗಿ ಅರ್ಥ ಮಾಡಿಕೊಳ್ಳುವುದು ಕಷ್ಟ ಸಾಧ್ಯವಾದ ವಿಚಾರವಾಗಿದೆ. ಇದನ್ನು ಮನಗಂಡು ನಮ್ಮ ಆತ್ಮೀಯ ಶಿಷ್ಯರೂ ಹಾಗೂ ದೇಶದಲ್ಲೇ ಅತ್ಯಂತ ಹಿರಿಯ ವಿದ್ವಾಂಸರಲ್ಲೊಬ್ಬರಾದ **''ವೇದಾಂತ ಸಾರತಿಲಕ'' ವಿದ್ವಾನ್ ರಂಗನಾಥಶರ್ಮಾರವರು** ಈ ಕಾರಿಕೆಯ ಮೇಲೆ ಕನ್ನಡದಲ್ಲಿ ಸರಳವಾಗಿ ಯಥಾರ್ಥ ರೀತಿಯಲ್ಲಿ ಅರ್ಥ ವಿವರಣೆಯನ್ನು ಬರೆದು ಭಗವಂತನ ಹಾಗೂ ಸದ್ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾಗಿರುತ್ತಾರೆ.

ಪರಮ ಶ್ರೇಯಸ್ಸನ್ನು ಹೊಂದಲು ಈ ಗ್ರಂಥದ ವಿಚಾರವು ಅತ್ಯಂತ ಸರಳ ಮಾರ್ಗವಾಗಿದ್ದು ಪ್ರತಿಯೊಬ್ಬರೂ ಸಹ ಇದರ ಉಪಯೋಗವನ್ನು ಪಡೆದುಕೊಳ್ಳಬೇಕು. ಈ ಗ್ರಂಥವನ್ನು ವಿಚಾರ ಮಾಡುವ ಸರ್ವರಿಗೂ ಯಥಾರ್ಥ ಜ್ಞಾನ ಸ್ಫುರಿಸಲೆಂದು ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದೇವೆ.

**ಇಂತಿ ನಾರಾಯಣ ಸ್ಮರಣಮ್**

# ಪ್ರಸ್ತಾವನೆ

ಮಾನವರೆಲ್ಲರೂ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ಅನುಭವಿಸುತ್ತಿದ್ದಾರೆ. ಗಂಡಸರು–ಹೆಂಗಸರು, ಶ್ರೀಮಂತರು–ಬಡವರು, ಆ ಜಾತಿಯವರು, ಈ ಜಾತಿಯವರು ಎಂಬ ಯಾವ ಭೇದವೂ ಇಲ್ಲ. ಎಲ್ಲರೂ ಈ ಮೂರು ಸ್ಥಿತಿಗಳನ್ನು ಪಡೆಯಲೇಬೇಕಾಗಿದೆ. ಪಶು, ಪಕ್ಷಿಗಳಿಗೂ ಸ್ವಪ್ನ, ಸುಷುಪ್ತಿಗಳಿರಬಹುದು. ಅದು ಹೇಗಾದರೂ ಆಗಲಿ, ಮಾನವರಿಗೆ ಈ ಅವಸ್ಥಾತ್ರಯವು ತಪ್ಪಿದ್ದಲ್ಲ.

ಜಾಗ್ರತ್ತಿನಲ್ಲಿ ನಮಗೆ ಪ್ರತ್ಯಕ್ಷವಾಗಿ ಸುಖಃದುಃಖಗಳ ಅನುಭವವಿದೆ. ಈ ಅವಸ್ಥೆಯಲ್ಲಿ ಕಾಣುವುದೆಲ್ಲವೂ ಸತ್ಯವೆಂದು ಜನರ ನಂಬಿಕೆ. ಜಾಗ್ರತ್ತಿನಲ್ಲಿ ಸುಖಃದುಃಖಗಳ ಭೋಗವು ಮಾನವರ ಹಣೆಬರಹ. ಜನ್ಮಾಂತರಗಳಲ್ಲಿ ಮಾಡಿದ ಕರ್ಮಗಳ ಫಲವನ್ನು ನಾವು ಅನುಭವಿಸುತ್ತೇವೆಂದು ಸಮಾಧಾನಪಟ್ಟುಕೊಳ್ಳ ಬಹುದು. ಆದರೆ ಸ್ವಪ್ನ, ಸುಷುಪ್ತಿಗಳ ಪರಿಸ್ಥಿತಿ ಏನು? ಸ್ವಪ್ನದಲ್ಲಿ ಕಾಣುವುದು ಜಾಗ್ರತ್ತಿನಲ್ಲಿ ಸುಳ್ಳಾಗುತ್ತದೆ. ಸುಷುಪ್ತಿಯಲ್ಲಿ ಏನೂ ತೋರುವುದೇ ಇಲ್ಲ. ಸ್ವಪ್ನ ವೆಂದರೆ ಕನಸು. ಸುಷುಪ್ತಿಯೆಂದರೆ ಗಾಢನಿದ್ರೆ. ಸುಳ್ಳಾದದ್ದು ಕನಸಿನಲ್ಲಿ ಕಾಣುತ್ತದೆ. ಕನಸಿನ ಸಮಯದಲ್ಲಿ ಅದೆಲ್ಲವೂ ಸತ್ಯವಾಗಿಯೇ ತೋರುತ್ತದೆ. ಈ ಕನಸು ಬೀಳಲು ನಿಮಿತ್ತವೇನು?

ಜಾಗ್ರತ್ತಿನಲ್ಲಿ ಯಾವುದನ್ನು ಕಂಡಿದ್ದೇವೋ ನೋಡಿದ್ದೇವೋ ಅನುಭವಿಸಿದ್ದೇವೋ ಅದು ಕನಸಿನಲ್ಲಿ ಕಾಣುತ್ತದೆ. ಎಂಬುದು ಭಾಗಶಃ ಸರಿ. ಆದರೆ ಸಂಗತಿಯೆಲ್ಲವೂ ವಿಚಿತ್ರವಾಗಿರುತ್ತದೆ. ಸತ್ತವನು ಬದುಕಿದಂತೆ, ಬದುಕಿ ದವನು ಸತ್ತಂತೆ ಕಾಣಬಹುದು. ಹುಲಿಯ ನಮ್ಮನ್ನು ಅಟ್ಟಿಸಿಕೊಂಡು ಬಂದಂತೆ ಕಾಣಬಹುದು. ಜಾಗ್ರತ್ತಿನಲ್ಲಿ ಎಂದೂ ಅಟ್ಟಿಸಿಕೊಂಡು ಬಂದಿರುವುದಿಲ್ಲ. ಇನ್ನೊಬ್ಬನನ್ನು ಅಟ್ಟಿಸಿಕೊಂಡು ಹೋದ ಕಥೆಯನ್ನು ಈತನು ಕೇಳಿರಬಹುದು. ಹುಲಿಯನ್ನು ಜಾಗ್ರತ್ತಿನಲ್ಲಿ ಎಲ್ಲಾದರೂ ನೋಡಿರಬಹುದು. ನೋಡದೆಯೂ ಇರ ಬಹುದು. ಹುಲಿ ಹೇಗಿರುತ್ತದೆ ಎಂಬುದನ್ನು ಚಿತ್ರದಲ್ಲಾದರೂ ನೋಡಿರುತ್ತಾನೆ. ಕಾಗೆಯಂತೆ ತಲೆಯಿರುವ ಮನುಷ್ಯನು ಕನಸಿನಲ್ಲಿ ಕಾಣಬಹುದು. ಕಾಗೆಯನ್ನೂ ಮನುಷ್ಯನನ್ನೂ ಈತನು ಜಾಗ್ರತ್ತಿನಲ್ಲಿ ಕಂಡಿರುತ್ತಾನೆ. ಹೀಗೆ ಬಿಡಿ ಬಿಡಿಯಾದ ವಸ್ತುಗಳ ಸ್ವರೂಪವನ್ನು ಕಂಡದ್ದರಿಂದಾದ ಸಂಸ್ಕಾರವು ಆಯಾ ವಸ್ತುಗಳ ಸ್ಮರಣೆಗೆ ನಿಮಿತ್ತವಾದರೂ ಅವುಗಳ ವಿಚಿತ್ರ ಸಂಘಟನೆಯು ಮಾತ್ರ ಅನುಭವಕ್ಕೆ

ಬಂದದ್ದಲ್ಲ. ಇದೆಲ್ಲವೂ ಕನಸಿನ ಸ್ವರೂಪವಾಯಿತೇ ಹೊರತು ಅಂತಹ ಕನಸಾದರೂ ಏಕೆ ಉಂಟಾಗಬೇಕು? ಎಂಬ ಪ್ರಶ್ನೆಗೆ ಉತ್ತರವಾಗಲಿಲ್ಲ. ಜಾಗ್ರತ್ತು, ಸುಷುಪ್ತಿ ಈ ಎರಡೇ ಅವಸ್ಥೆಗಳಿರಲಿ; ಸುಳ್ಳು ಸುಳ್ಳಾದ ಸ್ವಪ್ನವೇಕೆ ಇರಬೇಕು? ಸ್ವಪ್ನವಿಲ್ಲದೇ ಹೋದರೆ ಲೋಕಜೀವನಕ್ಕೆ ಬಾಧೆ ಏನೂ ಇಲ್ಲ. ಇನ್ನು ಸುಷುಪ್ತಿ–ಗಾಢನಿದ್ರೆಯ ವಿಷಯಃ– ದಣಿದಿರುವ ದೇಹಕ್ಕೆ ಗಾಢನಿದ್ರೆಯಿಂದ ವಿಶ್ರಾಂತಿ ಲಭಿಸುತ್ತದೆಯೆಂದೂ ಲೋಕದ ಯಾವ ಚಿಂತೆಯೂ ಇಲ್ಲದ್ದರಿಂದ ಮನಸ್ಸಿಗೂ ಶಾಂತಿಯುಂಟಾಗಿ ಸುಖವೆನಿಸುತ್ತದೆಯೆಂದೂ ಆದ್ದರಿಂದ ಗಾಢನಿದ್ರೆ ಆವಶ್ಯಕವೆಂದೂ ಎಲ್ಲರೂ ಹೇಳುತ್ತಾರೆ. ವಿಶ್ರಾಂತಿ ಬೇಕಾದರೆ ಕೆಲವು ಸಮಯದ ವರೆಗೆ ಸುಮ್ಮನೆ ಮಲಗಿರಬಹುದಲ್ಲವೆ? ಅಷ್ಟು ವಿಶ್ರಾಂತಿ ಕೈಕಾಲುಗಳಿಗೆ ಸಾಕಾಗುತ್ತದೆ. ನಮ್ಮ ಹೃದಯವೂ ಶ್ವಾಸಕೋಶವೂ ವಿಶ್ರಾಂತಿಯಿಲ್ಲದೆ ಅಹೋರಾತ್ರವೂ ದುಡಿಯುತ್ತವೆಯಲ್ಲ? ಹುಟ್ಟಿದ ಲಾಗಾಯ್ತು ಸಾಯುವವರೆಗೆ ಒಂದೇ ಸಮನಾಗಿ ಅವು ಕೆಲಸ ಮಾಡುತ್ತವೆ. ನಮ್ಮ ದೇಹ ದೊಳಗಡೆ ಯಾವ ಅಂಗಕ್ಕೂ ವಿಶ್ರಾಂತಿ ಇಲ್ಲ. ಜೀರ್ಣಾಂಗಗಳು ಕೆಲಸ ಮಾಡುತ್ತಲೇ ಇರುತ್ತವೆ. ರಕ್ತವು ಸಂಚರಿಸುತ್ತದೆ. ಈ ಪ್ರಕಾರವಾಗಿ ಅವು ಸತತವೂ ಕ್ರಿಯೆಯನ್ನು ನಡೆಸುತ್ತಲೇ ಇದ್ದರೂ ಅವುಗಳಿಗೆ ವಿಶ್ರಾಂತಿ ಬೇಕಾಗುವುದಿಲ್ಲ. ಹೀಗಿರುವಾಗ ಕೈ ಕಾಲುಗಳಿಗೆ ಮಾತ್ರ ಏಕೆ ದಣಿವು ಸಂಭವಿಸಬೇಕು? ನಿದ್ರೆಯಲ್ಲಿ ಮನಸ್ಸು ಶಾಂತವಾಗಿರುತ್ತದೆಯೆಂಬುದೇನೋ ಹೌದು. ಅಂತಹ ಶಾಂತಿಯಾದರೂ ಏಕೆ ಬೇಕಾಗುತ್ತದೆ? ಹಗಲಿನಲ್ಲಿ ಒಂದೇ ವಿಷಯವನ್ನು ಆಲೋಚಿಸುತ್ತಿದ್ದರೆ ಮನಸ್ಸಿಗೆ ಬೇಸರ ಹುಟ್ಟುತ್ತದೆ. ವಿಷಯಾಂತರಕ್ಕೆ ಹೋದಾಗ ಬೇಸರವಿರುವುದಿಲ್ಲ. ವಿನೋದವನ್ನು ಅನುಭವಿಸಿದರೂ ಮನಸ್ಸಿನ ಆಯಾಸ ಕಡಿಮೆಯಾಗುತ್ತದೆ. ಈ ಪ್ರಕಾರ ರಾತ್ರಿಯ ಹೊತ್ತು ಬೇಸರವನ್ನು ಕಳೆದುಕೊಳ್ಳಲಿ! ಕೆಲವರಿಗೆ ನಿದ್ರೆಯೇ ಬರುವುದಿಲ್ಲ. ರಾತ್ರಿ ಎಲ್ಲರೂ ಮಲಗಿದಾಗ ಇವರು ಸುಮ್ಮನೇ ಮಲಗಿರುತ್ತಾರೆ. ಅಂತಹವರನ್ನು ನಾನು ಸ್ವತಃ ನೋಡಿದ್ದೇನೆ. ಅವರ ಆರೋಗ್ಯದಲ್ಲಿ ಯಾವ ಕೊರತೆಯೂ ಇರಲಿಲ್ಲ. ಹೃದಯ ಮತ್ತು ಶ್ವಾಸಕೋಶಗಳು ಸತತವಾಗಿ ದುಡಿದರೂ ಹೇಗೆ ಆಯಾಸಗೊಳ್ಳುವುದಿಲ್ಲವೋ ನಾವು ನಿದ್ರಿಸುವಾಗಲೂ ಅವು ಹೇಗೆ ತಮ್ಮ ಕಾರ್ಯದಲ್ಲಿ ತೊಡಗಿರುತ್ತವೆಯೋ ಹಾಗೆ ಮನುಷ್ಯನಿಗೆ ನಿದ್ರೆಯೇ ಇಲ್ಲದೆ ಏಕೆ ಇರಬಾರದು? ನಿದ್ರೆಯಿಲ್ಲದಿದ್ದರೆ ಮನುಷ್ಯನ ಆರೋಗ್ಯವು ಕೆಡುತ್ತದೆಯೆಂಬುದೂ ನಿಶ್ಚಯ. ಆದರೆ ಹಾಗೇಕೆ ಆಗಬೇಕು? ಎನ್ನುವುದು ನನ್ನ ಪ್ರಶ್ನೆಯಾಗಿದೆ. ಉತ್ತಮ ಜಾತಿಯ ಕುದುರೆಗಳು ಮಲಗುವುದೇ ಇಲ್ಲವೆಂದೂ ನಿಂತುಕೊಂಡೇ ತೂಕಡಿಸುತ್ತವೆಯೆಂದೂ ಕೇಳಿದ್ದೇನೆ. ಜನ್ಮಾವಧಿ ನಿಂತುಕೊಂಡು

ಇದ್ದರೆ ಅವುಗಳ ಕಾಲುಗಳು ಸೋಲುವುದಿಲ್ಲವೆ? ಯಾವ ಪ್ರಾಣಿಗಳಿಗೂ ಇಲ್ಲದ ವಿಶೇಷ ಕುದುರೆಗಳಲ್ಲೇಕಿದೆ? ಇರಲಿ, ಸುಷುಪ್ತಿಯಿಂದ ಪ್ರಯೋಜನವಿದೆಯೆಂದು ಒಪ್ಪಿದರೂ ಕನಸುಗಳಿಂದ ಪ್ರಯೋಜನವೇನು? ಆಗ ಮನಸ್ಸಿಗೂ ವಿಶ್ರಾಂತಿ ಇರುವುದಿಲ್ಲವಷ್ಟೆ? ಎಂಬ ಪ್ರಶ್ನೆ ನಿರುತ್ತರವಾಗಿಯೇ ಉಳಿಯುತ್ತದೆ. ಆಧುನಿಕ ವಿಚಾರವಾದಿಗಳಿಂದಲೂ ಮನಃಶಾಸ್ತ್ರಜ್ಞರಿಂದಲೂ ನನಗೆ ಸಮರ್ಪಕವಾದ ಉತ್ತರ ದೊರೆಯಲಿಲ್ಲ.

ವೈಶೇಷಿಕ, ನ್ಯಾಯ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ ದರ್ಶನಗಳಲ್ಲಿಯೂ ಅವಸ್ಥಾತ್ರಯ ವಿಚಾರವಿಲ್ಲ. ಅಥವಾ ಅದಕ್ಕೆ ಯಾವ ಪ್ರಾಧಾನ್ಯವೂ ದೊರೆತಿಲ್ಲ. ಬೌದ್ಧ, ಜೈನ ದರ್ಶನಗಳೂ ಆ ವಿಚಾರವನ್ನು ಸ್ಪರ್ಶಿಸಿಲ್ಲ. ಪಾಶ್ಚಾತ್ಯ ದರ್ಶನಕಾರರೂ ಅದನ್ನು ಉಪೇಕ್ಷಿಸಿದ್ದಾರೆ. ಮಾನವ ಜೀವನದಲ್ಲಿ ನಿಯತವಾಗಿ ಸೇರಿ ಹೋಗಿರುವ ಈ ಅವಸ್ಥಾತ್ರಯದ ಪರೀಕ್ಷೆ ಆವಶ್ಯಕವೆಂದು ಅವರಿಗೇಕೆ ಹೊಳೆಯಲಿಲ್ಲವೋ ಎಂಬುದೊಂದು ಕುತೂಹಲದ ವಿಷಯ.

ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ಅವಸ್ಥಾತ್ರಯದ ಪರೀಕ್ಷೆಗೆ ಕೈಹಾಕಿದವರು ವೇದಾಂತಿಗಳು. **''ಜಾಗ್ರತ್ ಸ್ವಪ್ನ ಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ''** ಎಂದು ದಕ್ಷಿಣಾಮೂರ್ತಿ ಸ್ತೋತ್ರದಲ್ಲಿದೆ. ಶಾರೀರಕ ಸೂತ್ರಗಳಲ್ಲಿಯೂ **''ಸ್ವಾಪ್ಯಯಾತ್''** (೧-೧-೯) ಎಂಬಲ್ಲಿ ಸುಷುಪ್ತಿಯು ವಿಚಾರ ಬಂದಿದೆ. ಛಾಂದೋಗ್ಯೋಪನಿಷತ್ತಿನಲ್ಲಿಯೂ **''ಯತ್ರೈತತ್ ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯತದಾ ಸಂಪನ್ನೋ ಭವತಿ''** (ಛಾಂ. ೬-೮-೧) ಎಂಬಲ್ಲಿ ಸುಷುಪ್ತಿಯ ವಿಚಾರವಿದೆ. ಇತರ ಉಪನಿಷತ್ತುಗಳಲ್ಲಿಯೂ ಅಲ್ಲಲ್ಲಿ ಅವಸ್ಥಾತ್ರಯವು ಪ್ರಸ್ತುತವಾಗಿದೆ. ಜಾಗ್ರತ್ ಸ್ವಪ್ನಸುಷುಪ್ತಿಗಳನ್ನು ಪ್ರಧಾನವಾಗಿ ಪ್ರಸ್ತುತಗೊಳಿಸಿರುವುದು **ಮಾಂಡೂಕ್ಯೋಪನಿಷತ್ತು.**

ಅವಸ್ಥಾತ್ರಯದ ಪರಾಮರ್ಶೆಗೆ ಮೀಸಲಾದ ಉಪನಿಷತ್ತು ಇದು. ಈ ಉಪನಿಷತ್ತಿನಲ್ಲಿ ಹನ್ನೆರಡು ಮಂತ್ರಗಳಿವೆ. ಎಲ್ಲವೂ ಅವಸ್ಥಾತ್ರಯಕ್ಕೆ ಸಂಬಂಧಿಸಿದವೇ. ಆದ್ದರಿಂದ ಈ ಉಪನಿಷತ್ತು ನನ್ನನ್ನು ವಿಶೇಷವಾಗಿ ಆಕರ್ಷಿಸಿತು. ಇದರ ಅಧ್ಯಯನವು ಸುಲಭವಾಗಲಿಲ್ಲ. ಶಬ್ದಾರ್ಥವು ತಿಳಿದರೂ ತಾತ್ಪರ್ಯವು ತಿಳಿಯದಾಯಿತು. ಕಬ್ಬಿಣದ ಕಡಲೆಯಂತಿದೆ ಈ ಉಪನಿಷತ್ತು. ಇದನ್ನು ಅಧ್ಯಯನ ಮಾಡಲು ತೊಡಗಿದಾಗ ಕತ್ತಲೆಯ ಮನೆಯನ್ನು ಪ್ರವೇಶಿಸಿದಂತಾಯಿತು. ಗುರುಗಳ ಬೋಧನೆಯಿಂದ ಬೆಳಕು ಬಿದ್ದರೂ ಸ್ಥೂಲವಾಗಿ ತಾತ್ಪರ್ಯವು ತಿಳಿಯಿತೇ ಹೊರತು ಅದರ ಮರ್ಮವು ಹೃದಯಕ್ಕೆ ನಾಟಲಿಲ್ಲ. ವಿಷಯದ ಗಾಂಭೀರ್ಯ ಅಂತಹದು. ಈ ಉಪನಿಷತ್ತಿನ ವಾಕ್ಯಗಳು ಸೂತ್ರರೂಪವಾಗಿವೆ.

**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।**
**ಅಸ್ತೋಭ್ಯಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥**

ಎಂದು ಪರಾಶರೋಪಪುರಾಣದಲ್ಲಿ ಸೂತ್ರ ಲಕ್ಷಣವನ್ನು ಹೇಳಿದ್ದಾರೆ. ಈ ಲಕ್ಷಣದಲ್ಲಿ ಅಸಂದಿಗ್ಧವೆಂದರೆ 'ಸೂತ್ರದ ಯಥಾಶ್ರುತವಾದ ವಾಕ್ಯದ ಅರ್ಥವು ಅಸಂದಿಗ್ಧ ಎಂದು ಅಭಿಪ್ರಾಯವಲ್ಲ. ಸೂತ್ರದಿಂದ ಬೋಧ್ಯವಾದ ಪ್ರಮೇಯವು ನಿಶ್ಚಿತವಾದದ್ದು, ಸಿದ್ಧಾಂತಸ್ವರೂಪವಾದದ್ದು, ಪ್ರಾಮಾಣ್ಯದಲ್ಲಿ ಸಂಶಯಕ್ಕೆ ಎಡೆಯಿಲ್ಲದ್ದು ಎಂದು ಅಭಿಪ್ರಾಯ.

ಈ ಮಾಂಡೂಕ್ಯೋಪನಿಷತ್ತಿನಲ್ಲಿ, ಹಿಂದೆ ಹೇಳಿದ ಚಿಂತನೆಗೆ ಸಮಾಧಾನಕರ ವಾದ ಉತ್ತರವಿದೆಯೆಂದು ಈ ಉಪನಿಷತ್ತನ್ನು ದೃಢವಾಗಿ ವ್ಯಾಸಂಗ ಮಾಡಬೇಕಾಯಿತು. ಈ ಉಪನಿಷತ್ತಿನ ಪ್ರಮೇಯವು ಸುಲಭವಾಗಿ ದಕ್ಕು ವಂತಹುದಲ್ಲ. ಎಷ್ಟು ವಿವರಣೆಯನ್ನಿತ್ತರೂ ಸಾಲದು ಎನ್ನಿಸುತ್ತದೆ. ಶ್ರೀ ಗೌಡಪಾದಾಚಾರ್ಯರು ಅರ್ಥವಿವರಣೆಗಾಗಿ ಕಾರಿಕೆಗಳನ್ನು ರಚಿಸಿದರು. ಗಂಭೀರಾರ್ಥಮುದ್ರಿತವಾದ ಈ ಕಾರಿಕೆಗಳು ಅದ್ವೈತ ಸಿದ್ಧಾಂತವನ್ನು ವಿವರಿಸುವ ಪ್ರಮಾಣಭೂತವಾದ ಗ್ರಂಥ. ಮಾಂಡೂಕ್ಯೋಪನಿಷತ್ತನ್ನು ಗೌಡಪಾದರ ಕಾರಿಕೆಗಳನ್ನೂ ಸೇರಿಸಿ ಗೌಡಪಾದರ ಪ್ರಶಿಷ್ಯರಾದ ಶ್ರೀ ಶಂಕರಭಗವತ್ಪಾದರು ವಿಸ್ತೃತವಾದ ಭಾಷ್ಯವನ್ನು ಬರೆದರು. ಅದೂ ಸಾಲದೆಂದು ಆನಂದಗಿರಿಯವರು ಭಾಷ್ಯಕ್ಕೆ ವ್ಯಾಖ್ಯಾನ ರಚಿಸಿ ಭಾಷ್ಯಾರ್ಥವನ್ನು ವಿವರಿಸಿದರು. ಆದರೂ ಮಾಂಡೂಕ್ಯೋಪನಿಷತ್ತಿನ ಮತ್ತು ಗೌಡಪಾದಕಾರಿಕೆಗಳ ಬಿಗಿ ಪೂರ್ತಿಯಾಗಿ ಸಡಿಲವಾಗದೆ ಕೆಲವು ಗ್ರಂಥ ಗ್ರಂಥಿಗಳು ಉಳಿದುಕೊಂಡವು. ಆದ್ದರಿಂದ ಹೊಳೆನರಸೀಪುರದ ಪೂಜ್ಯ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು **'ಮಾಂಡೂಕ್ಯ ರಹಸ್ಯವಿವೃತಿ'** ಎಂಬ ನೂತನವಾದ ವ್ಯಾಖ್ಯಾನವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾರೆ. ಆ ಗ್ರಂಥಕ್ಕೆ ಶ್ರೀ ಶ್ರೀಗಳವರೇ ಉದ್ಬೋಧಕವಾದ ಒಂದು ಉಪೋದ್ಘಾತವನ್ನು (Introduction) ಇಂಗ್ಲೀಷ್ ಭಾಷೆಯಲ್ಲಿ ಬರೆದು ಸೇರಿಸಿದ್ದಾರೆ.

ಉಪನಿಷತ್ತುಗಳಲ್ಲಿ ಅತ್ಯಂತ ಚಿಕ್ಕದಾದ ಮಾಂಡೂಕ್ಯೋಪನಿಷತ್ತಿಗೆ ಇಷ್ಟೊಂದು ಪುರಸ್ಕಾರವು ಸಲ್ಲಲು ಕಾರಣವೇನು? ಕಾರಣ ಉಂಟು. ಈ ಉಪನಿಷತ್ತು ಅವಸ್ಥಾತ್ರಯ ಪರೀಕ್ಷಾದ್ವಾರಾ **'ಅಹಂ ಬ್ರಹ್ಮಾಸ್ಮಿ'** ಎಂಬ ಅದ್ವೈತ ಸಿದ್ಧಾಂತವನ್ನು ಅನುಭವಕ್ಕೆ ತಂದು ತೋರಿಸುತ್ತದೆ. ಅದ್ವೈತ ಸಿದ್ಧಾಂತವು ಮನದಟ್ಟಾಗುವುದು ಬಹಳ ಕಠಿಣ. ದ್ವೈತಮಯವಾದ ಈ ಪ್ರಪಂಚದಲ್ಲಿ

ದ್ವೈತವು ಸರ್ವತ್ರ ಕಣ್ಣೆದುರಿಗೆ ಕುಣಿಯುತ್ತಿರುವಾಗ ಅದು ಮಿಥ್ಯೆಯೆಂದು ತೋರಿಸಿಕೊಡುವ ಬಗೆ ಯಾವುದು? **'ನೀನು ಪರಮಾತ್ಮನೇ ಆಗಿದ್ದೀಯೆ'** ಎಂದು ಬೋಧಿಸಿದರೆ ಯಾರಿಗೂ ನಂಬಿಕೆ ಹುಟ್ಟದು. ಆದ್ದರಿಂದಲೇ ಉದ್ದಾಲಕ ಮಹರ್ಷಿಯು ಛಾಂದೋಗ್ಯೋಪನಿಷತ್ತಿನಲ್ಲಿ ತನ್ನ ಮಗನಾದ ಶ್ವೇತಕೇತುವಿಗೆ ಒಂಬತ್ತು ಸಲ **''ತತ್ತ್ವಮಸಿ''** ಎಂದು ಉಪದೇಶಿಸಬೇಕಾಯಿತು. (ಛಾಂ. ೬-೧೫) ಬೃಹದಾರಣ್ಯಕದ **''ಬ್ರಹ್ಮೇದಂ ಸರ್ವಂ''** ಎಂಬ ನುಡಿ ಕ್ರಮವಾಗಿ ಹದಿನಾಲ್ಕು ಮಂತ್ರಗಳಲ್ಲಿ ಬಂದಿದೆ. (ಬೃ. ೨-೫) ಇವೆಲ್ಲವೂ ಉಪದೇಶ ಗಳಾದವು. ಇವು ಕೇವಲ ಶಬ್ದಪ್ರಮಾಣಗಳು. ಮಾಂಡೂಕ್ಯವು ಅನುಭವಪರ್ಯವಸಾಯಿಯಾಗಿ ಮಾಡಿ, ಅದ್ವೈತವನ್ನು ಸಾಕ್ಷಾತ್ಕರಿಸಿ ಕೊಡುತ್ತದೆ. ಆದ್ದರಿಂದಲೇ **'ಮಾಂಡೂಕ್ಯಮೇಕಮೇವಾಲಂ ಮುಕ್ತಯೇ'** ಮೋಕ್ಷವನ್ನು ಗಳಿಸುವುದಕ್ಕೆ ಮಾಂಡೂಕ್ಯೋಪನಿಷತ್ತು ಒಂದೇ ಸಾಕು ಎಂಬ ಪ್ರಶಂಸಾವಾಕ್ಯವು ಮುಕ್ತಿಕೋಪನಿಷತ್ತಿನಲ್ಲಿದೆ.

ಶ್ರೀ ಶಂಕರಾಚಾರ್ಯರು ತರ್ಕದ ವಿಷಯವಾಗಿ ತಮ್ಮ ಭಾಷ್ಯಗಳಲ್ಲಿ ಶ್ರುತಿಗೂ ಅನುಭವಕ್ಕೂ ಹೊಂದುವ ತರ್ಕವು ಪ್ರಮಾಣವೆಂದೂ ಶ್ರುತ್ಯನುಭವಗಳಿಗೆ ಹೊಂದದ ತರ್ಕವು ಪ್ರಮಾಣವಲ್ಲವೆಂದೂ ಅನೇಕ ಕಡೆಗಳಲ್ಲಿ ಬರೆದಿದ್ದಾರೆ. ಶ್ರುತಿಯನ್ನು ಸಹ ಉಪೇಕ್ಷಿಸಿ ಕೇವಲ ತರ್ಕವನ್ನೇ ಹಿಡಿದು ವಾದಿಸತಕ್ಕವರನ್ನು ಶುಷ್ಕ ತಾರ್ಕಿಕರೆಂದು ನಿಂದಿಸಿದ್ದಾರೆ.

ಕಾರಿಕಾಸಹಿತವಾದ ಮಾಂಡೂಕ್ಯೋಪನಿಷತ್ತಿಗೆ ಶ್ರೀ ಶಂಕರಾಚಾರ್ಯರು ವಿಶಿಷ್ಟವಾದ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಭಾಷ್ಯದ ಆರಂಭದಲ್ಲಿ ದೀರ್ಘವಾದ ಎರಡು ವೃತ್ತಗಳಿಂದ ಪರಬ್ರಹ್ಮವನ್ನು ನಮಿಸಿ ಸಮಾಪ್ತಿಯಲ್ಲಿಯೂ ಮೂರು ದೊಡ್ಡ ಶ್ಲೋಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಒಂದು ಪರಬ್ರಹ್ಮಸ್ತುತಿ. ಒಂದು ತಮ್ಮ ಪರಮಗುರುಗಳೂ ಕಾರಿಕಾಕರ್ತೃಗಳೂ ಆದ ಶ್ರೀ ಗೌಡಪಾದಾಚಾರ್ಯ ರಿಗೆ ಸಂದ ವಂದನೆಗಳು. ಇನ್ನೊಂದು ತಮ್ಮ ಸಾಕ್ಷಾತ್ ಗುರುಗಳಾದ ಶ್ರೀ ಗೋವಿಂದ ಭಗವತ್ಪಾದರಿಗೆ ಅರ್ಪಿಸಿದ ವಂದನೆ.

ಶ್ರೀ ಗೌಡಪಾದರನ್ನು ಸ್ತುತಿಸಿದ ಪ್ರಕಾರ ಇದು.

**ಪ್ರಜ್ಞಾವೈಶಾಖಮಂಥಕ್ಷುಭಿತಜಲನಿಧೇರ್ವೇದನಾಮ್ನೋಽಂತರಸ್ಥಂ**
**ಭೂತಾನ್ಯಾಲೋಕ್ಯಮಗ್ನಾನ್ಯವಿರತ ಜನನಗ್ರಾಹಘೋರೇ ಸಮುದ್ರೇ ।**
**ಕಾರುಣ್ಯಾದುದ್ಧರಾಮೃತಮಮರೈರ್ದುರ್ಲಭಂ ಭೂತಹೇತೋಃ**
**ಯಸ್ತಂ ಪೂಜ್ಯಾಭಿಪೂಜ್ಯಂ ಪರಮಗುರುಮಹಂ ಪಾದಪಾತೈರ್ನತೋಽಸ್ಮಿ ॥**

ಇದರ ತಾತ್ಪರ್ಯ –

''ಹುಟ್ಟು, ಸಾವುಗಳೆಂಬ ಮೊಸಳೆಗಳಿಂದ ಘೋರವಾದ ಸಂಸಾರಸಾಗರದಲ್ಲಿ ಮುಳುಗಿ ಹೋದ ಜೀವಿಗಳನ್ನು ಕಂಡು ನಮ್ಮ ಪರಮ ಗುರುಗಳಾದ ಶ್ರೀ ಗೌಡಪಾದಾಚಾರ್ಯರಿಗೆ ಕಾರುಣ್ಯ ಉಂಟಾಯಿತು. ಅವರು ತಮ್ಮ ಪ್ರಜ್ಞಾಶಕ್ತಿಯೆಂಬ ಮಂಥನದಂಡದಿಂದ ವೇದವೆಂಬ ಮಹಾಸಾಗರವನ್ನು ಕಡೆದು ಬ್ರಹ್ಮಜ್ಞಾನವೆಂಬ ಈ ಅಮೃತವನ್ನು ತೆಗೆದುಕೊಟ್ಟಿದ್ದಾರೆ. ಈ ಅಮೃತವು ಕ್ಷೀರಸಾಗರವನ್ನು ಕಡೆದ ದೇವತೆಗಳಿಗೂ ಸಿಗಲಿಲ್ಲ! ಈ ಅಮೃತವನ್ನು ತೆಗೆದದ್ದು ಸಮಸ್ತ ಜೀವಿಗಳ ಹಿತಕ್ಕಾಗಿ. ಇಂತಹ ಪರಮಪೂಜ್ಯರೂ ನನ್ನ ಗುರುಗಳಿಗೆ ಗುರುಗಳೂ ಆದ ಪರಮ ಗುರುಗಳ ಪಾದಗಳಿಗೆ ಮತ್ತೆ ಮತ್ತೆ ಅಡ್ಡಬಿದ್ದು ನಮಸ್ಕರಿಸುತ್ತೇನೆ!''

ದೇವತೆಗಳು ಸ್ವಾರ್ಥಿಗಳು. ತಮಗಾಗಿ ಅಮೃತವನ್ನು ಕಡೆದು ತೆಗೆದರು. ಜೊತೆಯಲ್ಲಿ ಕಷ್ಟಪಟ್ಟ ಅಸುರರನ್ನೂ ವಂಚಿಸಿದರು! ಅದು ಹೆಸರಿಗೆ ಅಮೃತ. ದೇವತೆಗಳಿಗೂ ಮರಣ ಉಂಟು. ನಮ್ಮ ಪರಮಗುರುಗಳು ಕಡೆದು ತೆಗೆದ ಅಮೃತವು ಸಕಲ ಜೀವಿಗಳ ಉಪಯೋಗಕ್ಕಾಗಿ; ಈ ಅಮೃತವನ್ನು ಪಾನ ಮಾಡಿದರೆ ಪುನರಾವೃತ್ತಿಯೇ ಇಲ್ಲ ಎಂದು ಆಶಯ.

ಅಮೃತವೆನಿಸಿದ ಈ ಬ್ರಹ್ಮಪದವಾದರೋ, ಶ್ರೀ ಗೌಡಪಾದರೇ ಹೇಳುವಂತೆ, **''ದುರ್ದರ್ಶಮತಿಗಂಭೀರಮ್''.**

ಇಷ್ಟು ದುರವಗಾಹವಾದ ವಿಷಯದಲ್ಲಿ **'ಮಾಂಡೂಕ್ಯ ಪ್ರವಚನ'**ವೆಂಬ ಈ ಗ್ರಂಥವನ್ನು ನಾನು ಆರಂಭಿಸುತ್ತಿರುವುದು ಸಾಹಸದ ಕಾರ್ಯವೆಂದು ನನಗೆ ಅನ್ನಿಸಿದೆ. **'ಸ್ವಬೋಧಪರಿಶುದ್ಧಯೇ'** ನನ್ನ ಮುಖ್ಯವಾದ ಉದ್ದೇಶ. ಸಂಸ್ಕೃತ ಭಾಷೆಯಲ್ಲಿ ಅಧಿಕ ಪರಿಶ್ರಮವಿಲ್ಲದಿದ್ದರೂ ವೇದಾಂತವನ್ನು ಅಭ್ಯಾಸ ಮಾಡಲು ತೊಡಗಿರುವ ಸಾಮಾನ್ಯ ಜನರಿಗೆ ಅವಸ್ಥಾತ್ರಯ ಪರೀಕ್ಷೆಯ ಅವಶ್ಯಕತೆಯನ್ನು ತೋರಿಸಿ ಕೊಡಬೇಕೆಂದು ಇನ್ನೊಂದು ಉದ್ದೇಶ.

## ಅವಸ್ಥಾತ್ರಯ ವಿಚಾರ

ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯದ ವಿಚಾರವು ಮಾಂಡೂಕ್ಯೋಪನಿಷತ್ತಿನ ಮುಖ್ಯ ಉದ್ದೇಶವಾಗಿದ್ದು, ಇದು ಇತರ ಉಪನಿಷತ್ತುಗಳಲ್ಲಿ ಕಂಡುಬರುವುದಾದರೂ ಸ್ವಲ್ಪ ಮಾತ್ರವೇ. ಅಧ್ಯಾರೋಪಾಪವಾದ ಪ್ರಕ್ರಿಯೆ, ಅವಸ್ಥಾತ್ರಯ ಪರೀಕ್ಷಾ ಪ್ರಕ್ರಿಯೆ – ಇವೆರಡೇ ಪ್ರಪಂಚೋಪಶಮವೂ ಅದ್ವೈತವೂ ಶಾಂತವೂ ಆದ ಪರಬ್ರಹ್ಮವೆಂಬ ಪರಮಾರ್ಥ ತತ್ತ್ವವನ್ನರಿಯಲು ಪ್ರಧಾನವಾದ ಸಾಧನಗಳು.

ಈ ಉಪನಿಷತ್ತಿನಲ್ಲಿ ಮತಾಂತರದವರಿಗೆ ಬೇಕಾದ, ಅವರನ್ನೇ ಉಪಕರಿಸುವ ವಿಷಯವಿಲ್ಲದ್ದರಿಂದ ಆ ಜನರು ಇದನ್ನು ಉಪೇಕ್ಷಿಸಿರಬಹುದು. ಮಾಂಡೂಕ್ಯವು ಉಪನಿಷತ್ತೇ ಅಲ್ಲವೆನ್ನುವವರೆಗೂ ಅವರು ಹೋಗಿದ್ದಾರೆ.

**'ಅಹಂ ಬ್ರಹ್ಮಾಸ್ಮಿ'** ಎಂಬ ಅರಿವು ಸುಲಭವಾಗಿ ಬರತಕ್ಕದ್ದಲ್ಲ. ಶ್ರದ್ಧಾವಂತನೂ ಸಹ ಮನನ, ನಿದಿಧ್ಯಾಸನಗಳಿಂದ ಬಹುಕಾಲ ಶ್ರಮಿಸಿದರೂ, ಅನುಭವಾರೂಢವಾಗುವುದು ಕಠಿಣ. ಬುದ್ಧಿಯು ಹೌದು, ಹೌದು ಎನ್ನುತ್ತಿರುವುದು ಗುರೂಪದೇಶದಲ್ಲಿಯೂ ವೇದಾಂತವಾಕ್ಯಗಳಲ್ಲಿಯೂ ಸಂಪೂರ್ಣವಾದ ನಂಬಿಕೆ ಇರುವುದರಿಂದ. ಆದರೆ ಸತ್ಯವು ಅನುಭವಕ್ಕೆ ಬಾರದೆ ಸ್ವಲ್ಪ ದೂರದಲ್ಲಿಯೇ ಉಳಿದುಕೊಳ್ಳುತ್ತದೆ. ಆದ್ದರಿಂದಲೇ ಛಾಂದೋಗ್ಯದಲ್ಲಿ ಉದ್ದಾಲಕ ಮಹರ್ಷಿಯು ಶ್ವೇತಕೇತುವಿಗೆ **''ತತ್ತ್ವಮಸಿ ಶ್ವೇತಕೇತೋ''** ಎಂದು ಒಂಬತ್ತು ಸಲ ಹೇಳಿದ್ದನ್ನೇ ಒತ್ತಿ ಹೇಳಬೇಕಾಯಿತು. ಈ ಅವಸ್ಥಾತ್ರಯ ವಿಚಾರವು ಹಾಗಲ್ಲ. ಇದು ನೇರವಾಗಿ ನಮ್ಮ ಅನುಭವಕ್ಕೆ ಆ ಪರಮ ಸತ್ಯವನ್ನು ಮುಟ್ಟಿಸುತ್ತದೆ. ಇತರ ಪ್ರಕ್ರಿಯೆಗಳಿಗೂ ಅವಸ್ಥಾತ್ರಯ ಪರೀಕ್ಷಾ ಪಕ್ರಿಯೆಗೂ ಇರುವ ಭೇದವನ್ನು ತಿಳಿಸಿ ಇದರ ಹೆಚ್ಚುಗಾರಿಕೆಯನ್ನು ತಿಳಿಸುವುದು ಮಾತ್ರ ಇಲ್ಲಿ ಉದ್ದಿಷ್ಟವಾಗಿದೆ.

ಈ ಮೂರು ಅವಸ್ಥೆಗಳಲ್ಲದೆ ಇನ್ನೂ ಕೆಲವು ಅವಸ್ಥೆಗಳುಂಟು ಎಂಬ ಶಂಕೆ ಬರಬಹುದು.

ಮೂರ್ಛೆ; ವೈದ್ಯರು ಪ್ರಯೋಗಿಸುವ ಕ್ಲೋರೋಫಾರಂ ಮುಂತಾದ ಔಷಧಗಳಿಂದಾಗುವ ಮೂರ್ಛಾಸದೃಶವಾದ ಅರಿವಳಿಕೆಯ ಅವಸ್ಥೆ, ಹಿಪ್ನಾಟಿಸಂ–ಇವು ಬೇರೆ ಬೇರೆ ಅವಸ್ಥೆಗಳಲ್ಲವೆ? ಮನೋವ್ಯಾಪಾರ ಉಳ್ಳದ್ದು, ಮನೋವ್ಯಾಪಾರವಿಲ್ಲದ್ದು ಎಂದು ಅವಸ್ಥೆಯು ಎರಡು ವಿಧ. ಮನೋವ್ಯಾಪಾರವಿರುವ ಹಿಪ್ನಾಟಿಸಂ ಎಂಬುದನ್ನು ಜಾಗ್ರತ್ ಅಥವಾ ಸ್ವಪ್ನದಲ್ಲಿಯೂ ಮನೋವ್ಯಾಪಾರವಿಲ್ಲದ ಮೂರ್ಛೆ ಮುಂತಾದ್ದನ್ನು ಸುಷುಪ್ತಿಯಲ್ಲಿಯೂ ಅಂತರ್ಭಾವವನ್ನು ಮಾಡಿದಾಗ ವ್ಯವಸ್ಥಿತವಾದ ಮೂರು ಅವಸ್ಥೆಗಳೇ ಉಳಿದುಕೊಳ್ಳುತ್ತವೆ. ಸರ್ವರಿಗೂ ಸಹಜವಾಗಿ ಬಹಳಷ್ಟು ಆ ಮೂರು ಅವಸ್ಥೆಗಳು. ಆದ್ದರಿಂದ ಅವಸ್ಥಾತ್ರಯವೆನ್ನುವುದೇ ಯುಕ್ತವಾದದ್ದು. ಈ ಮೂರರ ಪರೀಕ್ಷೆಯಲ್ಲಿ ಉಳಿದವೆಲ್ಲವೂ, ಅಡಕವಾಗಿಬಿಡುತ್ತವೆ.

ಈ ಪರೀಕ್ಷೆಯಲ್ಲಿರುವ ವೈಶಿಷ್ಟ್ಯವೇನೆಂದರೆ, ಇದಕ್ಕೆ ಒಳಗಾಗುವ ಅವಸ್ಥಾತ್ರಯ ಮತ್ತು ಆತ್ಮ (ತಾನು) – ಇವು ಸ್ವಯಂಸಿದ್ಧವಾದವುಗಳು. ಸರ್ವರ ಅನುಭವಕ್ಕೂ ಬಂದಿರತಕ್ಕವು. ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಅನುಭವ ಸರ್ವರಿಗೂ ಇದೆ. ನಾನು, ತಾನು –ಎಂದುಕೊಳ್ಳುವ ಆತ್ಮನೂ ಸ್ವಯಂಸಿದ್ಧ

ನಾಗಿದ್ದಾನೆ. ಇವುಗಳ ಅಸ್ತಿತ್ವಕ್ಕೆ ಯಾವ ಹೊರಗಿನ ಪ್ರಮಾಣಗಳೂ ಬೇಕಾಗಿಲ್ಲ. ಸ್ವತಃ ಅನುಭವ ಗಮ್ಯಗಳಾದ್ದರಿಂದ ಗ್ರಂಥಗಳ ಆಧಾರವನ್ನು ಕೊಡಬೇಕಾಗಿಲ್ಲ. ನಾನು ದೇಹವಲ್ಲ, ದೇಹಾತಿರಿಕ್ತನಾದ ಜೀವ– ಎಂಬುದನ್ನು ಪಾಮರರು ಸಹ ಬಲ್ಲರು. ದೇಹವೇ ನಾನು ಎಂಬ ನಾಸ್ತಿಕ ವಾದವನ್ನು ಶುಷ್ಕಯುಕ್ತಿಗಳ ಮೇಲೆ ನಾಸ್ತಿಕರು ನಿಲ್ಲಿಸಲು ಹೋರಾಡಿದ್ದಾರೆಯೇ ಹೊರತು, ಅದು ಸ್ವತಃ ಸಿದ್ಧವೂ ಅಲ್ಲ, ಅನುಭವಗಮ್ಯವೂ ಅಲ್ಲ. ಏನೂ ಅರಿಯದ ಮೂಢರೂ ಸಹ ಜೀವಾತ್ಮನ ಅಸ್ತಿತ್ವವನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಆತ್ಮನ ಸ್ವರೂಪವೇನೆಂಬುದನ್ನು ಮಾತ್ರ ಅರಿಯರು–ಎಂಬುದು ಬೇರೆ ವಿಷಯ. ಆತ್ಮನ ಸ್ವರೂಪವನ್ನು ತಿಳಿಸುವುದ ಕ್ಕಾಗಿಯೇ ಈ ಅವಸ್ಥಾತ್ರಯ ಪರೀಕ್ಷೆ ಹೊರಟಿದೆ.

ಇದರ ಫಲಿತಾಂಶವೇನು? ಜಾಗ್ರತ್ತು ನಮ್ಮ ಪ್ರಾಚೀನ ಕರ್ಮಗಳ ಫಲ ವನ್ನುಣ್ಣುವುದಕ್ಕಾಗಿ ಬಂದಿದೆ. ಸ್ವಪ್ನ, ಸುಷುಪ್ತಿಗಳ ಆವಶ್ಯಕತೆ ಏನು? ಎಂಬ ಪ್ರಶ್ನೆಗೆ ಈಗ ನಾವು ಉತ್ತರವನ್ನು ಕಂಡುಕೊಳ್ಳಬೇಕಾಗಿದೆ.

ಜಾಗ್ರತ್ತಿನಲ್ಲಿ ಅನುಭವಿಸುವ ಸುಖದುಃಖಗಳು ನಮ್ಮ ಪ್ರಾಕ್ತನ ಕರ್ಮಗಳ ಫಲವಾದರೆ, ಸ್ವಪ್ನದಲ್ಲಿಯೂ ಸುಖದುಃಖಗಳ ಅನುಭವವಿರುವುದರಿಂದ ಅದೂ ನಮ್ಮ ಕರ್ಮ ಫಲವೇ ಸರಿ. ಕನಸು ಬೀಳುವುದು ಆಹಾರ ದೋಷದಿಂದಲೇ ಎಂಬ ನಿಯಮ ವೇನೂ ಇಲ್ಲ. ಆಹಾರದೋಷವಿಲ್ಲದಿದ್ದರೂ ಆರೋಗ್ಯಶಾಲಿಗೆ ಸಹ ಕನಸು ಬೀಳುವುದು ಅನುಭವಸಿದ್ಧವಾಗಿದೆ. ಜಾಗ್ರತ್ತಿನಲ್ಲಿ ಸುಖದುಃಖ ಗಳನ್ನನುಭವಿಸುವುದು ಅಂತಃಕರಣವಾದರೆ, ಕನಸಿನಲ್ಲಿ ಅವುಗಳನ್ನನುಭವಿಸು ವುದೂ ಅಂತಃಕರಣವೇ. ಜಾಗ್ರತ್ತಿನಲ್ಲಿ ಶ್ರೋತ್ರ, ನೇತ್ರ, ಜಿಹ್ವೆ ಮುಂತಾದ ಇಂದ್ರಿಯಗಳು ಬಾಹ್ಯವಾದ ಭೋಗ ಸಾಮಗ್ರಿಗಳನ್ನು ಒದಗಿಸಿಕೊಂಡು ಅಂತಃಕರಣಕ್ಕೆ ಮುಟ್ಟಿಸುತ್ತವೆ. ಕನಸಿನಲ್ಲಾದರೋ ಭೋಗಸಾಮಗ್ರಿಗಳೇ ಇರುವುದಿಲ್ಲ ಕನಸಿನಲ್ಲಿ ಮನಸ್ಸೇ ಭೋಗ ಸಾಮಗ್ರಿಗಳನ್ನು ಕಲ್ಪಿಸಿಕೊಂಡು ಜಾಗ್ರತ್ತಿನಲ್ಲಿರುವಂತೆಯೇ ಭೋಗಿಸಿ ಸುಖದುಃಖಾದಿಗಳನ್ನು ಅನುಭವಿಸುತ್ತದೆ. ಕನಸಿನಲ್ಲಿ ಸುಖದುಃಖಗಳನ್ನೀಯುವ ಸಾಮಗ್ರಿಗಳು ಮಿಥ್ಯೆಯಾದರೆ, ಜಾಗ್ರತ್ತಿನಲ್ಲಿ ರುವ ಬಾಹ್ಯ ಸಾಮಗ್ರಿಗಳೂ ಮಿಥ್ಯೆಯೆಂದೇ ವೇದಾಂತದ ಸಿದ್ಧಾಂತವಿದೆ. ಜಾಗ್ರತ್ತಿನದು ವ್ಯಾವಹಾರಿಕ ಸತ್ತೆ, ಕನಸಿನದು ಪ್ರಾತಿಭಾಸಿಕ ಸತ್ತೆ ಎಂಬ ಸಮಾಧಾನವೂ ನಿಲ್ಲತಕ್ಕದ್ದಲ್ಲ. ಸಂಸಾರದಲ್ಲಿಳಿದ ಜೀವಾತ್ಮನಿಗಲ್ಲವೆ ಇವೆರಡು ಸತ್ತೆಗಳು? ಪಾರಮಾರ್ಥಿಕವಾಗಿ ಇವೆರಡು ಸತ್ತೆಗಳೂ ಇಲ್ಲ. ಸಂಸಾರದಲ್ಲಿಳಿದ ಜೀವಾತ್ಮನಿಗೆ ಇವರೆಡು ಸತ್ತೆಗಳೂ ಸಮಾನವಾಗಿ ಸುಖದುಃಖಗಳನ್ನು ಕೊಡುವುದರಿಂದ, ಅನುಭವಿಸುವ ಅಂತಃಕರಣವೂ ಉಭಯತ್ರ ಒಂದೇ.

ಸಂಸಾರವು ಗಂಟು ಬಿದ್ದಿರುವುದೇ ಕರ್ಮಫಲದ ಭೋಗಕ್ಕಾಗಿರುವುದರಿಂದ ಕನಸಿನ ಸುಖದುಃಖಗಳೂ ಜೀವಾತ್ಮನ ಕರ್ಮಫಲಗಳೇ ಎಂದು ನಿಶ್ಚಯಿಸುವುದು ಸಯುಕ್ತಿಕವಾಗಿದೆ. ಕನಸಿನ ಸುಖದುಃಖಗಳ ಭೋಗಕ್ಕೆ ಇನ್ನಾವ ಹೇತುವನ್ನು ಹೇಳುವುದು ಯುಕ್ತವಾಗದು.

ಮಾಂಡೂಕ್ಯೋಪನಿಷತ್ತಿನಲ್ಲಿ ಜಾಗರಿತ ಸ್ಥಾನನಾದ ವೈಶ್ವಾನರನು **'ಸ್ಥೂಲಭುಕ್'** ಎಂದೂ ಸ್ವಪ್ನಸ್ಥಾನನಾದ ತೈಜಸನು **'ಪ್ರವಿವಿಕ್ತ ಭುಕ್'** ಎಂದೂ ಹೇಳಿದೆ. ಜಾಗ್ರತ್ತಿನಲ್ಲಿ ಸ್ಥೂಲ ವಿಷಯಗಳ ಭೋಗ, ಸ್ವಪ್ನದಲ್ಲಿ ಜಾಗ್ರದ್ವಾಸನೆಯಿಂದ ಕಲ್ಪಿತವಾದ ವಿಷಯಗಳ ಭೋಗ. ಒಟ್ಟಿನಲ್ಲಿ ಭೋಗವು ಸಮಾನ. ಅಲ್ಲದೆ ಸ್ವಪ್ನದಲ್ಲಾಗುವ ಸಂತೋಷ, ಭಯ – ಮುಂತಾದವುಗಳಿಗೆ ಜೀವಾತ್ಮನ ಸುಕೃತ ದುಷ್ಕೃತಗಳು ಕರ್ತೃಗಳೆಂದು ಶ್ರೀ ಶಂಕರ ಭಗವತ್ಪಾದರೇ ಸೂತ್ರಭಾಷ್ಯದಲ್ಲಿ ಹೇಳಿದ್ದಾರೆ. (ಬ್ರ.ಸೂ. ೩-೨-೪). ನ್ಯಾಯ ನಿರ್ಣಯ ವ್ಯಾಖ್ಯಾನದಲ್ಲಿ ಈ ಸಂತೋಷ ಭಯಾದಿಗಳಿಗೆ ಧರ್ಮಾಧರ್ಮಗಳು ಕಾರಣವೆಂದು ವ್ಯಾಖ್ಯಾನ ಕಾರರು ಹೇಳಿದ್ದಾರೆ. ಆದ್ದರಿಂದ ಸ್ವಪ್ನದಲ್ಲಾಗುವ ಸುಖ ದುಃಖಾದಿಗಳು ಕರ್ಮ ಫಲಗಳೆಂದೂ ಅವುಗಳ ಅನುಭವದಿಂದ ಆಯಾ ಕರ್ಮಗಳು ಕ್ಷಯಿಸುತ್ತವೆ ಯೆಂದೂ ಸ್ಪಷ್ಟವಾಗುತ್ತದೆ.

ಹಾಗಾದರೆ ಜಾಗ್ರತ್ತಿನಲ್ಲಿಯೇ ಪ್ರಾರಬ್ಧ ಕರ್ಮಗಳ ಭೋಗವು ನಡೆಯಲಿ. ಅದಕ್ಕಾಗಿ ಸ್ವಪ್ನದ ಆವಶ್ಯಕತೆ ಏನಿದೆ? ಎಂಬ ಪ್ರಶ್ನೆ ಹುಟ್ಟಬಹುದು. ಹಾಗಲ್ಲ; ಜಾಗ್ರತ್ತಿನಲ್ಲಿ ಮೃತರಾಗಿ ಹೋದ ವ್ಯಕ್ತಿಗಳು ಋಣಾನುಬಂಧದಿಂದ ಸ್ವಪ್ನದಲ್ಲಿ ಕಾಣಿಸಿಕೊಂಡು ಸುಖದುಃಖಗಳನ್ನೀಯಬಹುದು. ಜಾಗ್ರತ್ತಿನಲ್ಲಿ ಎಂದೂ ಸಂಭವಿಸದ ಘಟನೆಗಳು ಕನಸಿನಲ್ಲಿ ನಡೆಯಬಹುದು. ಆಕಾಶದಲ್ಲಿ ಹಾರಿ ಹೋದಂತೆ, ವಿಮಾನದಿಂದ ಸಮುದ್ರದಲ್ಲಿ ಧುಮುಕಿದಂತೆ, ಹುಲಿಯು ಅಟ್ಟಿಸಿ ಕೊಂಡು ಬಂದಂತೆ, ಸ್ವರ್ಗಕ್ಕೆ ಹೋಗಿ ಸುಖಿಸಿದಂತೆ, ನರಕದಲ್ಲಿ ಬಿದ್ದು ನರಳಿದಂತೆ– ಕರ್ಮ ಫಲವನ್ನು ಕನಸಿನಲ್ಲಿ ಅನುಭವಿಸಲು ಸಾಧ್ಯವಿದೆ. ಮನುಷ್ಯನ ಆಯುಸ್ಸು ಪರಿಮಿತವಾದದ್ದು. ಅದು ಮುಗಿಯುವಷ್ಟರಲ್ಲಿ ಪ್ರಾರಬ್ಧ ಕರ್ಮವು ಸವೆಯಬೇಕಾಗಿರುತ್ತದೆ. ಜಾಗ್ರತ್ತಿನಲ್ಲಿಯೇ ಅದು ಸವೆದು ಹೋಗಲು ಕಾಲಾವಕಾಶ ವಿಲ್ಲದ್ದರಿಂದ ಕನಸಿನಲ್ಲಿ ಅನುಭವಿಸಿ ಮುಗಿಸುವಂತೆ ದೈವ ಸಂಕಲ್ಪವಿದೆಯೆಂದು ಊಹಿಸುವುದು ತಪ್ಪಾಗದು. ''ನನಗೆ ಜಾಗ್ರತ್, ಸುಷುಪ್ತಿ ಎಂಬ ಎರಡೇ ಅವಸ್ಥೆಗಳಿವೆ. ಸ್ವಪ್ನವೆಂದರೆ ಏನೆಂಬುದೇ ನನಗೆ ತಿಳಿಯದು'' ಎಂದು ಒಬ್ಬರು ನನಗೆ ಹೇಳಿದ್ದರು. ಈ ಹೇಳಿಕೆ ಸತ್ಯವಾದರೆ ''ಪ್ರಾರಬ್ಧ ಕರ್ಮದ

ಹೊರೆ ಅವರಿಗಿರಲಿಲ್ಲ. ಜಾಗ್ರತ್ತಿನಲ್ಲಿಯೇ ಅದು ಸವೆದುಹೋಗುವಷ್ಟು ಜೀವಿತಾವಧಿ ಅವರಿಗಿತ್ತು'' ಎಂದು ತಿಳಿಯಬೇಕು.

ಸ್ವಪ್ನವು ಶಕುನ ಶಾಸ್ತ್ರದಂತೆ ಕೆಲವು ಸಂದರ್ಭಗಳಲ್ಲಿ ಭವಿಷ್ಯತ್ತಿನ ಸೂಚಕವೂ ಆಗಬಹುದು. ಇದನ್ನು **''ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ''** (ಬ್ರ.ಸೂ. ೩-೨-೪) ಎಂಬ ಸೂತ್ರದಲ್ಲಿ ಶ್ರೀ ಬಾದರಾಯಣರು ಅಂಗೀಕರಿಸಿದ್ದಾರೆ. ಶ್ರೀ ಶಾಂಕರಭಾಷ್ಯದಲ್ಲಿ ಇದು ಸ್ಪಷ್ಟವಾಗಿದೆ. ದಶರಥನು ತನಗಾದ ದುಃಸ್ವಪ್ನದಿಂದ ತನ್ನ ಅಂತ್ಯಕಾಲವನ್ನು ಊಹಿಸಿದನೆಂದೂ, ಸೋದರಮಾವನ ಮನೆಯಲ್ಲಿದ್ದ ಭರತನು ತನಗಾದ ದುಃಸ್ವಪ್ನದಿಂದ ಅಯೋಧ್ಯೆಯಲ್ಲಿ ಯಾವುದೋ ಅನರ್ಥವು ನಡೆದಿದೆಯೆಂದು ತಿಳಿದನೆಂದೂ, ತ್ರಿಜಟೆಯು ತನ್ನ ದುಃಸ್ವಪ್ನದಿಂದ ಲಂಕೆಗೆ ಸಂಭವಿಸಬಹುದಾದ ವಿಪತ್ತನ್ನು ಹೇಳಿದಳೆಂದೂ ಶ್ರೀಮದ್ರಾಮಾಯಣದಲ್ಲಿ ವಾಲ್ಮೀಕಿ ಮುನಿಗಳು ವರ್ಣಿಸಿದ್ದಾರೆ. ಒಳ್ಳೆಯ ಸ್ವಪ್ನವು ಭವಿಷ್ಯತ್ತಿನ ಕಲ್ಯಾಣವನ್ನು ಸೂಚಿಸಬಹುದು.

ಒಟ್ಟಿನಲ್ಲಿ ಮನುಷ್ಯನ ಸುಕೃತ ದುಷ್ಕೃತಗಳು ಕನಸಿನ ಸುಖದುಃಖಭಯಾದಿ ಗಳಿಗೆ ಕಾರಣಗಳಾದ್ದರಿಂದ ಅವುಗಳ ಅನುಭವದಿಂದ ಪ್ರಾರಬ್ಧ ಕರ್ಮಗಳು ಸವೆಯುವುದೇ ಕನಸಿನ ಫಲವೆಂದೂ ಅದಕ್ಕಾಗಿಯೇ ಮನುಷ್ಯನಿಗೆ ಸ್ವಪ್ನಾವಸ್ಥೆ ಇದೆಯೆಂದೂ ನಿಶ್ಚಿತವಾಗುತ್ತದೆ. ಸ್ವಪ್ನ ಬೀಳುವುದಕ್ಕೆ ಇದೊಂದು ಮುಖ್ಯ ಕಾರಣ.

ಮನುಷ್ಯನು ಸಂಶಯಬಹುಳ ಪ್ರಾಣಿಯಾದ್ದರಿಂದ ಈಗ ಇನ್ನೊಂದು ಸಂಶಯವನ್ನೆತ್ತ ಬಹುದು. ಸುಖದುಃಖಭಯಾದಿಗಳಿರುವ ಸ್ವಪ್ನಗಳಿಗೆ ಪೂರ್ವೋಕ್ತ ಕಾರಣಗಳನ್ನು ಒಪ್ಪಿಕೊಳ್ಳಬಹುದು. ಆದರೆ ಅವುಗಳ ಸುಳಿವೂ ಇಲ್ಲದ ಸಾಚಾ ಸ್ವಪ್ನಗಳು ಬೀಳುತ್ತವೆಯಲ್ಲ. ಅದಕ್ಕೆ ಕಾರಣವೇನು? ಎಂಬುದೇ ಶಂಕೆ. ಹೇಗೆಂದರೆ, ಮಿತ್ರರೊಡನೆ ಹರಟೆ ಹೊಡೆಯುತ್ತ ಕುಳಿತ ಹಾಗೆ, ವಿದ್ಯಾರ್ಥಿಗಳಿಗೆ ಪಾಠ ಹೇಳುವ ಹಾಗೆ, ಬೈಸಿಕಲ್ ಹತ್ತಿ ಎಲ್ಲಿಗೋ ಹೋಗುತ್ತಿರುವಂತೆ, ಬೆಟ್ಟವನ್ನು ಹತ್ತಿ ಇಳಿಯುತ್ತಿರುವಂತೆ, ಬಟ್ಟೆಗಳನ್ನು ಒಗೆದ ಹಾಗೆ, ಊರಿಂದೂರಿಗೆ ಆಕಾಶದಲ್ಲಿ ಹಾರಿಹೋಗುವ ಹಾಗೆ, ಈ ರೀತಿ ನಾನಾಬಗೆಯ ಅರ್ಥಶೂನ್ಯ ಕನಸುಗಳು ಬೀಳುವುದುಂಟು. ಇವುಗಳಲ್ಲಿ ಯಾವ ಸುಖದುಃಖ ಭಯಾದಿಗಳ ಸುಳಿವೂ ಇರುವುದಿಲ್ಲ. ಇಂತಹ ಕನಸು ಯಾವ ಪ್ರಾರಬ್ಧ ಕರ್ಮದ ಫಲವಾದೀತು? ಎಂಬ ಪ್ರಶ್ನೆಯನ್ನು ಯಾರಾದರೂ ಕೇಳಬಹುದು. ಸ್ವಪ್ನದಲ್ಲಿ ಕರ್ಮಫಲ ಭೋಗವಿರಲಿ, ಇಲ್ಲದಿರಲಿ, ಮನುಷ್ಯನಿಗೆ ಸ್ವಪ್ನಾವಸ್ಥೆ ಏಕಿದೆ? ಎಂಬ ಪ್ರಶ್ನೆಗೆ ಅದ್ವೈತ ವೇದಾಂತವು ಮಾತ್ರ ಸಮಂಜಸವಾದ ಉತ್ತರವನ್ನು

ನೀಡಬಲ್ಲದು ಎಂದು ನನ್ನ ಅಭಿಪ್ರಾಯವಿದೆ. 'ನನ್ನ' ಎಂದು ಹೇಳಿದ್ದೇಕೆಂದರೆ ಮುಂದೆ ಹೇಳುವ ಉತ್ತರವನ್ನು ನಾನು ಯಾವ ಗ್ರಂಥದಲ್ಲಿಯೂ ನೋಡಿಲ್ಲ. ಆದರೆ ಉಪನಿಷತ್ತುಗಳಿಗೂ ಭಾಷ್ಯಕಾರರೇ ಮೊದಲಾದರು ರಚಿಸಿದ ಪ್ರಾಮಾಣಿಕ ಶಾಸ್ತ್ರಗ್ರಂಥಗಳಿಗೂ ಇದು ಸಂಮತ ವಾದದ್ದು ಎಂದು ನಾನು ಭಾವಿಸುತ್ತೇನೆ.

ಸ್ವಪ್ನದಿಂದ ಜಗತ್ತು ಮಿಥ್ಯಯೆಂಬುದನ್ನು ತೋರಿಸಿ, ಸುಷುಪ್ತಿಯಲ್ಲಿ ಸಂಸ್ಕಾರದ ಗೊಂದಲವಿಲ್ಲದೆ ಆನಂದದಲ್ಲಿರಬಹುದಾದ ಸಂದರ್ಭವನ್ನು ತೋರಿಸಿ, ಶುದ್ಧ ಬ್ರಹ್ಮವೇ ನಿನ್ನ ಸ್ವರೂಪವೆಂದು ತಿಳಿಸುವುದು ಭಗವಂತನ ಉದ್ದೇಶವಾಗಿರುತ್ತದೆ. ಪರಮಾತ್ಮನ ಸಂದೇಶ ಹೀಗಿರಬಹುದು, ''ಎಲೈ ಮಾನವ, ನಿನ್ನ ಕರ್ಮದ ಫಲವಾಗಿ ಇದುವರಗೆ ಸಾವಿರಾರು ಜನ್ಮಗಳನ್ನೆತ್ತಿರುವೆ. ಒಂದಾನೊಂದು ಪುಣ್ಯದ ಫಲವಾಗಿ ಮನುಷ್ಯ ಜನ್ಮವನ್ನೀಗ ಪಡೆದಿರುವ. ನಿನ್ನ ಮೇಲಿನ ಅನುಕಂಪದಿಂದ ಬೇರೆ ಯಾವ ಪ್ರಾಣಿಗೂ ಇಲ್ಲದ ಅಂಗಸೌಷ್ಠವ ವನ್ನೂ ಪೂರ್ವಾಪರಗಳನ್ನು ವಿವೇಚಿಸಿ ತಿಳಿಯುವ ಸರ್ವೋತ್ತಮವಾದ ಬುದ್ಧಿಶಕ್ತಿ ಯನ್ನೂ ನಿನಗೆ ಕೊಟ್ಟಿದ್ದೇನೆ. ಇದೆಲ್ಲವನ್ನೂ ದುರುಪಯೋಗ ಪಡಿಸಿಕೊಳ್ಳಬೇಡ. ಮತ್ತು ಕೀಳು ಜನ್ಮಗಳಿಗೆ ಧುಮುಕಬೇಡ. ನೀನು ಈ ಸಂಸಾರದ ಕೋಟಲೆಯನ್ನು ತಪ್ಪಿಸಿಕೊಂಡು ಮುಕ್ತನಾಗು. ಇದಕ್ಕಾಗಿ ನೀನು ಮಾಡಬೇಕಾದ ಕಾರ್ಯವು ಹೊರೆಯಾದದ್ದೇನಲ್ಲ. ನೀನು ಯಾರು? ನಿನ್ನ ನಿಜ ಸ್ವರೂಪವೇನು? ಎಂಬುದನ್ನು ಸರಿಯಾಗಿ ತಿಳಿದುಕೊಂಡರೆ ಸಾಕು. ಪ್ರಾರಬ್ಧ ಕರ್ಮದ ಫಲಗಳನ್ನು ಜಾಗ್ರತ್ ಸ್ವಪ್ನಗಳಲ್ಲಿ ಅನುಭವಿಸಿ ತೀರಿಸುತ್ತಿದ್ದೀಯೆ.ಈ ಜನ್ಮದಲ್ಲಿ ಮತ್ತೆ ರಾಗದ್ವೇಷಗಳಿಗೆ ವಶನಾಗಿ ಕರ್ಮಗಳನ್ನು ಮಾಡಿ ಸಂಚಿತವಾಗಿರುವ ಹಿಂದಿನ ಕರ್ಮರಾಶಿಗೆ ಸೇರಿಸುತ್ತಲೇ ಹೋಗಬೇಡ. ನೀನು ಮುಕ್ತನಾಗಲು ಒಂದು ಮಾರ್ಗವನ್ನು ನಿನಗಾಗಿ ಕಲ್ಪಿಸಿದ್ದೇನೆ. ಮಡದಿ, ಮಕ್ಕಳು, ಮನೆ ಮುಂತಾದ ವ್ಯಾಮೋಹಗಳನ್ನು ಬಿಡು. ಇವೆಲ್ಲವೂ ಮಾಯಾ ಕಲ್ಪಿತಗಳಾದ್ದರಿಂದ ಮಿಥ್ಯೆಯೆಂದು ತಿಳಿ. ಇದನ್ನು ತಿಳಿಸುವುದಕ್ಕಾಗಿಯೇ ನಿನಗೆ ಜಾಗ್ರತ್ತಿನೊಡನೆ ಸ್ವಪ್ನ ಸುಷುಪ್ತಿಗಳೆಂಬ ಅವಸ್ಥೆ ಗಳನ್ನೂ ಕಲ್ಪಿಸಿದ್ದೇನೆ. ಜಾಗ್ರತ್ತಿನಲ್ಲಿ ಕಂಡ ಜಗತ್ತಿನಂತೆಯೇ ಸ್ವಪ್ನದಲ್ಲಿ ಇನ್ನೊಂದು ಜಗತ್ತನ್ನು ಕಾಣುತ್ತೀಯೆ. ಸ್ವಪ್ನದಲ್ಲಿ ಕಂಡದ್ದು ಮಿಥ್ಯೆಯೆಂದು ಎಚ್ಚರವಾದೊಡನೆ ನೀನೇ ಹೇಳುತ್ತೀಯೆ. ಜಾಗ್ರತ್ತಿನ ಜಗತ್ತು ಸ್ವಪ್ನದಲ್ಲಿರುವುದಿಲ್ಲ. ಈ ಎರಡು ಜಗತ್ತಗಳೂ ಸುಷುಪ್ತಿಯಲ್ಲಿರುವುದಿಲ್ಲ; ಸ್ವಪ್ನದಲ್ಲಿ ಕಂಡದ್ದು ಮನಃಕಲ್ಪಿತವಾದ ಜಗತ್ತು, ಅಂತೆಯೇ ಜಾಗ್ರತ್ತಿನಲ್ಲಿ ಕಂಡದ್ದೂ ಮನಃಕಲ್ಪಿತವೇ, ಸುಷುಪ್ತಿಯಲ್ಲಿ ಅವೆರಡೂ ಇರುವುದಿಲ್ಲ, ಆಗ ಅವು ಎಲ್ಲಿಗೆ ಹೋಗುತ್ತವೆ? ಇದ್ದರಲ್ಲವೇ ಹೋಗುವುದು?

''ನಿನಗೆ ದೇಹೇಂದ್ರಿಯ ಮನಸ್ಸುಗಳ ಸಂಬಂಧವು ವಾಸ್ತವವಾಗಿ ಇಲ್ಲ. ಅವೆಲ್ಲವೂಗಳಿಗಿಂತ ಅತಿರಿಕ್ತನಾಗಿರತಕ್ಕವನು ನೀನು. ನೀನು ಯಾವ ಸಂಬಂಧವೂ ಇಲ್ಲದವನೆಂಬುದನ್ನು ಪ್ರತ್ಯಕ್ಷವಾಗಿ ಅನುಭವಕ್ಕೆ ತಂದುಕೊಡುವುದಕ್ಕಾಗಿ ಸುಷುಪ್ತಿಯೆಂಬ ಅವಸ್ಥೆಯನ್ನು ಕಲ್ಪಿಸಿ ಪ್ರತಿದಿನವೂ ನಿನ್ನ ನಿಜ ಸ್ವರೂಪವನ್ನು ತಿಳಿಸಿಕೊಡುತ್ತಲೇ ಇದ್ದೇನೆ. ಈ ವಿಷಯವನ್ನು ನೀನು ಪರ್ಯಾಲೋಚಿಸುತ್ತಿರು. ಅದಕ್ಕಾಗಿಯೇ ನಾನು ನಿನಗೆ ಇದೆಲ್ಲವನ್ನು ವಿವೇಚಿಸುವ ಬುದ್ಧಿಶಕ್ತಿಯುನ್ನಿತ್ತು ಅವಸ್ಥಾತ್ರಯವನ್ನು ಕಲ್ಪಿಸಿದ್ದೇನೆ. ಇದೆಲ್ಲದರ ಪರಿಶೀಲನೆಯಿಂದ ಕಟ್ಟ ಕಡೆಗೆ ನೀನು ಪರಮಾರ್ಥ ಸತ್ಯವನ್ನರಿಯುವೆ. ನೀನೇ ಬ್ರಹ್ಮವೆಂದು ತಿಳಿದುಕೊಳ್ಳುವೆ. ಆಗ ನಿನ್ನ ಕರ್ಮಕೋಟಿಗಳೂ ಸತ್ತು ಬೂದಿಯಾಗುತ್ತವೆ. ಈಗ ಬಂದ ಪ್ರಾರಬ್ಧ ಕರ್ಮವನ್ನು ಅನುಭವಿಸಲೇಬೇಕು. ಆತ್ಮಜ್ಞಾನವೆಂದರೆ ನಿನ್ನ ಸ್ವರೂಪದ ಜ್ಞಾನವೇ ಆಗಿದೆ. ಅದನ್ನರಿತು ಮುಕ್ತನಾಗು. ಮುಕ್ತನಾದರೆ ನಿನಗೆ ಪುನರ್ಜನ್ಮ ವಿಲ್ಲ. ನೀನೇ ನಾನಾಗಿ ಬಿಡುತ್ತೀಯೆ'' ಎಂಬುದು ಭಗವಂತನ ಸಂದೇಶ. ಪರಮಾತ್ಮನ ಸಂದೇಶವನ್ನು ತಿಳಿಸುವುದೇ ಮಾಂಡೂಕ್ಯೋಪನಿಷತ್ತಿನ ಸಾರವಾಗಿದೆ.

## ಶ್ರೀ ಗೌಡಪಾದರು

ಶ್ರೀ ಶಂಕರಾಚಾರ್ಯರಿಂದ ಪರಮಪೂಜ್ಯರೆಂದೂ ಪರಮಗುರುಗಳೆಂದೂ ಸ್ತುತರಾಗಿ, ಅವರ ಭಕ್ತಿ ಗೌರವಗಳಿಗೆ ಪಾತ್ರರಾದ ಶ್ರೀ ಗೌಡಪಾದಾಚಾರ್ಯರು ಯಾರು, ಅವರ ದೇಶಕಾಲಾದಿಗಳು ಯಾವುವು ಎಂಬುದು ನಿಶ್ಚಿತವಾಗಿ ತಿಳಿದಿಲ್ಲ. ಶ್ರೀ ಶಂಕರಾಚಾರ್ಯರು ಕ್ರಿ.ಶ. ಏಳನೆಯ ಶತಕದ ಆದಿ ಭಾಗದಲ್ಲಿದ್ದರೆಂಬುದು ಇತ್ತೀಚಿನ ಸಂಶೋಧನೆಗಳಿಂದ ಇತಿಹಾಸಜ್ಞರು ನಿಶ್ಚಯಿಸಿದ್ದಾರೆ. ಅವರ ಪರಮಗುರುಗಳಾದ ಶ್ರೀ ಗೌಡಪಾದಾಚಾರ್ಯರು ಕ್ರಿ.ಶ. ಆರನೆಯ ಶತಮಾನದ ಉತ್ತರಾರ್ಧದಲ್ಲಿ ಇದ್ದಿರಬಹುದೆಂದು ತೋರುತ್ತದೆ. ಬಂಗಾಳ, ಒರಿಸ್ಸಾ ಪ್ರಾಂತ್ಯ ಗಳಿಗೆ ಹಿಂದೆ ಗೌಡದೇಶವೆಂಬ ವ್ಯವಹಾರವಿದ್ದ ಕಾರಣ ಶ್ರೀ ಗೌಡಪಾದರು ಆ ಪ್ರಾಂತದವರಾಗಿರಬೇಕು. ಗೌಡಪಾದರೆಂಬುದು ದೇಶನಿಮಿತ್ತಕವಾದ ಹೆಸರು. ಅವರ ನಾಮಧೇಯ ಏನಿತ್ತೆಂಬುದು ತಿಳಿಯುವುದಿಲ್ಲ. ಮಾಂಡೂಕ್ಯಕಾರಿಕೆ ಗಳನ್ನಲ್ಲದೆ ಉತ್ತರ ಗೀತೆಯನ್ನೂ ಸಾಂಖ್ಯಕಾರಿಕೆಗಳ ಮೇಲೆ ಬರೆದ ಒಂದು ವ್ಯಾಖ್ಯಾನವನ್ನೂ ಈ ಆಚಾರ್ಯರು ರಚಿಸಿದ್ದರೆಂಬ ಹೇಳಿಕೆ ಇದೆ. ಅದೇನೂ ಅಷ್ಟು ಪ್ರಾಮಾಣಿಕವೆಂದು ತೋರುವುದಿಲ್ಲ. ಮಾಂಡೂಕ್ಯಕಾರಿಕೆಗಳು ಮಾತ್ರ ಶ್ರೀ ಗೌಡಪಾದ ರಚಿತವಾದವೆಂಬುದು ನಿರ್ವಿವಾದ.

ಕೆಲವು ಶಬ್ದಗಳನ್ನು ವೈದಿಕದರ್ಶನಗಳಲ್ಲೆಲ್ಲಿಯೂ ಇಲ್ಲದ ಅರ್ಥದಲ್ಲಿ

ಶ್ರೀ ಗೌಡಪಾದರು ಬಳಸಿದ್ದಾರೆ. ಧರ್ಮ ಶಬ್ದವನ್ನು ಜೀವ ಮತ್ತು ಬಾಹ್ಯದೃಶ್ಯಗಳು ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ. ಚಿತ್ತ ಶಬ್ದವನ್ನೂ ಸಹ ಜೀವ ಎಂಬ ಅರ್ಥದಲ್ಲಿ ಉಪಯೋಗಿಸಿದ್ದುಂಟು. ಜಾಗ್ರದವಸ್ಥೆಯನ್ನು ಲೌಕಿಕವೆಂದೂ ಕನಸನ್ನು ಶುದ್ಧ ಲೌಕಿಕವೆಂದೂ ಸುಷುಪ್ತಿಯನ್ನು ಲೋಕೋತ್ತರ ಎಂದೂ ಹೇಳಿದ್ದಾರೆ. ಬೌದ್ಧ ದರ್ಶನಕಾರರು ಹೇಳುವ ಸಂವೃತಿಯೆಂಬ ಪದವು ಅವಿದ್ಯಾನಿಮಿತ್ತಕ ಲೋಕ ವ್ಯವಹಾರವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಧರ್ಮಕೀರ್ತಿ–ಮುಂತಾದ ಕೆಲವು ಬೌದ್ಧದಾರ್ಶನಿಕರು ಬರೆದ ಶ್ಲೋಕಗಳನ್ನು ಹೋಲುವ ಕೆಲವು ಶ್ಲೋಕಗಳೂ ಮಾಂಡೂಕ್ಯಕಾರಿಕೆಗಳಲ್ಲಿವೆ. ಆದರೆ ಈ ಕಾರಿಕೆಗಳು ಬೌದ್ಧರ ಆಶಯಕ್ಕೆ ವಿರುದ್ಧವಾಗಿ ಅವರ ತರ್ಕವನ್ನು ಖಂಡಿಸುವುದಕ್ಕಾಗಿ ಬಂದಿವೆಯೇ ಹೊರತು ಅವರ ಆಶಯವನ್ನು ಸ್ವೀಕರಿಸುವುದಕ್ಕಾಗಿ ಬಂದಿಲ್ಲವೆಂಬುದೇ ವಿಶೇಷ. ಈ ರೀತಿಯಾಗಿ ಬೌದ್ಧರ ಗ್ರಂಥಗಳಲ್ಲಿ ಮಾತ್ರ ಕಂಡು ಬರುವ ಶಬ್ದಗಳನ್ನೂ ಅವರ ಶ್ಲೋಕಗಳಿಗೆ ಸದೃಶವಾದ ಪದಗಳಿರುವ ಶ್ಲೋಕಗಳನ್ನೂ ಈ ಗೌಡಪಾದರು ಉಪಯೋಗಿಸಿರುವುದಕ್ಕೆ ಕಾರಣವೇನು? ಎಂಬ ಪ್ರಶ್ನೆಗೆ ಎರಡು ಸಮಾಧಾನಗಳನ್ನು ಹೇಳಬಹುದು.

೧. ತುಂಬ ಪ್ರಾಚೀನ ಕಾಲದ ದಾರ್ಶನಿಕ ಸಾಹಿತ್ಯ ಗ್ರಂಥಗಳು ನಮಗೆ ದೊರಕಿಲ್ಲ. ದೊರಕಿರತಕ್ಕವುಗಳಲ್ಲಿ ಬೌದ್ಧ ಗ್ರಂಥಗಳೇ ಪ್ರಾಚೀನವಾದವುಗಳೆಂಬ ಸ್ಥಿತಿ ನಮಗೆ ಪ್ರಾಪ್ತವಾಗಿದೆ. ವೈದಿಕ ದಾರ್ಶನಿಕ ಸಾಹಿತ್ಯದಲ್ಲಿ ಶ್ರೀ ಗೌಡಪಾದರ ಕಾರಿಕೆಗಳೇ ಪ್ರಾಚೀನತಮವಾದವು. ಧರ್ಮ, ಚಿತ್ತ, ಸಂವೃತಿ ಮುಂತಾದ ಶಬ್ದಗಳಿಗೆ ಹಿಂದೆ ಹೇಳಿದ ಅರ್ಥ ವಿಶೇಷಗಳಿದ್ದವು. ಆದ್ದರಿಂದ ಅರ್ಥವಿಶೇಷದಲ್ಲಿ ಆ ಶಬ್ದಗಳ ಬಳಕ್ಕೆ ಸರ್ವಸಾಮಾನ್ಯವಾದವುಗಳೇ ಸರಿ. ಈ ಸಮಾಧಾನವನ್ನೊಪ್ಪದಿದ್ದರೆ ಬೌದ್ಧರಾದರೂ, ಆ ಶಬ್ದಗಳನ್ನು ಅರ್ಥ ವಿಶೇಷದಲ್ಲಿ ಹೇಗೆ ಬಳಸಿದರು? ಯಾವ ಆಧಾರದಿಂದ ಬಳಸಿದರು? ಎಂಬ ಪ್ರಶ್ನೆ ನಿರುತ್ತರವಾದೀತು.

೨. ಬೌದ್ಧರ ಶ್ಲೋಕಗಳಿಗೆ ಹೋಲಿಕೆಯಿರುವಂತೆ ಕೆಲವು ಮಾಂಡೂಕ್ಯಕಾರಿಕೆಗಳನ್ನು ರಚಿಸಿರುವುದು ಬೌದ್ಧರ ತರ್ಕವನ್ನೇ ಅವರಿಗೆ ಹಿಂದಿರುಗಿಸಿ ಉತ್ತರವನ್ನಿತ್ತು ಅವರ ಮತವನ್ನು ಖಂಡಿಸುವುದಕ್ಕಾಗಿ ಎಂದು ಹೇಳಬಹುದು. ಇದು ಎರಡನೆಯ ಸಮಾಧಾನ.

ಹೊಳೆನರಸೀಪುರದ ಪೂಜ್ಯ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಬೌದ್ಧಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವರು. ಈ ಮಹನೀಯರು ಮಾಂಡೂಕ್ಯವಿವೃತಿ ಎಂಬ ಶ್ರೇಷ್ಠವಾದ ಒಂದು ಕೃತಿಯನ್ನು

ಸಂಸ್ಕೃತಭಾಷೆಯಲ್ಲಿ ರಚಿಸಿದ್ದಾರೆ. ಅದಕ್ಕೆ ಶ್ರೀ ಶ್ರೀಗಳವರೇ ಇಂಗ್ಲೀಷಿನಲ್ಲಿ ಒಂದು ಉಪೋದ್ಘಾತವನ್ನೂ ಸಂಸ್ಕೃತದಲ್ಲಿ ವಿಸ್ತೃತವಾದ ಭೂಮಿಕೆಯನ್ನೂ ಬರೆದಿದ್ದಾರೆ. ಬೌದ್ಧಮತದ ಪ್ರಭಾವವು ಗೌಡಪಾದರ ಕಾರಿಕೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆಯೆಂಬ ಆಧುನಿಕರವಾದವನ್ನು ಅವೆರಡರಲ್ಲಿಯೂ ಶ್ರೀ ಶ್ರೀಗಳವರು ಸಮರ್ಥವಾಗಿ ಖಂಡಿಸಿದ್ದಾರೆ. ಪೂಜ್ಯ ಶ್ರೀ ಸ್ವಾಮಿಗಳು ಕನ್ನಡದಲ್ಲಿಯೂ ಶ್ರೀ ಗೌಡಪಾದಹೃದಯವೆಂಬ ವಿಸ್ತೃತ ಗ್ರಂಥವನ್ನು ರಚಿಸಿ ಅದರಲ್ಲಿಯೂ ಶ್ರೀ ಗೌಡಪಾದಕಾರಿಕೆಗಳ ಮೇಲೆ ಬೌದ್ಧಮತ ಪ್ರಭಾವಿದೆಯೆಂಬ ವಾದವನ್ನು ತಲೆಯೆತ್ತದಂತೆ ದೂಷಿಸಿದ್ದಾರೆ. ಈ ಗ್ರಂಥಗಳನ್ನು ಕುತೂಹಲಿಗಳು ಅವಶ್ಯವಾಗಿ ಓದಬೇಕು. ಪೂಜ್ಯಸ್ವಾಮಿಗಳ ಸೂಕ್ಷ್ಮ ದೃಷ್ಟಿ ಬೌದ್ಧಗ್ರಂಥಗಳ ಅಧ್ಯಯನ, ಅದ್ವೈತವೇದಾಂತ–ಬೌದ್ಧಸಿದ್ಧಾಂತಗಳಿಗಿರುವ ಭೇದವನ್ನು ಎತ್ತಿ ತೋರಿಸುವ ವಿಧಾನ – ಇವು ಪ್ರಶಂಸನೀಯವಾದವು. ಪೂಜ್ಯ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ಮಾಂಡೂಕ್ಯ ವಿವೃತಿಯಲ್ಲಿ ಬಳಸಿರುವ ಸಂಸ್ಕೃತ ಭಾಷಾಶೈಲಿಯನ್ನು ನೋಡಿ ನಾನು ಮುಗ್ಧನಾಗಿದ್ದೇನೆ. ಈ ಮಾಂಡೂಕ್ಯ ಪ್ರಚನವನ್ನು ಬರೆಯುವಾಗ ನನಗೆ ಶ್ರೀ ಶ್ರೀಗಳವರ ಕೃತಿಗಳಿಂದ ತುಂಬ ಉಪಕಾರವಾಗಿದೆ. ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

**ವೇದಾಂತೇಷು ಮಹಾಪ್ರಾಜ್ಞಂ ಕೃತಭೂರಿಪರಿಶ್ರಮಮ್ ।**
**ಬಹುಗ್ರಂಥಪ್ರಣೇತಾರಂ ತಂ ವಂದೇ ಯತಿನಾಂ ವರಮ್ ॥**

ಆದರೂ ಒಂದೆರಡು ವಿಷಯಗಳಲ್ಲಿ ಅವರ ಹೇಳಿಕೆಗಳನ್ನು ಒಪ್ಪಲು ನನಗೆ ಸಾಧ್ಯವಾಗಲಿಲ್ಲ. ಆ ವಿಚಾರದಲ್ಲಿ ಸಾಂಪ್ರದಾಯಿಕ ವ್ಯಾಖ್ಯಾನಕಾರರ ನಿರ್ಣಯವೇ ಯುಕ್ತವೆಂದೂ ಭಾಷ್ಯಸಂಮತವೆಂದೂ ತಿಳಿದು ಸಾಂಪ್ರದಾಯಿಕ ಮತವನ್ನೇ ನಾನು ಅಂಗೀಕರಿಸಿದ್ದೇನೆ.

**ಸುಷುಪ್ತಾತ್ಮ–ಪ್ರಾಜ್ಞ**

ಪ್ರಾಜ್ಞನ ವಿಷಯದಲ್ಲಿ ನನಗಿರುವ ಸಂದೇಹವನ್ನೂ ಅಭಿಪ್ರಾಯಭೇದವನ್ನೂ ವಿದ್ವಾಂಸರೆದುರಿಗೆ ವಿಮರ್ಶೆಗಾಗಿ ಇಡಬೇಕೆಂದು ಅಪೇಕ್ಷೆಯಾಗಿದೆ. ವಿಶ್ವ, ತೈಜಸ, ಪ್ರಾಜ್ಞ–ಇವರೆಲ್ಲರೂ ಅದ್ವಯಾತ್ಮನ ಅವಿದ್ಯಾಕೃತನಾಮ ಸ್ವರೂಪ ಭೇದಗಳು (ಕಾರಿಕಾಭಾಷ್ಯ ೧-೬) ವಿಶ್ವ, ತೈಜಸರು ತಮ್ಮ ದರ್ಶನ ಸ್ಮರಣರೂಪ ವ್ಯಾಪಾರಗಳನ್ನು ನಿಲ್ಲಿಸಿ ಸುಷುಪ್ತಿಯಲ್ಲಿ ಏಕೀಭೂತನೂ ಘನ ಪ್ರಜ್ಞನೂ ಆಗಿ ಪ್ರಾಜ್ಞ ಎಂಬ ಹೆಸರನ್ನು ಪಡೆಯುತ್ತಾರೆ. (೧-೨ ಭಾಷ್ಯ). ವಿಶ್ವ ತೈಜಸರಲ್ಲಿ ಮನೋ ವ್ಯಾಪಾರವೆಂಬ ವೃತ್ತಿ ಜ್ಞಾನವಿರುವುದರಿಂದ ಅವಕಲ್ಲಿ

ವಿಷಯ ವಿಷಯಿಭಾವ ಇರುತ್ತದೆ. ಎಂದರೆ ತಿಳಿಯತಕ್ಕವನು, ತಿಳಿಯಲ್ಪಡುವ ವಸ್ತು–ಎಂಬ ಎರಡು ಅಂಶಗಳಿರುತ್ತವೆ. ಪ್ರಾಜ್ಞನಲ್ಲಿ ವೃತ್ತಿ ಜ್ಞಾನವಿಲ್ಲದ್ದರಿಂದ ವಿಷಯ ವಿಷಯಿಭಾವ ಇಲ್ಲ. ಆದ್ದರಿಂದ ಪ್ರಾಜ್ಞನು ಏಕೀಭೂತ. ಸುಷುಪ್ತಿಯಲ್ಲಿ ಜ್ಞಾನವು ಮನಸ್ಸಿನ ಮೂಲಕ ಇಂದ್ರಿಯಗಳ ದ್ವಾರಾ ಸ್ಪಂದಿಸುವುದಿಲ್ಲ. ಅದು ಮಂಜಿನಗೆಡ್ಡೆಯಂತೆ ಘನೀಭೂತವಾಗಿ ಬಿಟ್ಟಿರುತ್ತದೆಯಾದ್ದರಿಂದ ಪ್ರಾಜ್ಞನು ಘನಪ್ರಜ್ಞ, ಪ್ರಜ್ಞೆ ಎಂದರೆ ಜ್ಞಾನ. ಆದ್ದರಿಂದಲೇ ಮಾಂಡೂಕ್ಯೋಪನಿಷತ್ತಿನಲ್ಲಿ ಪ್ರಜ್ಞಾನ ಘನ ಎಂದು ಹೇಳಿದೆ. ಭಾಷ್ಯಕಾರರೂ ಸಹ ಸುಷುಪ್ತಿಯಲ್ಲಿ ಪ್ರಾಜ್ಞನ ಜ್ಞಾನಗಳಿಗೆ ಸ್ಪಂದನಗಳಿಲ್ಲದ್ದರಿಂದ ಅವು ಗಟ್ಟಿಯಾಗಿವೆಯೋ ಎಂಬಂತೆ ಘನ ವಾಗಿರುವುದರಿಂದ ಪ್ರಾಜ್ಞನು ಪ್ರಜ್ಞಾನಘನ ಎಂದು ಬರೆದಿದ್ದಾರೆ. **ದಕ್ಷಿಣಾಕ್ಷಿಮುಖೇ ವಿಶ್ವಃ** ಎಂಬ (೧-೨) ಕಾರಿಕೆಯ ಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಈ ಅಭಿಪ್ರಾಯದ ಮಾತುಗಳನ್ನು ಬರೆದಿದ್ದಾರೆ. ಏನೆಂದರೆ **''ಯತ್ರೈತತ್ ಪುರುಷಃ ಸ್ವಪಿತಿ ನಾಮ ಸತಾ ನಾಮ ಸೋಮ್ಯ ತದಾ ಸಂಪನ್ನೋ ಭವತಿ''** (ಛಾ. ೬-೮-೯) ಎಂಬ ಶ್ರುತಿಯಂತೆ ಪ್ರಾಜ್ಞನು ಸುಷುಪ್ತಿಯಲ್ಲಿ ಸತ್ತಿನೊಡನೆ ಲೀನನಾಗುತ್ತಾನಷ್ಟೆ. ಆಗ ಪ್ರಸವ ಬೀಜವಾದ ಅವಿದ್ಯೆಯೊಡನೆಯೇ ಲೀನವಾಗುತ್ತಾನೆ. ಇದು ವ್ಯಷ್ಟಿಯಲ್ಲಿ ಪ್ರಾಜ್ಞನ ವಿಷಯ ವಾಯಿತು. ಸಮಷ್ಟಿಯಲ್ಲಿ ಅವ್ಯಾಕೃತನೂ ಸಹ ಅವನ ಸುಷುಪ್ತಿ ಕಾಲವಾದ ಪ್ರಳಯ ದಲ್ಲಿ ಪ್ರಸವ ಬೀಜವಾದ ಮಾಯೆಯೊಡನೆಯೇ ಸತ್ತಿನಲ್ಲಿ ಲೀನ ನಾಗುತ್ತಾನೆಂದು ತಿಳಿಯಬೇಕು. ಭಾಷ್ಯದಲ್ಲಿ **''ಬೀಜಾತ್ಮಕತ್ವಾಭ್ಯುಪಗಮಾತ್ ಸತಃ''** ಎಂದು ಸ್ಪಷ್ಟವಾಗಿ ಹೇಳಿದ್ದಾರೆ. **''ಯದಿ ಹಿ ನಿರ್ಬೀಜರೂಪಂ ವಿವಕ್ಷಿತಂ ಬ್ರಹ್ಮ ಅಭವಿಷ್ಯತ್........ ಸತಿ ಲೀನಾನಾಂ ಸಂಪನ್ನಾನಾಂ ಸುಷುಪ್ತ ಪ್ರಲಯಯೋಃ ಪುನರುತ್ಥಾನಾನುಪಪತ್ತಿಃ ಸ್ಯಾತ್''** || ಎಂದೂ ಹೇಳಿದ್ದಾರೆ. ಸುಷುಪ್ತಿಯಲ್ಲಿ ಜೀವನು ಶುದ್ಧಬ್ರಹ್ಮದಲ್ಲಿ ಲೀನನಾಗಿ ಶುದ್ಧ ಬ್ರಹ್ಮವೇ ಆಗಿಬಿಟ್ಟರೆ, ಮತ್ತೆ ಎಚ್ಚರವಾಗಿ ಸಂಸಾರಕ್ಕೆ ಬರುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವೇ ಇಲ್ಲದೆ ಹೋದೀತು. ಸತ್ತಿನಲ್ಲಿ ಪೂರ್ತಿ ಲೀನವಾಗಿ ಸತ್ ಸ್ವರೂಪವಾದರೂ ಎಚ್ಚರ ವಾಗುತ್ತದೆಯಾದರೆ, ಮುಕ್ತನಾದವನಿಗೂ ಪುನರ್ಜನ್ಮ ಬರಬೇಕಾದೀತು ಎಂದು ಭಾಷ್ಯಾಶಯ.

**'ಸ್ವಾಪ್ಯಯಾತ್'** ಎಂಬ ಬ್ರಹ್ಮಸೂತ್ರದ (೧-೧-೯) ಭಾಷ್ಯದಲ್ಲಿಯೂ ಸಹ **''ಸ್ವಂ ಅಪೀತೋ ಭವತಿ''** ಎಂಬ ಶ್ರುತಿ ವಾಕ್ಯಕ್ಕೆ ಹೀಗೆ ಅರ್ಥವನ್ನು ಬರೆದಿದ್ದಾರೆ. **''ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾಮುಪಾಧಿ ಕೃತ ವಿಶೇಷಾಭಾವಾತ್ ಸ್ವಾತ್ಮನಿ ಪ್ರಲೀನ ಇವೇತಿ ಸ್ವಮಪೀತೋ**

**ಭವತೀತ್ಯುಚ್ಯತೇ''**. ಇದರ ಅರ್ಥ– ಸ್ವಪ್ನ, ಜಾಗರಣ ಎಂಬ ಎರಡು ಉಪಾಧಿಗಳೂ ಕಳೆದಾಗ ಅನ್ಯಥಾಗ್ರಹಣವಿಲ್ಲದ್ದರಿಂದ ತನ್ನ ನಿಜ ಸ್ವರೂಪದಲ್ಲಿ ಸೇರಿ ಹೋದನೋ ಎಂಬಂತೆ ಆಗಿ ಬಿಡುತ್ತಾನೆ. ಪೂರ್ತಿಯಾಗಿ ವಿಲೀನನಾಗುವುದಿಲ್ಲ. ಅಗ್ರಹಣಕ್ಕೆ ಕಾರಣವಾದ ಅವಿದ್ಯೆಯೂ ಕರ್ಮ ಸಂಸ್ಕಾರವೂ ಇದ್ದೇ ಇರುತ್ತದೆ. ಆದ್ದರಿಂದಲೇ ಭಾಷ್ಯಕಾರರು, ಪ್ರಲೀನ ಇವಎಂದು ಇವ ಶಬ್ದವನ್ನು ಸೇರಿಸಿ ಅರ್ಥವನ್ನು ಬರೆದಿದ್ದಾರೆ. ಜೀವನಿಗಿರುವ ಉಪಾಧಿಯಲ್ಲಿ ಬಹುಭಾಗ ಕಳೆದಿದೆ. ಅವಿದ್ಯೆ ಇರುವುದರಿಂದ ಪೂರ್ತಿ ಕಳೆದಿಲ್ಲ–ಎಂಬುದೇ ಭಾಷ್ಯಾಶಯವಾಗಿರುತ್ತದೆ. ಪ್ರಾಚೀನವ್ಯಾಖ್ಯಾನಕಾರರೆಲ್ಲರೂ ಇದನ್ನೇ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಗಾಢನಿದ್ರೆಯಲ್ಲಿ ಅಂತಃಕರಣವು ತನಗೆ ಕಾರಣವಾದ ಅವಿದ್ಯೆಯಲ್ಲಿ ಸಂಸ್ಕಾರ ರೂಪದಿಂದ ಇರುತ್ತದೆಯೆಂದೂ ಅದೇ ಅಂತಃಕರಣದ ವಿಶ್ರಾಮಸ್ಥಾನವೆಂದೂ ಹೇಳಿದ್ದಾರೆ. ಅಂತಃಕರಣದ ಎಂದರೆ ಮನಸ್ಸಿನ ಪೂರ್ಣವಿಶ್ರಾಂತಿಯೇ ಸುಷುಪ್ತಿ.

ಶ್ರೀ ಗೌಡಪಾದಾಚಾರ್ಯರು **''ಬೀಜ ನಿದ್ರಾಯತಃ ಪ್ರಾಜ್ಞಃ ಸಾ ಚ ತುರ್ಯೇ ನವಿದ್ಯತೇ''** ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಬೀಜನಿದ್ರೆಯೆಂದರೆ ಸುಷುಪ್ತಿಯಿಂದ ಎಚ್ಚರಗೊಂಡು ಮತ್ತೆ ಸಂಸಾರಕ್ಕೆ ಬರಲು ಕಾರಣವಾದ ನಿದ್ರೆ. ಅದೇ ಅವಿದ್ಯೆ, ಬೀಜನಿದ್ರಾ, ಅನಾದಿ ನಿದ್ರಾ, ಮೂಲಾವಿದ್ಯಾ–ಇವೆಲ್ಲವೂ ಪರ್ಯಾಯ ನಾಮಗಳು.

ನಿದ್ರಿಸುವ ಪ್ರಾಜ್ಞನು ಆನಂದಮಯನೆಂದೂ ಆನಂದಭುಕ್ ಎಂದೂ ಮಾಂಡೂಕ್ಯೋಪಪನಿಷತ್ತು ಹೇಳಿದೆ. **''ಮನಸೋ ವಿಷಯ ವಿಷಯ್ಯಾಕಾರ–ಸ್ಪಂದನಾಯಾಸಾಭಾವಾತ್ ಆನಂದಮಯಃ ಆನಂದಪ್ರಾಯಃ। ನಾನಂದ ಏವ । ಅನಾತ್ಯಂತಿಕತ್ವಾತ್''** ಎಂದು ಶ್ರೀ ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ''ನಿದ್ರೆಯಲ್ಲಾಗುವ ಆನಂದವು ವಿಷಯ ಭೋಗ ಜನ್ಯವಲ್ಲ. ಮನಸ್ಸಿಗೆ ಯಾವ ಸ್ಪಂದನವೂ ಇಲ್ಲದ್ದರಿಂದ ಪೂರ್ಣವಿಶ್ರಾಂತಿಯಲ್ಲಾಗುವ ಅತ್ಯಂತ ಅನಾಯಸ ಸ್ಥಿತಿಯೇ ಅಲ್ಲಿ ಆನಂದವಾಗಿದೆ. ಈ ಆನಂದವೇ ಪ್ರಚುರವಾಗಿರುವುದರಿಂದ ಪ್ರಾಜ್ಞನು ಆನಂದಮಯ, ಆದ್ದರಿಂದಲೇ ಆನಂದ ಭುಕ್. ಸ್ವತಃ ಆನಂದ ಸ್ವರೂಪನಾದ ಬ್ರಹ್ಮನಲ್ಲ. ಆನಂದಮಯ ಎಂಬಲ್ಲಿ ಪ್ರಾಚುರ್ಯಾರ್ಥದಲ್ಲಿ ಮಯಟ್ ಪ್ರತ್ಯಯ ಬಂದಿದೆ.

ಆನಂದಗಿರಿವ್ಯಾಖ್ಯಾನದಲ್ಲಿ ''ಪ್ರಾಜ್ಞನು ಅಗ್ರಹಣರೂಪವಾದ ಕಾರಣಾವಿದ್ಯೆಯಿಂದ ಉಪಹಿತನಾದ ಪ್ರಯಕ್ತ ಅವನು ಆನಂದ ಪ್ರಚುರನೇ ಹೊರತು ಆನಂದನಲ್ಲ. ಪ್ರಾಜ್ಞನಿಗೆ ಅವಿದ್ಯೆ ಇಲ್ಲದೇ ಹೋಗಿದ್ದರೆ ಅವನು ಮುಕ್ತನೇ ಆಗಿಬಿಡುತ್ತಿದ್ದ ಮತ್ತೆ ಜಾಗ್ರತ್ತಿಗೆ ಬರುತ್ತಿರಲಿಲ್ಲ'' ಎಂದು ಹೇಳಿದೆ.

ಜಾಗ್ರತ್ತಿಗೆ ಬಂದ ಮೇಲೆ **''ಸುಖಮಹಮಸ್ವಾಪ್ಸಂ ನ ಕಿಂಚಿದ-ವೇದಿಷಮ್''** ''ನಾನು ಸುಖವಾಗಿ ನಿದ್ರಿಸಿದೆ. ಆಗ ನನಗೆ ಏನೂ ಗೊತ್ತಾಗ ಲಿಲ್ಲ'' ಎಂದು ಎಲ್ಲರೂ ಹೇಳುತ್ತಾರೆ. ಏನೂ ಗೊತ್ತಾಗಲಿಲ್ಲ ಎಂಬುದರಿಂದಲೇ ಆಗ ಭೋಗಕ್ಕೆ ವಿಷಯವೇನೂ ಇರಲಿಲ್ಲವೆಂದೂ ಭಾಷ್ಯಕಾರರು ಹೇಳಿದಂತೆ ಅತ್ಯಂತ ಅನಾಯಾಸ ಸ್ಥಿತಿಯೇ ಆನಂದವೆಂದೂ ಸ್ಪಷ್ಟವಾಗುತ್ತದೆ. ಅದೇನೋ ಸರಿ. ಆದರೆ 'ಸುಷುಪ್ತಿಯಲ್ಲಿ ಆನಂದವಿದೆ. ಯಾವ ಚಿಂತೆಯೂ ಇರುವುದಿಲ್ಲ' ಎಂದು ನಮಗೆ ಗೊತ್ತಾದದ್ದು ಹೇಗೆ? ನಿದ್ರೆಯಲ್ಲಿ ಅಂತಃಕರಣದ ವ್ಯಾಪಾರವೇ ಇರುವುದಿಲ್ಲ. ಗಾಢನಿದ್ರೆಯಲ್ಲಿ ''ಆಹಾ! ನಾನೀಗ ಸುಖವಾಗಿದ್ದೇನೆ. ಯಾವ ಚಿಂತೆಯೂ ಇಲ್ಲ'' ಎಂದು ಯಾರ ಅನುಭವಕ್ಕೂ ಬಂದಿರುವುದಿಲ್ಲ. ಅನುಭವಕ್ಕೆ ಬರದಿರುವಾಗ ಅದು ಸುಖದ ಸ್ಮೃತಿ (ನೆನಪು) ಅಲ್ಲ. **'ಸಂಸ್ಕಾರಜನ್ಯಜ್ಞಾನಂ ಸ್ಮೃತಿಃ'** ಎಂದು ಸ್ಮೃತಿಯ ಲಕ್ಷಣವಿದೆ. ಸ್ಮರಣೆಯಾಗಬೇಕಾದರೆ ಆ ವಿಷಯ ವನ್ನು ಹಿಂದೆ ಅನುಭವಿಸಿರಬೇಕು. ಅನುಭವದಿಂದ ಅಂತಃಕರಣದಲ್ಲಿ ಒಂದು ಸಂಸ್ಕಾರ ಹುಟ್ಟುತ್ತದೆ. ಆ ಸಂಸ್ಕಾರದಿಂದ ಕಾಲಾಂತರದಲ್ಲಿ ಹುಟ್ಟುವ ಜ್ಞಾನಕ್ಕೆ ಸ್ಮೃತಿ–ಸ್ಮರಣೆ ಎಂದು ಹೆಸರು. ನಾವು ಅನುಭವಿಸದೇ ಇರುವುದು ಎಂದಿಗೂ ಸ್ಮರಣೆಗೆ ಬರುವುದಿಲ್ಲ. ಸುಷುಪ್ತಿಯಲ್ಲಿ ಅಂತಃಕರಣವೇ ವೃತ್ತಿರಹಿತವಾಗಿ ತೆಪ್ಪಗಿರುವಾಗ ಅದು ಸುಖವನ್ನು ಅನುಭವಿಸು ವುದೇ ಇಲ್ಲ. ಅದರಲ್ಲಿ ಸಂಸ್ಕಾರವು ಹುಟ್ಟುವುದಾದರೂ ಹೇಗೆ? ''ಗಾಢನಿದ್ರೆಯಲ್ಲಿ ನಾನು ಸುಖವಾಗಿದ್ದೆ. ನನಗೆ ಗೊತ್ತಾಗುವುದಿಲ್ಲವೆ?'' ಎಂದು ಜನರು ಹೇಳಿಕೊಳ್ಳುವುದು ಹೌದು. ಆದರೆ ಅದು ವಿಮರ್ಶೆಗೆ ನಿಲ್ಲುವುದಿಲ್ಲ. ಗಾಢನಿದ್ರೆಯಲ್ಲಿರುವಾಗ ''ಈಗ ನಾನು ಸುಖ ವಾಗಿದ್ದೇನೆ'' ಎಂಬುದು ಅನುಭವಕ್ಕೆ ಬಂದಿತ್ತೇನು?

ಈ ಪ್ರಕಾರವಾದ ಶಂಕೆಗೆ ಶಾಸ್ತ್ರಕಾರರು ಹೇಳುವ ಸಮಾಧಾನವೇನೆಂದರೆ, ಸರ್ವರಿಗೂ ಅವಿದ್ಯೆಯೆಂಬುದೊಂದು ಸರ್ವದಾ ಇದ್ದೇ ಇರುತ್ತದೆ. ಅದಕ್ಕೆ ಅನೇಕ ವೃತ್ತಿಗಳು (ವ್ಯಾಪಾರಗಳು) ಇರುತ್ತವೆ. ಆತ್ಮಸ್ವರೂಪವನ್ನು ಮರೆಮಾಚುವ ಅಜ್ಞಾನ ಎಂಬುದು ಈ ಅವಿದ್ಯೆಯ ಪ್ರಾಥಮಿಕ ವೃತ್ತಿ. ಇದು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿಯೂ ಇದ್ದು ಜೀವಾತ್ಮನ ಮೂಲ ಸ್ವರೂಪವು ತಿಳಿಯದಂತೆ ಮಾಡಿರುತ್ತದೆ. ವ್ಯಾವಹಾರಿಕ ವಸ್ತುಗಳನ್ನು ಈ ಅವಿದ್ಯೆಯೇ ಕಲ್ಪಿಸಿಕೊಂಡಿರುವುದರಿಂದ ಅವುಗಳ ಜ್ಞಾನವನ್ನು ಅದು ತಡೆಗಟ್ಟುವು ದಿಲ್ಲ. ಆದರೆ ಸುಷುಪ್ತಿಯಲ್ಲಿ ವ್ಯಾವಹಾರಿಕ ವಸ್ತುಗಳೂ ಗೋಚರಿಸುವುದಿಲ್ಲವಾದ್ದರಿಂದ ಈ ಅವಿದ್ಯೆಗೆ ಅವುಗಳ ಜ್ಞಾನವನ್ನು ತಡೆಗಟ್ಟುವ ಇನ್ನೊಂದು ವೃತ್ತಿಯನ್ನೂ ಒಪ್ಪಬೇಕಾಗುತ್ತದೆ. ಎಚ್ಚೆತ್ತ ಮೇಲೆ ಜಾಗ್ರತ್ತಿನಲ್ಲಿ ''ನಾನು ಸುಖವಾಗಿ ನಿದ್ರಿಸಿದೆ.

ಬೇರೆ ಯಾವುದೂ ನನಗೆ ತಿಳಿಯಲಿಲ್ಲ'' ಎಂಬ ಅನುಸಂಧಾನವಿರುವುದರಿಂದ ''ಸಾಕ್ಷಿ, ಸುಖ, ನಿದ್ರೆ, ವ್ಯಾವಹಾರಿಕ ವಸ್ತುಗಳ ಅಜ್ಞಾನ'' ಎಂಬ ನಾಲ್ಕು ಅಂಶ ಗಳೂ ಈ ಅವಿದ್ಯೆಯ ವೃತ್ತಿ ವಿಶೇಷಗಳು. ಈ ಅವಿದ್ಯಾವೃತ್ತಿಗಳಿಂದ ಸುಖಾದಿ ಗಳೆಲ್ಲವೂ ಅನುಭವಕ್ಕೆ ಬಂದಿರುತ್ತವೆಯಾದ್ದರಿಂದ ಈ ಸುಖಾದಿಗಳ ಜ್ಞಾನವು ಸ್ಮರಣರೂಪವೇ ಸರಿ. ಜಾಗ್ರತ್ತಿನಲ್ಲಿ ಅಂತಃಕರಣವೇ ಸುಖಾದಿಗಳನ್ನು ಸ್ಮರಿಸಿ ಕೊಳ್ಳುತ್ತದೆ. 'ನಾನು' ಎಂಬ ಅಹಂಕಾರವೃತ್ತಿಯೂ ಅಂತಃಕರಣದ್ದೇ ಆಗಿರುತ್ತದೆ. ಅವಿದ್ಯೆ ಅನುಭವಿಸಿದ್ದನ್ನು ಅಂತಃಕರಣವು ಸ್ಮರಿಸಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆಗೆ ಅಧ್ಯಾಸದಿಂದ ಎಂಬುದೇ ಉತ್ತರ. ಇಲ್ಲಿ ಅಧ್ಯಾಸವೆಂದರೆ ಅವಿದ್ಯಾ – ಅಂತಃಕರಣಗಳಿಗೆ ಆಗುವ ತಾದಾತ್ಮ್ಯ ಭ್ರಮೆ. ಆದ್ದರಿಂದ ಜಾಗ್ರತ್ತಿನಲ್ಲಾಗುವ ಸುಖಜ್ಞಾನವು ಸ್ಮರಣೆ ಎಂದು ಶಾಸ್ತ್ರಕಾರರ ಅಭಿಮತ.

ಇದೆಲ್ಲವನ್ನೂ ಸರಳವಾಗಿ ತಿಳಿಸಬೇಕಾದರೆ, ಸುಷುಪ್ತಿಯಲ್ಲಿ ಅವಿದ್ಯೆಯು ನಾನಾವೃತ್ತಿಗಳನ್ನು ಕಲ್ಪಿಸಿಕೊಂಡು ಸುಖವನ್ನು ಅನುಭವಿಸಿ ಜಾಗ್ರತ್ತಿಗೆ ಬಂದೊಡನೆಯೇ ಆ ಸುಖಾನುಭವವನ್ನು ಸಂಸ್ಕಾರಸಹಿತವಾಗಿ ಅಂತಃಕರಣಕ್ಕೆ ವರ್ಗಾಯಿಸಿಬಿಡುತ್ತದೆ ಎಂದಂತಾಯಿತು! ಇವೆಲ್ಲವೂ ಶಾಸ್ತ್ರಕಾರರು ಕಲ್ಪಿಸಿ ಕೊಂಡ ಯುಕ್ತಿಗಳು. ಇದಕ್ಕೆ ಆಧಾರವಾದ ಶ್ರುತಿಯೂ ಇಲ್ಲ, ಭಾಷ್ಯವಚನವೂ ದೊರೆಯುವುದಿಲ್ಲ.

''ನಾನು ಸುಖವಾಗಿ ನಿದ್ರಿಸಿದೆ. ಆಗ ನನಗೆ ಏನೂ ತಿಳಿಯಲಿಲ್ಲ'' ಎಂಬುದು ಸರ್ವರ ಅನುಭವ. ಇಲ್ಲಿ ಸುಖವೆಂದೂ ಸರ್ವವಸ್ತುಗಳ ಅಜ್ಞಾನವೆಂದೂ ಎರಡು ಅಂಶಗಳಿವೆಯೆಂದು ಗ್ರಂಥಕಾರರು ಹೇಳಿದ್ದಾರೆ. ಏನೂ ತಿಳಿಯಲಿಲ್ಲವೆಂದು ಹೇಳುವಾಗಲೇ ಸುಖವು ತಿಳಿಯಿತು ಎನ್ನುವುದು ವಿರುದ್ಧವಲ್ಲವೆ? ಆದ್ದರಿಂದ ಯಾವ ವಸ್ತುವಿನ ಜ್ಞಾನವೂ ಇರಲಿಲ್ಲ, ಸರ್ವವಸ್ತುಗಳ ಅಜ್ಞಾನವೆಂಬ ಒಂದು ಅಂಶವೇ ಸರಿಯಾದದ್ದು. ಸುಖಾಂಶವು ಕಾಲ್ಪನಿಕ. ಭಾರವನ್ನು ಹೊತ್ತುಕೊಂಡು ಬಂದವನು ಭಾರವನ್ನು ಇಳಿಸಿದ ಮೇಲೆ ''ಈಗ ಸುಖವಾಯಿತು'' ಎಂದು ಕೊಳ್ಳುತ್ತಾನೆ. ಸುಖವಾಗಲು ಅವನು ಏನನ್ನು ತಿಂದನು? ಯಾವ ಭೋಗ ವನ್ನು ಅನುಭವಿಸಿದನು? ಭಾರ ಹೋದದ್ದು, ಭಾರದ ಅಭಾವವೇ ಸುಖ ವೆನಿಸಿತು. ತಲೆನೋವು, ಕಿವಿನೋವು ಮುಂತಾದುದರಿಂದ ದುಃಖಿಸತಕ್ಕವನು ವೈದ್ಯನಿತ್ತ ಮಾತ್ರೆಯನ್ನು ತಿಂದಾಗ ನೋವು ಹೋಗಿಬಿಡುತ್ತದೆ. ನೋವಿನಿಂದ ನರಳುತ್ತಿದ್ದ ವನು ''ಆಹಾ! ಬಹಳ ಸುಖವಾಯಿತು'' ಎನ್ನುತ್ತಾನೆ. ಅಲ್ಲಿ ನೋವಿನ ಅಭಾವವೇ ಸುಖ ವೆನಿಸುತ್ತದೆ. ಆದ್ದರಿಂದ ಸುಷುಪ್ತಿಕಾಲದ ಆನಂದವು ''ಅತ್ಯಂತ ಅನಾಯಾಸ ಸ್ಥಿತಿ'' ಎಂದು ಶ್ರೀ ಭಗವತ್ಪಾದರು ಸ್ಪಷ್ಟವಾಗಿ ಬರೆದಿದ್ದಾರೆ.

**'ತ್ರಿಷು ಧಾಮಸು ಯದ್ಭೋಜ್ಯಂ'** ಎಂಬ ಕಾರಿಕೆಯಲ್ಲಿ (೧-೫) ಶ್ರೀ ಗೌಡಪಾದರು ''ಅವಸ್ಥಾತ್ರಯದ ಭೋಜ್ಯವೆಲ್ಲವೂ ಒಬ್ಬ ಭೋಕ್ತೃವಿಗೇ ಭೋಜ್ಯ ವಾಗಿರುತ್ತದೆ'' ಎಂದು ತಿಳಿಸಿದ್ದಾರೆ. ಭಾಷ್ಯಕಾರರೂ ಅದನ್ನು ಅನುಮೋದಿಸಿ ವ್ಯಾಖ್ಯಾನ ಮಾಡಿದ್ದಾರೆ. ಹೀಗಿರುವಾಗ ಸುಷುಪ್ತಿಯ ಆನಂದವನ್ನು ಅವಿದ್ಯೆಯು ಅನುಭವಿಸಿ ಪ್ರಾಜ್ಞನಾದ ಜೀವನ ಅಂತಃಕರಣಕ್ಕೆ ಅಧ್ಯಾಸದಿಂದ ವರ್ಗಾಯಿಸುತ್ತದೆ ಎಂಬುದು ಹೇಗೆ ಯುಕ್ತವಾದೀತೆಂಬುದನ್ನು ವಿದ್ವಾಂಸರು ಪರಿಶೀಲಿಸಬೇಕು.

ಗಾಢನಿದ್ರೆ ಬಂದಾಗ ಅಂತಃಕರಣವು ಅವಿದ್ಯೆಯಲ್ಲಿ ಲೀನವಾಗಿ ಸಂಸ್ಕಾರ ರೂಪವನ್ನು ತಳೆದರೆ, ಆಗ ದೇಹದಲ್ಲಿ ಜೀವವೇ ಇಲ್ಲ ಎಂದಾಗುವುದಿಲ್ಲವೆ? ಏಕೆಂದರೆ, ಅಂತಃಕರಣಾವಚ್ಛಿನ್ನ ಚೈತನ್ಯವೇ ಜೀವವಾದ್ದರಿಂದ ಅಂತಃಕರಣವು ಆಗಲೂ ಸ್ವಸ್ವರೂಪದಲ್ಲಿ ಇರಲೇಬೇಕು. ಶ್ರೀ ಗೌಡಪಾದರು ಚಿತ್ತವನ್ನೇ ಜೀವ ವೆಂದು ೩-೪ನೇ ಪ್ರಕರಣಗಳಲ್ಲಿ ವ್ಯವಹರಿಸಿದ್ದಾರೆ. ಚಿತ್ತವೆಂದರೆ ಚೈತನ್ಯ ವಿಶಿಷ್ಟವಾದ ಅಂತಃಕರಣವೇ ಜೀವವೆಂದು ಅವರ ಆಶಯವಾಗಿರಬೇಕು.

ಅವಿದ್ಯೆಗೆ ಅಗ್ರಹಣ, ಅನ್ಯಥಾಗ್ರಹಣಗಳೆಂಬ ಎರಡು ಕಾರ್ಯಗಳುಂಟು. ಸುಷುಪ್ತಿಯಲ್ಲಿ ಅನ್ಯಥಾಗ್ರಹಣವಿಲ್ಲ. ಅಗ್ರಹಣವೆಂಬ ಬೀಜಶಕ್ತಿಯು ಮಾತ್ರ ಪ್ರಬಲವಾಗಿದ್ದು ವ್ಯಾವಹಾರಿಕ ವಸ್ತುಗಳನ್ನೂ ಮಾನಸಿಕ ವಸ್ತುಗಳನ್ನೂ ಸಹ ಗೋಚರಿಸದಂತೆ ಮರೆಮಾಚಿ ಬಿಡುತ್ತದೆ. ಆದ್ದರಿಂದ ಸುಷುಪ್ತನಿಗೆ ಬಾಹ್ಯ ವಸ್ತುವೂ ತಿಳಿಯುವುದಿಲ್ಲ, ಮಾನಸ ಚಿಂತೆಗಳೂ ಇರುವುದಿಲ್ಲ. ನಿದ್ರೆಯಲ್ಲಿ ನನಗೆ ಏನೂ ತಿಳಿಯಲಿಲ್ಲ ಎನ್ನುವುದು ಇದಕ್ಕಾಗಿ. ವಿದ್ಯುದ್ದೀಪದ ಬಲ್ಬನ್ನು ಒಂದು ಗಡಿಗೆಯಿಂದ ಮುಚ್ಚಿಬಿಟ್ಟರೆ ದೀಪ ಉರಿಯುತ್ತಿದ್ದರೂ ಯಾವ ಪದಾರ್ಥವೂ ಕಾಣುವುದಿಲ್ಲ. ಹಾಗೆಯೇ ಅಗ್ರಹಣವನ್ನುಂಟು ಮಾಡುವ ಬೀಜನಿದ್ರೆಯು ಅಂತಃಕರಣವನ್ನು ಸರ್ವತೋಮುಖವಾಗಿ ವ್ಯಾಪಿಸಿಬಿಟ್ಟಾಗ ಅಂತಃಕರಣದಲ್ಲಿ ಚೈತನ್ಯಯುಕ್ತವಾದ ಜ್ಞಾನವೃತ್ತಿಯು ಇದ್ದರೂ ಬೀಜನಿದ್ರೆಯು ಯಾವ ವಸ್ತುವನ್ನೂ ತಿಳಿಯ ಗೊಡುವುದಿಲ್ಲ. ಜ್ಞಾನಕ್ಕೆ ಸ್ಪಂದನವೇ ಇಲ್ಲವಾದ್ದರಿಂದ ಪ್ರಾಜ್ಞನು ಪ್ರಜ್ಞಾನ ಘನ ನಾಗಿರುತ್ತಾನೆ. ಹಾಗಿರುವುದೇ ಅತ್ಯಂತ ಅನಾಯಾಸ ಸ್ಥಿತಿ. ಒಂದು ರೀತಿಯಲ್ಲಿ ಜ್ಞಾನವು ಅನುದ್ಭೂತ ಸ್ಥಿತಿಯಲ್ಲಿರುತ್ತದೆ ಎನ್ನಬಹುದು. ಅಂತಃಕರಣದ ಮೂಲಕ ಸ್ಪಂದಿಸುವ ಚೈತನ್ಯದ ಜ್ಞಾನಶಕ್ತಿಯನ್ನು ತಡೆಯಲು ಅವಿದ್ಯೆಗೆ ಸಾಮರ್ಥ್ಯವಿಲ್ಲ. ಅದು ಸ್ವಯಂಕಲ್ಪಿತ ಬಾಹ್ಯಾಂತರ ವಸ್ತುಗಳನ್ನು ಮಾತ್ರ ಮರೆ ಮಾಡಬಲ್ಲದು. ಜ್ಞಾನವು ಆ ವಸ್ತುಗಳನ್ನು ಗ್ರಹಿಸಲಾರದೆ ಅತ್ಯಂತ ಅನಾಯಾಸ ಸ್ಥಿತಿಯಲ್ಲಿರುತ್ತದೆ. ಅದೇ ಅದರ ಸ್ವರೂಪ ಸುಖ. ಆ ಸಮಯದಲ್ಲಿ ಈ ಸ್ವರೂಪಾನಂದದ ಹೊರತಾಗಿ ಇನ್ನೇನೂ ಇರುವುದಿಲ್ಲವಾದ್ದರಿಂದ ಪ್ರಾಜ್ಞನು

ಆನಂದಪ್ರಚುರ. ಆದ್ದರಿಂದಲೇ ಆನಂದಭುಕ್. ಈ ಜ್ಞಾನವೃತ್ತಿಯೇ ಅನಾಯಾಸ ಸ್ಥಿತಿರೂಪವಾದ್ದರಿಂದ ಅದನ್ನರಿಯಲು ಇನ್ನೊಂದು ಜ್ಞಾನವೃತ್ತಿ ಬೇಕಾಗಿಲ್ಲ. ದೀಪವನ್ನು ನೋಡಲು ಇನ್ನೊಂದು ದೀಪ ಬೇಕಾಗಿಲ್ಲ. ಅದು ಸ್ವಯಂಪ್ರಕಾಶ.

ಹಾಗಾದರೆ 'ನಾನು ಸುಖವಾಗಿದ್ದೇನೆ' ಎಂಬ ಜ್ಞಾನವು ಸುಷುಪ್ತಿಯಲ್ಲಿ ಏಕೆ ಇರುವುದಿಲ್ಲ? ಅಹಂಕಾರ ವೃತ್ತಿಯು (ಅಹಂಮತಿಯು) ಇಲ್ಲದಿರುವುದರಿಂದ. ಅಂತಃಕರಣದಲ್ಲಿ 'ಅಹಂ' ಎಂಬ ವೃತ್ತಿಯೇ ಹುಟ್ಟದಿರುವುದರಿಂದ ಸುಖಾನುಭವಕ್ಕೆ ಆಶ್ರಯನಾದವನು (ನಾನು) ತೋರುವುದೇ ಇಲ್ಲ. ಬೀಜನಿದ್ರೆಯ ವ್ಯಾಪಾರವಾದ ಅಗ್ರಹಣವು ಹಿಂಜರಿದೊಡನೆ ಪ್ರಾಜ್ಞನು ಜಾಗ್ರತ್ತಿಗೆ ಬರುತ್ತಾನೆ. ಅಂತಃಕರಣಕ್ಕೆ ಮುಚ್ಚಿದ ಅಗ್ರಹಣವು ಸರಿದೊಡನೆ ಅಂತಃಕರಣವೃತ್ತಿಗಳು ಉದ್ಭೂತವಾಗಿ ಎದ್ದುಕೊಳ್ಳುತ್ತವೆ. ಹಾಗೆ ಎದ್ದುಕೊಂಡ ಅಹಂಕಾರದ 'ಅಹಂ' ಎಂಬ ಅಂಶದಲ್ಲಿ ಸುಖಾನುಭವ ವೃತ್ತಿಯು ಆಶ್ರಯವನ್ನು ಪಡೆಯುತ್ತದೆ. ಆಗ 'ನಾನು ಸುಖವಾಗಿ ನಿದ್ರಿಸಿದೆನು' ಎಂಬ ಜ್ಞಾನವು ಸ್ಮರಣೆಯೆನ್ನಿಸಿಕೊಳ್ಳುತ್ತದೆ. ಈ ರೀತಿಯಲ್ಲಿ ಸ್ಮರಣೆಯನ್ನು ಉಪಪಾದಿಸಬಹುದೆಂದು ತೋರುತ್ತದೆ.

ಶ್ರೀ ಸುರೇಶ್ವರಾಚಾರ್ಯರು 'ಇದು ಸ್ಮೃತಿಯಲ್ಲ; ವಿಕಲ್ಪ' ಎಂದು ಬರೆದಿದ್ದಾರೆ. ಅವರ ಅಭಿಪ್ರಾಯ ಹೀಗಿರಬಹುದು. ಮೇಲೆ ತಿಳಿಸಿದಂತೆ ಗಾಢನಿದ್ರೆಯಲ್ಲಿರುವಾಗ ''ನಾನು ಸುಖವಾಗಿದ್ದೇನೆ. ನನಗೆ ಯಾವ ಚಿಂತೆಯೂ ಇಲ್ಲ'' ಎಂಬ ಅನುಭವ ಬರುವುದಿಲ್ಲ. ಆ ರೀತಿಯ ಅನುಭವಜನ್ಯಸಂಸ್ಕಾರದಿಂದ ಹುಟ್ಟಿದ ಜ್ಞಾನವಲ್ಲವಾದ್ದರಿಂದ ಇದು ಸ್ಮೃತಿಯಲ್ಲ'' ಎಂದು. ವಿಕಲ್ಪವೆಂದರೇನು? ಪಾತಂಜಲ ಯೋಗಶಾಸ್ತ್ರದಲ್ಲಿ **'ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ'** ಎಂದು ಸೂತ್ರವಿದೆ. ಲೋಕದಲ್ಲಿಲ್ಲದ ಒಂದು ವಸ್ತುವನ್ನು ಶಬ್ದದಿಂದ ಹೇಳಿದಾಗ ಒಂದು ಜ್ಞಾನವೇನೋ ಹುಟ್ಟುತ್ತದೆ. ಆದರೆ ಆ ವಸ್ತುವೇ ಎಲ್ಲಿಯೂ ಇರುವುದಿಲ್ಲ. ಉದಾಹರಣೆಗೆ ಶಶಶೃಂಗ (ಮೊಲದ ಕೊಂಬು), ಗಗನಕುಸುಮ ಇತ್ಯಾದಿ ಈ ಪದಾರ್ಥಗಳೆಲ್ಲಿಯೂ ಇಲ್ಲದಿದ್ದರೂ ಈ ಶಬ್ದಗಳನ್ನು ಹೇಳಿದಾಗ ಒಂದು ಅರ್ಥವೇನೋ ಹೊಳೆಯುತ್ತದೆ. ಈ ಜ್ಞಾನಕ್ಕೆ ವಿಕಲ್ಪ ಎಂದು ಹೆಸರು. ಪ್ರಕೃತದಲ್ಲಿ 'ನಾನು ಸುಖವನ್ನು ಅನುಭವಿಸುತ್ತಿದ್ದೇನೆ' ಎಂಬ ವಿಷಯವು ಇಲ್ಲವಾದ್ದರಿಂದ ವಿಕಲ್ಪವಿದು ಎಂದು ಅಭಿಪ್ರಾಯವಿರಬಹುದು. ಅಥವಾ ವಿಶಿಷ್ಟವಾದ ಕಲ್ಪನೆ ವಿಕಲ್ಪ ಎಂಬ ಅರ್ಥವಿರಬಹುದು. ಊಹೆ ಎಂದರ್ಥ. ''ನಾನು ಹತ್ತು ಘಂಟೆಗೆ ಮಲಗಿದೆ. ಬೆಳಿಗ್ಗೆ ನಾಲ್ಕು ಘಂಟೆಗೆ ಎಚ್ಚರವಾಯಿತು. ಅಲ್ಲಿಯವರೆಗೆ ನಾನು ಗಾಢನಿದ್ರೆಯಲ್ಲಿದ್ದೆ. ಆಗ ಏನೂ ಹೊಳೆಯಲಿಲ್ಲ. ಸುಖ

ವಾಗಿತ್ತು'' ಎಂದು ಊಹಿಸಬಹುದಷ್ಟೆ? ಈ ಊಹೆಯು ಪ್ರತಿದಿನವೂ ಸರ್ವರಿಗೂ ತಪ್ಪದೆ ಬರುವುದರಿಂದ ಊಹೆಯಾದರೂ ನಿಶ್ಚಯರೂಪವನ್ನು ತಾಳಿದೆ ಎಂದು ಆಶಯವಿರಬಹುದು. ಊಹೆಯೆನ್ನುವುದೇ ಯುಕ್ತವಾಗಿ ತೋರುತ್ತದೆ.

ಮಾಂಡೂಕ್ಯೋಪನಿಷತ್ತಿನಲ್ಲಿ ಪ್ರಸ್ತುತವಾದ ಅವಸ್ಥಾತ್ರಯ ವಿಚಾರವನ್ನು ಶ್ರೀಗೌಡಪಾದರು ೨೯ ಕಾರಿಕೆಗಳಿಂದ ವಿವರಿಸಿ **''ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ''** ಎಂದು ನುಡಿದು ಆಗಮಕಾಂಡವನ್ನು ಉಪಸಂಹರಿಸಿದ್ದಾರೆ. ಉತ್ತಮಾಧಿಕಾರಿಯಾದವನು ಕೃತಕೃತ್ಯನಾಗಲು ಇಷ್ಟು ಸಾಕಾಗುತ್ತದೆ. ಆದರೆ ಮಂದ–ಮಧ್ಯಮಾಧಿಕಾರಿಗಳಿಗೆ ಸಂದೇಹ ನಿವೃತ್ತಿಯಾಗುವುದಿಲ್ಲ. ಅವರಿಗೆ ಉಪನಿಷತ್ತಿನಲ್ಲಿಯೂ ಗುರೂಪದೇಶದಲ್ಲಿಯೂ ನಂಬಿಕೆ ಇರುತ್ತದೆ. ಆದರೆ ಸಂದೇಹನಿವೃತ್ತಿಯಾಗುವುದಿಲ್ಲ.

ಸರ್ವರಿಗೂ ಒಂದೇ ವಿಧವಾಗಿ ಜಗತ್ತು ಕಾಣಿಸುತ್ತದೆ. ಹಿಂದಿನ ದಿನ ಇದ್ದದ್ದು ಕ್ರಮವಾಗಿ ಮುಂದುವರಿಯುತ್ತದೆ. ಕಾರ್ಯಕಾರಣ ಭಾವ ಇರುವುದರಿಂದಲೇ ಕೃಷಿ, ವ್ಯವಸಾಯ ಮುಂತಾದವು ವ್ಯವಸ್ಥಿತವಾಗಿ ನಡೆಯುತ್ತವೆ. ವಿಜ್ಞಾನವು ಕ್ರಮವಾಗಿ ಮುಂದುವರಿಯುವುದು ಸರ್ವರಿಗೂ ತಿಳಿದಿದೆ.

ವೇದವೂ ಸಹ ನಾನಾ ವಿಧಿಗಳನ್ನು ತಿಳಿಸಿರುವುದು ಜಗತ್ತು ಸತ್ಯವಾದ್ದರಿಂದಲೇ. ಧರ್ಮಶಾಸ್ತ್ರ, ನೀತಿಶಾಸ್ತ್ರ ಮುಂತಾದವು ಜಗತ್ತು ಸತ್ಯ ವೆಂಬುದನ್ನೇ ಸಾರಿ ಹೇಳುತ್ತವೆ. ಹೀಗೆ ~~ವಿಷ್ಣುಪಾ~~ಯಲ್ಲಿ ವಿಚಾರಿಸಿದರೂ ಜಗತ್ತು ಸತ್ಯವೆಂಬುದೇ ದೃಢಪಡುತ್ತದೆ. ವಿಶ್ವದಲ್ಲಿರುವ ಪ್ರತಿಯೊಬ್ಬರಿಗೂ ಒಂದೇ ರೀತಿ ಇದರ ಅನುಭವ ಬರುತ್ತಿದೆ. ಕನಸು ಹಾಗಲ್ಲ. ಕನಸಿಗೂ ಜಾಗ್ರತ್ತಿಗೂ ಹೋಲಿಕೆಯೇ ಯುಕ್ತವಾಗಿ ತೋರುವುದಿಲ್ಲ. ಕನಸಿನಲ್ಲಿ ಜಾಗ್ರತ್ತಿನ ಸ್ಮರಣೆ ಇದೆ. ಜಾಗ್ರತ್ತಿನಲ್ಲಿ ವಸ್ತುಗಳ ಸಾಕ್ಷಾತ್ ಉಪಲಬ್ಧಿ ಇದೆ. ಕನಸಿಗೆ ಜಾಗ್ರತ್ ಕಾರಣ. ಜಾಗ್ರತ್ತಿಗೆ ಕನಸು ಕಾರಣವಲ್ಲ ಇತ್ಯಾದಿ. ತಾರ್ಕಿಕರು, ಮೀಮಾಂಸಕರು, ಸಾಂಖ್ಯರು ಮುಂತಾದ ಶಾಸ್ತ್ರಕಾರರೂ ಸಹ ಜಗತ್ತನ್ನು ಸತ್ಯವೆಂದೇ ತಿಳಿದಿದ್ದಾರೆ. ಅವರು ವಿದ್ವಾಂಸರಲ್ಲವೆ? ಬುದ್ಧಿಶಾಲಿಗಳಲ್ಲವೆ? ಹೀಗೆ ಕೇಳತಕ್ಕ ಮಂದ ಮಧ್ಯಮಾಧಿಕಾರಿಗಳ ಶಂಕೆಗಳನ್ನು ಪರಿಹರಿಸಿ ಅದ್ವಿತೀಯಾತ್ಮನೊಬ್ಬನೇ ಸತ್ಯ, ಉಳಿದುದೆಲ್ಲವೂ ಮಿಥ್ಯೆ ಎಂದು ಮನಗಾಣಿಸುವುದಕ್ಕಾಗಿ ಮುಂದಿನ ಮೂರು ಕಾಂಡಗಳು ಪ್ರವೃತ್ತವಾಗಿವೆ. ಈ ಬಗೆಯಲ್ಲಿ ಸಂದೇಹಗಳೂ ಶಂಕೆಗಳೂ ಲೋಕದಲ್ಲಿ ಬಹುಜನರಿಗೆ ಹುಟ್ಟುತ್ತವೆ; ಕಾಡುತ್ತವೆ. ಜಗತ್ತು ಮಿಥ್ಯೆಯೆಂದು ವೇದಾಂತಿಗಳು ಹೇಳಿದರೆ ಈ ಜನರಿಗೆ ವಿಶ್ವಾಸವೇ ಮೂಡುವುದಿಲ್ಲ. ಅಂತಹವರಿಗೆ ಸಮಂಜಸವಾದ

ಎಷ್ಟು ಪರಿ

ಯುಕ್ತಿಪ್ರಮಾಣಗಳನ್ನು ತಿಳಿಸಿ, ಶಂಕಾ ಸಂದೇಹಗಳನ್ನು ಹೋಗಲಾಡಿಸಿ, ಪರಮಸತ್ಯವನ್ನು ಉಪದೇಶಿಸಿ ಅವರನ್ನು ಉದ್ಧರಿಸುವುದಕ್ಕಾಗಿ ಮುಂದಿನ ಮೂರು ಕಾಂಡಗಳನ್ನು ಶ್ರೀ ಗೌಡಪಾದಾಚಾರ್ಯರು ಅನುಗ್ರಹಿಸಿದ್ದಾರೆ. ಅದ್ವಿತೀಯವೂ ನಿರ್ವಿಶೇಷವೂ ಆದ ಪರಬ್ರಹ್ಮ ಒಂದೇ ಇದೆಯೆಂದು ನಿಶ್ಚಯ ಮೂಡಿದಾಗ ಈ ವಿಶ್ವವೆಲ್ಲವೂ ಮಾಯಾಕಲ್ಪಿತವೆಂಬುದು ಸ್ವತಃಸಿದ್ಧವಾಗುತ್ತದೆ.

**ಉಪಸಂಹಾರ :**

ಈ ಗ್ರಂಥವನ್ನು ಬರೆಯಲು ನಾನು ತೊಡಗಿದುದು ನನ್ನ ಅರ್ಹತೆಗೆ ಮೀರಿದ ಸಾಹಸಕಾರ್ಯವೆಂದೇ ತಿಳಿದಿದ್ದೇನೆ. ಶ್ರೀ ಶಂಕರಾಚಾರ್ಯಪ್ರಣೀತ ಭಾಷ್ಯ ದೊಡನೆ ಶ್ರೀ ಗೌಡಪಾದಕಾರಿಕೆಗಳನ್ನು ಅಧ್ಯಯನ ಮಾಡಲು ಪ್ರವೃತ್ತನಾದಾಗ ಸ್ವಬುದ್ಧಿ ಪರಿಶುದ್ಧಿಗಾಗಿ ಗ್ರಂಥರೂಪದಲ್ಲಿ ಬರೆಯುವ ಸಂಕಲ್ಪ ಮೂಡಿತು. ಶ್ರೀ ಸದ್ಗುರು ಕೃಪೆಯಿಂದ ನನ್ನ ಸಂಕಲ್ಪವು ಪೂರ್ಣವಾಯಿತು. ಈ ಗ್ರಂಥದಿಂದ ವೇದಾಂತ ಜಿಜ್ಞಾಸುಗಳಿಗೆ ಸ್ವಲ್ಪವಾದರೂ ಪ್ರಯೋಜನವಾದರೆ, ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇನೆ. ನನ್ನ ಅಜ್ಞಾನದಿಂದ ಗ್ರಂಥದಲ್ಲಿ ಎಲ್ಲಾದರೂ ತಪ್ಪು ಆಗಿದ್ದರೆ ಸಹೃದಯರಾದ ವಿದ್ವಾಂಸರು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.

ಮಾಂಡೂಕ್ಯೋಪನಿಷತ್ತಿನ ವಿಷಯವಾಗಿ ನಾನು ಬರೆದ ಕೆಲವು ಲೇಖನಗಳು ಹರಿಹರಪುರದ ಶ್ರೀಮಠದಿಂದ ಪ್ರಕಾಶಿತವಾಗುವ 'ಸ್ವಯಂಪ್ರಕಾಶ' ಮಾಸಪತ್ರಿಕೆ ಯಲ್ಲಿ ಮೊದಲು ಪ್ರಕಟವಾದವು. ಅವನ್ನು ಓದಿ ಸಂತುಷ್ಟರಾದ ಪರಮ ಪೂಜ್ಯರೂ ಶ್ರೀಮಠಾಧೀಶರೂ ಆದ ಶ್ರೀ ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿ ಗಳವರು ಆ ಲೇಖನಗಳನ್ನು ತಪ್ಪದೆ ಮುಂದುವರಿಸಬೇಕೆಂದು ನನಗೆ ಆದೇಶಿಸಿ ಸ್ವತಃ ಪತ್ರವನ್ನೇ ಬರೆಸಿದರು. ಅದರಿಂದ ಪ್ರೋತ್ಸಾಹಗೊಂಡ ನಾನು ಪಂಚದಶೀ ಪ್ರವಚನದಂತೆ ಮಾಂಡೂಕ್ಯ ಪ್ರವಚನವೆಂಬ ಒಂದು ಗ್ರಂಥವನ್ನೇ ಬರೆಯಬೇಕೆಂದು ಸಂಕಲ್ಪಿಸಿ ಈ ಗ್ರಂಥದ ರಚನೆಗೆ ಕೈಹಾಕಿದೆನು. ಮಾಂಡೂಕ್ಯೋಪನಿಷತ್ತನ್ನು ಕಾರಿಕಾಸಹಿತವಾಗಿ ಕನ್ನಡಿಸಿದ ಎರಡು ಗ್ರಂಥಗಳಿವೆ. ಒಂದು ಹಿಂದಿಯಿಂದ ಕನ್ನಡಕ್ಕೆ ಪರಿವರ್ತಿಸಿ ದುದು. ಅದರಲ್ಲಿ ಕಾರಿಕೆಗಳ ಪ್ರತಿಪದಾರ್ಥವಿಲ್ಲ. ಕೆಲವು ಕಾರಿಕೆಗಳನ್ನು ಮಾತ್ರ ಆರಿಸಿಕೊಂಡು ಉಪನ್ಯಾಸ ಗಳು ಬಂದಿವೆ. ಕಾರಿಕೆಗೂ ಉಪನ್ಯಾಸಕ್ಕೂ ನಿಕಟವಾದ ಸಂಬಂಧವಿಲ್ಲ. ಇನ್ನೊಂದು ಶ್ರೀಗೌಡಪಾದ ಹೃದಯ, ಹೊಳೆನರಸೀಪುರದ ಪೂಜ್ಯ ಶ್ರೀ ಶ್ರೀಗಳವರು ರಚಿಸಿದುದು ಇದರಲ್ಲಿ ಎಲ್ಲ ಕಾರಿಕೆಗಳಿಗೂ ತಾತ್ಪರ್ಯವನ್ನು ಬರೆದು, ಅನಂತರ ವಿಸ್ತಾರವಾಗಿ ವ್ಯಾಖ್ಯಾನವು ಬಂದಿದೆ. ವ್ಯಾಖ್ಯಾನವು ತುಂಬ ಪ್ರೌಢವಾದದ್ದು. ಆದರೆ ಕಾರಿಕೆಗಳ ಪ್ರತಿಪದಾರ್ಥವಿಲ್ಲ.

ನನ್ನ ಉದ್ದೇಶ ಹೀಗಿದೆ – ಕಾರಿಕೆಗಳ ಅರ್ಥವೇನೆಂಬುದು ಓದುಗರಿಗೆ ಗೊತ್ತಾಗಬೇಕು. ಶ್ರೀ ಗೌಡಪಾದರು ಅಪ್ರಸಿದ್ಧಾರ್ಥದಲ್ಲಿ ಪದಗಳನ್ನು ಬಳಸುತ್ತಾರೆ. ಬಹಳ ಕಡೆ ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗುತ್ತದೆ. ಶ್ಲೋಕದ ತಾತ್ಪರ್ಯವನ್ನು ಬರೆದರೂ ಈ ಶ್ಲೋಕದಿಂದ ಈ ಅರ್ಥ ಹೇಗೆ ಬರುತ್ತದೆಯೆಂಬ ಸಮಸ್ಯೆ ಓದುಗರನ್ನು ಕಾಡುತ್ತದೆ. ಉದಾಹರಣೆಗೆ ಈ ಕಾರಿಕೆಯನ್ನು ನೋಡಬಹುದು–

**ಉಪಾಸನಾಶ್ರಿತೋ ಧರ್ಮೋ ಜಾತೇ ಬ್ರಹ್ಮಣಿ ವರ್ತತೇ ।**
**ಪ್ರಾಗುತ್ಪತ್ತೇರಜಂ ಸರ್ವಂ ತೇನಾಸೌ ಕೃಪಣಃ ಸ್ಮೃತಃ ॥** (೩-೧)

ಎಂತಹ ವಿದ್ವಾಂಸನಾದರೂ ಇಲ್ಲಿ ಮುಗ್ಗರಿಸುತ್ತಾನೆ.

ಆದ್ದರಿಂದ ಮೊದಲು ಅನ್ವಯಪೂರ್ವಕವಾಗಿ ಪದಗಳ ಅರ್ಥವನ್ನು ಬರೆದು ಕಾರಿಕೆಯ ತಾತ್ಪರ್ಯವನ್ನು ಬರೆಯಬೇಕು. ಆವಶ್ಯಕವೆನಿಸಿದ ಸ್ಥಳದಲ್ಲಿ ಟಿಪ್ಪಣಿಗಳೂ ಬೇಕು. ಅನಂತರ ತಾತ್ಪರ್ಯದ ವಿವರಣೆ ಸುಲಭಶೈಲಿಯಲ್ಲಿ ಬರಬೇಕು. ಹೆಚ್ಚಿನ ವಾದಗಳು ಜನಸಾಮಾನ್ಯರಿಗೆ ಬೇಕಾಗುವುದಿಲ್ಲ. ವಾಚಕರಿಗೆ ಬರಬಹುದಾದ ಸಂದೇಹಗಳನ್ನೆತ್ತಿ ಸೂಕ್ತವಾದ ಸಮಾಧಾನವನ್ನೂ ಹೇಳಬೇಕು. ಕೆಲವು ಕಾರಿಕೆಗಳ ಅರ್ಥವು ಸುಲಭವಾದ್ದರಿಂದ ಅವುಗಳ ಪ್ರತಿಪದಾರ್ಥವನ್ನು ಬರೆಯಬೇಕಾದ್ದಿಲ್ಲ.

ಈ ಉದ್ದೇಶದಿಂದ ಬರೆದ ಗ್ರಂಥವಾದರೂ ವಿಷಯಗಾಂಭೀರ್ಯದಿಂದ ಕೆಲವು ಸ್ಥಳಗಳಲ್ಲಿ ವಿಚಾರವು ಕ್ಲಿಷ್ಟವಾಗಿಯೇ ಇದೆ. ಇದು ವೇದಾಂತವನ್ನು ಕಲಿಯುವವರಿಗಾಗಿ ಬರೆದದ್ದಲ್ಲ. ವೇದಾಂತ ಗ್ರಂಥಗಳನ್ನು ಕನ್ನಡದಲ್ಲಿ ಓದಿ, ಕೇಳಿ, ಸಾಕಷ್ಟು ಮುಂದುವರಿದ ಬುದ್ಧಿಶಾಲಿಗಳ ಬುದ್ಧಿಪರಿಷ್ಕಾರಕ್ಕಾಗಿ ರಚಿತವಾದದ್ದು. ಶ್ರೀಗೌಡಪಾದರ ಕಾರಿಕೆಗಳೂ ಶ್ರೀ ಶಂಕರಾಚಾರ್ಯರ ಭಾಷ್ಯವೂ ಸಹ ಪ್ರೌಢ ವೇದಾಂತಿಗಳಿಗಾಗಿ ರಚಿತವಾಗಿವೆಯೆಂಬುದನ್ನು ಗಮನಿಸಬೇಕು.

**ಕೃತಜ್ಞತಾ ಸಮರ್ಪಣೆ :**

ಶ್ರೀ ಶಾಂಕರ ದಕ್ಷಿಣಾಮ್ನಾಯ ಶೃಂಗೇರಿ ಶ್ರೀ ಶಾರದಾಪೀಠದ ಪರಮಪೂಜ್ಯ ಜಗದ್ಗುರುಗಳಾದ ಪಾಂಡಿತ್ಯದ ಸಾಕಾರಮೂರ್ತಿ ಶ್ರೀ ಶ್ರೀ ಶ್ರೀ ಭಾರತೀತೀರ್ಥ ಮಹಾಸನ್ನಿಧಾನದವರು ನನ್ನ ವಿಜ್ಞಾಪನೆಗೆ ಕೃಪೆ ತೋರಿ ಈ ಬರಹವನ್ನು ಅವಲೋಕಿಸಿ ಅಮೂಲ್ಯವೂ ಶ್ರೇಯಸ್ಕರವೂ ಆಗಿರುವ ಆಶೀರ್ವಚನವನ್ನು ಅನುಗ್ರಹಿಸಿ ಪರಮೋಪಕಾರ ಮಾಡಿದ್ದಾರೆ. ಅವರ ದಿವ್ಯ ಚರಣಾರವಿಂದಗಳಲ್ಲಿ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸುತ್ತೇನೆ ಮತ್ತು

ಕೃಪಾಪೂರ್ಣ ಶ್ರೀಮುಖದಿಂದ ನನ್ನ ಕೃತಿ ಸಾರ್ಥಕತೆ ಪಡೆಯಿತೆಂದು ಸಂತೋಷಿಸುತ್ತೇನೆ.

ಈ ಗ್ರಂಥವನ್ನು ರಚಿಸುವಂತೆ ಪ್ರೋತ್ಸಾಹಿಸಿ, ಬಹುಧನವ್ಯಯದಿಂದ ಮುದ್ರಿಸಿ ಪ್ರಕಟಿಸಿರುವ ಹರಿಹರಪುರ ಶ್ರೀಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಚ್ಚಿದಾನಂದಸರಸ್ವತಿ ಸ್ವಾಮಿಗಳವರ ಪವಿತ್ರ ಚರಣಗಳಿಗೆ ಕೃತಜ್ಞತಾಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ. ಪ್ರಾಕೃತೋಚಿತವಾದ ಶ್ರೀಮುಖವನ್ನು ಅವರು ಕೃಪೆಯಿಂದ ಅನುಗ್ರಹಿಸಿ ನನ್ನನ್ನು ಹರಸಿರುವುದರಿಂದ ನಾನು ಧನ್ಯನಾದೆನೆಂದು ತಿಳಿಯುತ್ತೇನೆ.

ಈ ಗ್ರಂಥವನ್ನು ರಚಿಸಲು ನನಗೆ ಮಾರ್ಗದರ್ಶನವನ್ನು ಮಾಡಿದವರು ಶ್ರೀಮಠದ ಸ್ವಯಂಪ್ರಕಾಶ ಪತ್ರಿಕೆಯ ಸಂಪಾದಕರಾದ **ಶ್ರೀ ಹರಿಹರಪುರ ಬಿ. ಸುಬ್ರಹ್ಮಣ್ಯಂ** ಮಹೋದಯರು. ವಿದ್ವಾಂಸರೂ ವಿಪ್ರೋತ್ತಮರೂ ಆದ ಶ್ರೀಯುತರು ನನಗೆ ಪರಮಾಪ್ತರಾದ ಹಳೆಯ ಮಿತ್ರರು. ಅವರಿಂದ ನನಗಾದ ಉಪಕಾರ ಬಹು ದೊಡ್ಡದು. ಹಾಗೆಯೇ ಸಂಸ್ಕೃತ ಭಾಷೆಗೋಸ್ಕರ ವಿಪುಲವಾಗಿ ದುಡಿದು ಹಲವಾರು ಸಾಹಿತ್ಯಿಕ ಮತ್ತು ದಾರ್ಶನಿಕ ಕೃತಿಗಳನ್ನು ರಚಿಸಿ ವಿಖ್ಯಾತರಾದ **ಪ್ರೊ|| ಎಸ್. ರಾಮಚಂದ್ರಶಾಸ್ತ್ರಿಗಳು** ನನ್ನ ಆಪ್ತಮಿತ್ರರು. ಹಾಗೆಯೇ **ವೇದಾಂತ ವಿದ್ವಾನ್ ಶ್ರೀ ರಾಮಚಂದ್ರ ಶರ್ಮಾ**, ತ್ಯಾಗಲಿಯವರು ನನ್ನ ವಿದ್ವನ್ಮಿತ್ರರು. ಈರ್ವರೂ ಈ ಕೃತಿಯ ಕರಡನ್ನು ಓದಿ ತಿದ್ದಿ ನನಗೆ ವಿಶೇಷ ವಾಗಿ ನೆರವು ನೀಡಿದ್ದಾರೆ. ಈ ಇಬ್ಬರು ಮಹನೀಯರನ್ನು ಕೃತಜ್ಞತೆಯಿಂದ ಸ್ಮರಿಸಿ ಕೊಳ್ಳುತ್ತಿದ್ದೇನೆ. ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಬೆಂಗಳೂರು, **ಪರಿಮಳ ಮುದ್ರಣಾಲಯ**ದವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ಸರ್ವರಿಗೂ ಶುಭವಾಗಲಿ.

ಬೆಂಗಳೂರು
28.8.2005

**ವಿದ್ವಾನ್ ಎನ್. ರಂಗನಾಥಶರ್ಮಾ**

— ಓಂ ತತ್ಸತ್ —

# ಮಾಂಡೂಕ್ಯೋಪನಿಷತ್

ಹರಿಃ ಓಮ್ ॥ ಓಮಿತ್ಯೇತದಕ್ಷರಮಿದಗ್ಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ ಭವಿಷ್ಯದಿತಿ ಸರ್ವಮೋಂಕಾರ ಏವ ॥೧॥

ಸರ್ವಗ್ಂ ಹ್ಯೇತದ್ ಬ್ರಹ್ಮಾಯಮಾತ್ಮಾ ಬ್ರಹ್ಮ ಸೋಽಯಮಾತ್ಮಾ ಚತುಷ್ಪಾತ್ ॥೨॥

ಜಾಗರಿತಸ್ಥಾನೋ ಬಹಿಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿ ಮುಖಃ ಸ್ಥೂಲಭುಗ್ ವೈಶ್ವಾನರಃ ಪ್ರಥಮಃ ಪಾದಃ ॥೩॥

ಸ್ವಪ್ನಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥೪॥

ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್‌ಸುಷುಪ್ತಮ್ । ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದ– ಮಯೋ ಹ್ಯಾನಂದಭುಕ್ ಚೇತೋಮಯಃ ಪ್ರಾಜ್ಞಸ್ತೃತೀಯಃ ಪಾದಃ ॥೫॥

ಏಷ ಸರ್ವೇಶ್ವರ ಏಷ ಸರ್ವಜ್ಞ ಏಷ ಸರ್ವಾಂತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥೬॥

ನಾಂತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮ್ । ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣ ಮಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥೭॥

ಸೋಽಯಮಾತ್ಮಾಽಧ್ಯಕ್ಷರಮೋಂಕಾರೋಽಧಿಮಾತ್ರಂ ಪಾದಾಮಾತ್ರಾ ಮಾತ್ರಾಶ್ಚ ಪಾದಾ ಅಕಾರ ಉಕಾರೋ ಮಕಾರ ಇತಿ ॥೮॥

ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾಮಾತ್ರಾಪ್ತೇರಾದಿ– ಮತ್ತ್ವಾದ್ವಾ ಆಪ್ನೋತಿ ಹ ವೈ ಸರ್ವಾನ್ ಕಾಮಾನ್ ಆದಿಶ್ಚ ಭವತಿ ಯ ಏವಂ ವೇದ ॥೯॥

ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರಾ ಉತ್ಕರ್ಷಾ– ದುಭಯತ್ವಾದ್ವೋತ್ಕರ್ಷತಿ ಹ ವೈ ಜ್ಞಾನಸಂತತಿಂ ಸಮಾನಶ್ಚ ಭವತಿ ನಾಸ್ಯಾ ಬ್ರಹ್ಮವಿತ್ ಕುಲೇ ಭವತಿ ಯ ಏವಂ ವೇದ ॥೧೦॥

**ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ ಮಿತೇರಪೀತೇರ್ವಾ ಮಿನೋತಿ ಹ ವಾ ಇದಂ ಸರ್ವಮಪೀತಿಶ್ಚ ಭವತಿ ಯ ಏವಂ ವೇದ ||೧೧||**

**ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽ–ದ್ವೈತ ಏವಮೋಂಕಾರ ಆತ್ಮೈವ ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ ಯ ಏವಂ ವೇದ ||೧೨||**

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಹರಿಃ ಓಮ್**

**ಇತಿ ಮಾಂಡೂಕ್ಯೋಪನಿಷತ್**

**ಈ ಹನ್ನೆರಡು ಮಂತ್ರಗಳಿಗೆ ಸರಳವಾದ ಅರ್ಥ**

೧. ಭೂತ, ಭವಿಷ್ಯತ್ತು, ವರ್ತಮಾನದಲ್ಲಿರುವ ಸಮಸ್ತವಸ್ತುವೂ ಓಂಕಾರವೇ ಆಗಿದೆ. ತ್ರಿಕಾಲಾತೀತವಾದ ಶಶಶೃಂಗ ಮುಂತಾದ ಕಾಲ್ಪನಿಕ ವಸ್ತುವೂ ಓಂಕಾರವೇ ಸರಿ.

**ಟಿಪ್ಪಣಿ :** ಓಂಕಾರಕ್ಕೆ ಪ್ರಣವ ಎಂಬ ಹೆಸರಿದೆ. ಅವತಿ = ರಕ್ಷತೀತಿ ಓಂ ಎಂದು ಇದರ ನಿಷ್ಪತ್ತಿ. ಬ್ರಹ್ಮಬುದ್ಧಿಯನ್ನಿಟ್ಟು ಪ್ರಣವೋಪಾಸನೆ ಮಾಡತಕ್ಕವನನ್ನು ರಕ್ಷಿಸುತ್ತದೆಯಾದ್ದರಿಂದ ಓಂ ಎಂದು ಹೆಸರು. ಶಬ್ದಾರ್ಥಗಳಿಗೆ ಅಭೇದ ವಿರುವುದರಿಂದ ಓಂ ಎಂಬ ಶಬ್ದವೇ ಬ್ರಹ್ಮವೆಂದು ಹೀಗೆ ವರ್ಣಿಸಲಾಗಿದೆ.

೨. ಸರ್ವವೂ ಬ್ರಹ್ಮವಾದ್ದರಿಂದ ದೇಹದಲ್ಲಿರುವ ದೇಹಪರಿಚ್ಛಿನ್ನನಾದ ಜೀವಾತ್ಮನೂ ಬ್ರಹ್ಮವೇ. ಈ ಪ್ರಕಾರವಾಗಿರುವ ಆತ್ಮನು ನಾಲ್ಕು ಪಾದಗಳುಳ್ಳವನು.

೩. ಜಾಗ್ರತ್ತು ಸ್ಥಾನವಾಗಿರುವ (ಉಪಾಧಿಯಾಗಿರುವ) ಈ ಆತ್ಮನಿಗೆ ವೈಶ್ವಾನರನೆಂದು ಹೆಸರು. ಬಾಹ್ಯದಲ್ಲಿರುವ ಸ್ಥೂಲ ಜಗತ್ತನ್ನು ತಿಳಿಯುವುದರಿಂದ ಇವನು ಬಹಿಃಪ್ರಜ್ಞನು. ಶಿರಸ್ಸು, ನೇತ್ರ, ಪ್ರಾಣ, ಸೊಂಟ, ಮೂತ್ರಕೋಶ, ಎರಡು ಕಾಲುಗಳು, ಬಾಯಿ – ಹೀಗೆ ಇವನಿಗೆ ಏಳು ಅಂಗಗಳಿವೆ. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಹತ್ತೊಂಬತ್ತು ಮುಖಗಳು ಈ ವೈಶ್ವಾನರನಿಗಿವೆ. (ಮುಖವೆಂದರೆ ಇಲ್ಲಿ ಉಪಲಬ್ಧಿ ಸ್ಥಾನ). ಇಂದ್ರಿಯ ಗೋಚರವಾದ ಬಾಹ್ಯವಸ್ತುವನ್ನು ಭೋಗಿಸುವುದರಿಂದ ಸ್ಥೂಲಭುಕ್.

**ಟಿಪ್ಪಣಿ :** ಛಾಂದೋಗ್ಯದಲ್ಲಿ (೫-೧೮-೨) ಹೇಳಿದ ದ್ಯುಲೋಕ, ಸೂರ್ಯ, ವಾಯು, ಆಕಾಶ, ರಯಿ (ಮೂತ್ರಕೋಶ), ಪೃಥಿವೀ, ಆಹವನೀಯಗಳು ವೈಶ್ವಾನರನ ಮೂರ್ಧಾ ಮೊದಲಾದ ಅಂಗಗಳೆಂದು ಭಾಷ್ಯಕಾರರು ಹೇಳಿದ್ದಾರೆ. ವಿಶ್ವಶರೀರನಾದ ವಿರಾಟ್ ಪುರುಷನಿಗೆ ಅದು ಅನ್ವಯಿಸುತ್ತದೆ. ಈ ವೈಶ್ವಾನರನು ಪ್ರಥಮ ಪಾದ.

೪. ಸ್ವಪ್ನವು ಸ್ಥಾನವಾಗಿ ಉಳ್ಳ ಆತ್ಮನಿಗೆ ತೈಜಸ ಎಂದು ಹೆಸರು. ಚಿತ್ತಕಲ್ಪಿತವಾದ ಚಿತ್ತಾಂತರ್ಗತ ವಸ್ತುವನ್ನು ಮಾತ್ರ ತಿಳಿಯುವುದರಿಂದ ತೈಜಸನು ಅಂತಃಪ್ರಜ್ಞ. ಸಪ್ತಾಂಗ, ಏಕೋನವಿಂಶತಿ ಮುಖ ಎಂಬುದು ಹಿಂದೆ ಹೇಳಿದಂತೆಯೇ. ಪ್ರವಿವಿಕ್ತವೆಂದರೆ ಸೂಕ್ಷ್ಮವೆಂದರ್ಥ. ಸೂಕ್ಷ್ಮವಾದ ಕಲ್ಪಿತವಸ್ತುವನ್ನು ಭೋಗಿಸುವುದರಿಂದ ಇವನು ಪ್ರವಿವಿಕ್ತಭುಕ್. ಈ ತೈಜಸನು ಆತ್ಮನ ದ್ವಿತೀಯ ಪಾದ.

೫. ಯಾವ ಸ್ಥಾನದಲ್ಲಿ ನಿದ್ರಿಸತಕ್ಕವನು ಯಾವುದೇ ಒಂದು ಕಾಮ್ಯವಸ್ತುವನ್ನೂ ಬಯಸುವುದಿಲ್ಲವೋ, ಯಾವ ಕನಸನ್ನೂ ಕಾಣುವುದಿಲ್ಲವೋ ಆ ಸ್ಥಾನಕ್ಕೆ ಸುಷುಪ್ತವೆಂದು ಹೆಸರು. ಈ ಸ್ಥಾನದಲ್ಲಿರುವ ಆತ್ಮನು ಯಾವ ಚಿತ್ತಸ್ಪಂದಿತವೂ ಇಲ್ಲದ್ದರಿಂದ ಪರಮಾತ್ಮನಲ್ಲಿ ಸೇರಿ ಒಂದಾಗಿಬಿಟ್ಟನೋ ಎಂಬಂತೆ ಏಕೀಭೂತನಾಗಿರುತ್ತಾನೆ. ಇವನ ಜ್ಞಾನವೆಲ್ಲವೂ ಯಾವ ಪದಾರ್ಥವನ್ನೂ ಗ್ರಹಿಸದೆ ಗಟ್ಟಿಯಾಗಿ, ಈ ಆತ್ಮನು ಪ್ರಜ್ಞಾನಘನನಾಗಿರುತ್ತಾನೆ. ಅನಾಯಾಸರೂಪವಾದ ಆನಂದವನ್ನು ಭೋಗಿಸುತ್ತಾನೆ. ಮುಂದೆ ಎಚ್ಚರಗೊಳ್ಳತಕ್ಕವನಾದ್ದರಿಂದ ಚಿತ್ತಸ್ಪಂದಿತಕ್ಕೆ ಒಳಗಾಗಿ ಚೇತೋಮುಖ ನಾಗಿರುತ್ತಾನೆ. ಇವನಿಗೆ ಪ್ರಾಜ್ಞನೆಂದು ಹೆಸರು. ವಿಷಯಸಂಬಂಧವಿಲ್ಲದೆ ಪ್ರಜ್ಞಪ್ತಿಮಾತ್ರ ಇವನ ಸ್ವರೂಪವಾದ್ದರಿಂದ ಇವನು ಪ್ರಾಜ್ಞನೆನಿಸಿದ್ದಾನೆ.

೬. ಈ ಆತ್ಮನು ಅವಸ್ಥಾತ್ರಯವೆಂಬ ಉಪಾಧಿಯನ್ನು ಬಿಟ್ಟು ಚೈತನ್ಯಪ್ರಧಾನ ನಾದಾಗ ಈತನೇ ಸರ್ವೇಶ್ವರ, ಈತನೇ ಸರ್ವಜ್ಞ, ಈತನೇ ಅಂತರ್ಯಾಮಿಯಾಗಿ ಸಕಲ ವಸ್ತುಗಳನ್ನು ನಿಯಮಿಸತಕ್ಕವನು. ಈತನೇ ಅವೆಲ್ಲವುಗಳ ಉತ್ಪತ್ತಿನಾಶಗಳಿಗೆ ಕಾರಣನಾದವನು.

೭. ಇನ್ನು ತುರೀಯವೆನಿಸಿದ ನಾಲ್ಕನೆಯ ಪಾದವು ತೈಜಸನಂತೆ ಅಂತಃಪ್ರಜ್ಞವಲ್ಲ. ವೈಶ್ವಾನರನಂತೆ ಬಹಿಃಪ್ರಜ್ಞವಲ್ಲ. ಅಂತರಾಳದಲ್ಲಿ ನಿಲ್ಲುವ ಉಭಯಪ್ರಜ್ಞವೂ ಅಲ್ಲ, ಸುಷುಪ್ತಿಯ ಪ್ರಾಜ್ಞನಂತೆ ಜ್ಞಾನದ ಹರಿವಿಲ್ಲದ ಪ್ರಜ್ಞಾನಘನನೂ ಅಲ್ಲ, ಜ್ಞಾನವಿಲ್ಲದ ವಸ್ತುವೂ ಅಲ್ಲ. ಈ ತುರೀಯವು ಪ್ರತ್ಯಕ್ಷಾದಿ

ಪ್ರಮಾಣಗಳಿಗೆ ಗೋಚರವಲ್ಲ. ವಾಙ್ಮನಸಗಳಿಗೆ ನಿಲುಕುವುದಿಲ್ಲವಾದ್ದರಿಂದ ಅವ್ಯವಹಾರ್ಯ ಕರ್ಮೇಂದ್ರಿಯಗಳಿಂದ ಗ್ರಹಿಸಲು ಅಶಕ್ಯವಾದದ್ದು. ಅನುಮಾನ ದಿಂದ ತಿಳಿಯಲು ಅಶಕ್ಯವಾದದ್ದು. ಆದ್ದರಿಂದಲೇ ಅಚಿಂತ್ಯವಾದದ್ದು. ಯಾವ ಶಬ್ದದಿಂದಲೂ ಅದರ ಸ್ವರೂಪವನ್ನು ತಿಳಿಸಲು ಅಸಾಧ್ಯವಾದದ್ದು. ಜಾಗ್ರದಾದ್ಯವಸ್ಥೆಗಳಲ್ಲಿದ್ದ ಏಕಾತ್ಮವೇ ಇದು ಎಂದಿಷ್ಟೇ ಹೇಳಲು ಶಕ್ಯವಾದದ್ದು. ಕಾರ್ಯಕಾರಣಾತ್ಮಕ ಪ್ರಪಂಚರಹಿತವಾದದ್ದು. (ಇದು ಕಾರ್ಯವೂ ಅಲ್ಲ ಕಾರಣವೂ ಅಲ್ಲ ಎಂದು ಅಭಿಪ್ರಾಯ). ಇದು ಶಾಂತವೂ ಸ್ವಯಂಪ್ರಕಾಶ ಆನಂದಸ್ವರೂಪ ವಾದ್ದರಿಂದ ಶಿವವೂ, ದ್ವಿತೀಯ ವಸ್ತುವೇ ಇಲ್ಲದ್ದರಿಂದ ಅದ್ವೈತವೂ ಆಗಿರುತ್ತದೆ. ಅದ್ವಿತೀಯವಾದ್ದರಿಂದ ಸಂಖ್ಯಾಶೂನ್ಯವಾದರೂ ಅವಸ್ಥಾತ್ರಯದಿಂದ ಸಾಪೇಕ್ಷ ವಾಗಿ ಚತುರ್ಥವಾಗುತ್ತದೆಯೆಂದು ತತ್ತ್ವವಿದರು ತಿಳಿದಿದ್ದಾರೆ. ಆತನೇ ಅದ್ವಿತೀಯಾತ್ಮ. ಅವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು.

೮. (ಇದುವರೆಗೆ ಅರ್ಥಪ್ರಧಾನವಾಗಿ ಬ್ರಹ್ಮವು ನಾಲ್ಕು ಪಾದಗಳುಳ್ಳದ್ದೆಂದು ವ್ಯಾಖ್ಯಾತವಾಗಿದೆ.) ಈ ಬ್ರಹ್ಮವೇ ಅಕ್ಷರಾತ್ಮಕವಾದ ಶಬ್ದವು ಪ್ರಧಾನವೆಂದು ಗ್ರಹಿಸಿದಾಗ ಓಂಕಾರವೆನಿಸುತ್ತದೆ. ಈ ಓಂಕಾರವನ್ನು ಪಾದಶಃ ವಿಭಜಿಸಿದಾಗ ಅಕಾರ ಉಕಾರ ಮಕಾರ ಎಂದು ಮೂರು ಮಾತ್ರೆಗಳಾಗುತ್ತವೆ. ಮಾತ್ರೆಗಳೇ ಪಾದಗಳು, ಪಾದಗಳೇ ಮಾತ್ರೆಗಳು.

೯. ಜಾಗರಿತಸ್ಥಾನನಾದ ವೈಶ್ವಾನರನೇ ಓಂಕಾರದ ಅಕಾರ. ಇದು ಓಂಕಾರ ವನ್ನರಿಯಲು ಸಾಧನವಾದ ಪ್ರಥಮ ಮಾತ್ರೆ. ವೈಶ್ವಾನರನಿಂದ ಜಗತ್ತು ವ್ಯಾಪ್ತ ವಾಗಿರುವಂತೆ ಅಕಾರದಿಂದ ಸರ್ವ ವಾಕ್ ಪ್ರಪಂಚವೂ ವ್ಯಾಪ್ತವಾಗಿದೆ. **''ಅಕಾರೋ ವೈ ಸರ್ವಾ ವಾಕ್''** ಎಂದು ಶ್ರುತಿ ಇದೆ ಮತ್ತು ವೈಶ್ವಾನರನು ಪ್ರಥಮ ಪಾದವಾದಂತೆ ಅಕಾರವೂ ಪ್ರಥಮ ಮಾತ್ರೆಯಾಗಿದೆ. ಅಕ್ಷರಮಾಲೆಯಲ್ಲಿ ಮೊದಲನೆಯದೂ ಆಗಿದೆ. ಹೀಗೆ ಏಕತ್ವವನ್ನು ಅರಿತವನು ಸರ್ವಕಾಮನೆ ಗಳನ್ನೂ ಪಡೆಯುತ್ತಾನೆ ಮತ್ತು ಜನತೆಯಲ್ಲಿ ಮುಖ್ಯನಾಗುತ್ತಾನೆ.

೧೦. ಸ್ವಪ್ನಸ್ಥಾನನಾದ ತೈಜಸನೇ ಓಂಕಾರದ ಉಕಾರವಾಗಿದ್ದಾನೆ. ಈತನು ದ್ವಿತೀಯ ಮಾತ್ರೆ. ಅಕಾರಕ್ಕಿಂತ ಮುಂದೆಯೂ ಅಕಾರ ಮಕಾರಗಳ ಮಧ್ಯ ದಲ್ಲಿಯೂ ಇರುವ ಉಕಾರವು ಉತ್ಕರ್ಷವನ್ನು ಹೊಂದಿದೆ. ಅಂತೆಯೇ ತೈಜಸನು ವೈಶ್ವಾನರನ ಮುಂದೆಯೂ ವೈಶ್ವಾನರ–ಪ್ರಾಜ್ಞರ ನಡುವೆಯೂ ಇದ್ದಾನೆ. ಆದ್ದರಿಂದ ಇವುಗಳಿಗೆ ಹೋಲಿಕೆ ಇದೆ. ಇವರೀರ್ವರ ಐಕ್ಯವನ್ನರಿತವನು ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಾನೆ. ಶತ್ರುಮಿತ್ರರೆಲ್ಲರಿಗೂ ಪ್ರಿಯನಾಗುತ್ತಾನೆ. ಈತನ ವಂಶದಲ್ಲಿ ಬ್ರಹ್ಮಜ್ಞಾನಿಯಲ್ಲದವನು ಹುಟ್ಟುವುದಿಲ್ಲ.

೧೧. ಸುಷುಪ್ತಸ್ಥಾನನಾದ ಪ್ರಾಜ್ಞನೇ ಓಂಕಾರದ ಮಕಾರವಾಗಿದ್ದಾನೆ. ಇವನು ತೃತೀಯ ಮಾತ್ರೆ. ಇವರಿಗೆ ಹೋಲಿಕೆ ಹೇಗೆಂದರೆ – ವಿಶ್ವತೈಜಸರು ಪ್ರಾಜ್ಞನಲ್ಲಿ ಹೊಕ್ಕು ಬರುವಂತೆ ಕಾಣುವುದರಿಂದ ಪ್ರಾಜ್ಞನು ಅಳತೆಯ ಪಾತ್ರೆಯಂತಿದ್ದಾನೆ. ಹಾಗೆಯೇ ಓಂಕಾರವನ್ನು ಮತ್ತೆ ಮತ್ತೆ ಉಚ್ಚರಿಸಿದಾಗ ಅಕಾರ ಉಕಾರಗಳು ಮಕಾರದಲ್ಲಿ ಸೇರಿ ಹೊರಬರುವಂತೆ ಕಾಣುತ್ತವೆ. ಏವಂ ಚ ಅಳತೆಯ ಪಾತ್ರೆ ಯಂತಿರುವುದು ಪ್ರಾಜ್ಞ ಮತ್ತು ಮಕಾರಗಳಿಗಿರುವ ಹೋಲಿಕೆ. ಈ ಏಕತ್ವವನ್ನರಿತ ವಿದ್ವಾಂಸನು ಜಗತ್ತಿನ ವಸ್ತುಸ್ಥಿತಿ ಯನ್ನರಿತವನಾಗಿ ಜಗದ್ಯೋನಿಯೇ ಆಗುತ್ತಾನೆ.

ಶಬ್ದಾರ್ಥಗಳಿಗೆ (ಅಭಿಧಾನಾಭಿಧೇಯಗಳಿಗೆ) ಅಭೇದವಿರುವುದರಿಂದ ಮೊದಲು ಅರ್ಥಪ್ರಧಾನವನ್ನಾಗಿ ವರ್ಣಿಸಿ ಆಮೇಲೆ ಶಬ್ದಪ್ರಧಾನವನ್ನಾಗಿ ವರ್ಣಿಸಿದ್ದಾರೆ. ಪರಬ್ರಹ್ಮವು ವಾಚ್ಯವಾಚಕಗಳಿಗೆ ಅತೀತವಾದದ್ದೆಂದು ಸೂಚಿತವಾಗುತ್ತದೆ. ವಾಚ್ಯ = ಅರ್ಥ, ವಾಚಕ = ಶಬ್ದ.

೧೨. ಮಾತ್ರಾವಿಭಾಗವಿಲ್ಲದ ಓಂಕಾರವು ತುರೀಯನಾದ ಆತ್ಮವೇ ಸರಿ. ಈತನು ವ್ಯವಹಾರಕ್ಕೆ ಅವಿಷಯನೂ ಪ್ರಪಂಚೋಪಶಮನೂ ಶಿವನೂ ಅದ್ವೈತನೂ ಆಗಿದ್ದಾನೆ. ಇದೆಲ್ಲವನ್ನೂ ಬಲ್ಲವನು ಪ್ರಯೋಗಿಸಿದ ಮಾತ್ರಾತ್ರಯ ವುಳ್ಳ ಓಂಕಾರವು ಪಾದತ್ರಯವುಳ್ಳ ಅಭಿಧೇಯ ಬ್ರಹ್ಮವೇ ಆಗಿದೆ. ಇದನ್ನರಿತವನು ಮಾತ್ರಾತ್ರಯವೆಂಬ ಉಪಾಧಿಯನ್ನು ಕಳಚಿಕೊಂಡು ತನ್ನ ತುರೀಯಸ್ವರೂಪ ವನ್ನು ಸೇರಿಕೊಳ್ಳುತ್ತಾನೆ. ಮುಕ್ತನಾಗುತ್ತಾನೆ.



ಶ್ರೀ ಶಂಕರ ಭಗವತ್ಪಾದರು ತಮ್ಮ ಭಾಷ್ಯದ ಆರಂಭದಲ್ಲಿ ಎರಡು ಮಂಗಳ ಶ್ಲೋಕಗಳನ್ನು ಹೇಳಿದ್ದಾರೆ –

**ಪ್ರಜ್ಞಾನಾಂಶು ಪ್ರತಾನೈಃ ಸ್ಥಿರಚರನಿಕರವ್ಯಾಪಿಭಿರ್ವ್ಯಾಪ್ಯ ಲೋಕಾನ್**
**ಭುಕ್ತ್ವಾಭೋಗಾನ್‌ಸ್ಥವಿಷ್ಠಾನ್ ಪುನರಪಿ ಧಿಷಣೋದ್ಭಾಸಿತಾನ್**
**ಕಾಮಜನ್ಯಾನ್ ।**
**ಪೀತ್ವಾ ಸರ್ವಾನ್ ವಿಶೇಷಾನ್ ಸ್ವಪಿತಿ ಮಧುರ ಭುಙ್ಮಾಯಯಾ**
**ಭೋಜಯನ್ನೋ**
**ಮಾಯಾಸಂಖ್ಯಾತುರೀಯಂ ಪರಮಮೃತಮಜಂ ಬ್ರಹ್ಮ ಯತ್**
**ತನ್ನತೋಽಸ್ಮಿ ॥**

**ತಾತ್ಪರ್ಯ :** ಯಾವುದು ತನ್ನ ಚೈತನ್ಯಕಿರಣಗಳಾದ ಜೀವರಾಶಿಗಳಿಂದ ಸ್ಥಾವರಜಂಗಮಗಳನ್ನು ವ್ಯಾಪಿಸಿಕೊಂಡು ಅವುಗಳ ಮೂಲಕ ಎಲ್ಲ ಲೋಕಗಳನ್ನೂ ವ್ಯಾಪಿಸಿಕೊಂಡಿದೆಯೋ, ಜಾಗ್ರದವಸ್ಥೆಯಲ್ಲಿ ಇಂದ್ರಿಯ ಗೋಚರಗಳಾದ ವಿಷಯ ಗಳನ್ನು ಭೋಗಿಸಿ, ಸ್ವಪ್ನಾವಸ್ಥೆಯಲ್ಲಿ ಬುದ್ಧಿಕಲ್ಪಿತ ಗಳಾದ ಎಲ್ಲ ವಿಷಯಗಳನ್ನೂ ಅನುಭವಿಸಿ, ಸುಷುಪ್ತಿಯಲ್ಲಿ ಆನಂದವನ್ನನುಭವಿ ಸುತ್ತ ವಿಶ್ರಮಿಸುತ್ತದೆಯೋ ತನ್ನ ಮಾಯೆಯಿಂದ ನಮಗೆ ನಾನಾಭೋಗ ಗಳನ್ನುಂಟುಮಾಡುತ್ತಿರುವಂತೆ ವರ್ತಿಸುತ್ತ, ಮಾಯೆಯಿಂದಲೇ ಅವಸ್ಥಾತ್ರಯಾತೀತವಾದ ತುರೀಯವೆಂಬ ಸಂಖ್ಯೆಗೆ ವಿಷಯ ವಾಗಿದ್ದರೂ ಪರಮಾರ್ಥದಲ್ಲಿ ಇವೆಲ್ಲವುಗಳಿಗೂ ದೂರವಾಗಿ ಅಜವೂ ಅಮೃತವೂ ಆದ ಬ್ರಹ್ಮ ವಸ್ತುವಿಗೆ ನಮಸ್ಕರಿಸುತ್ತೇನೆ.

**ಯೋ ವಿಶ್ವಾತ್ಮಾ ವಿಧಿಜವಿಷಯಾನ್ ಪ್ರಾಶ್ಯಭೋಗಾನ್ ಸ್ಥವಿಷ್ಠಾನ್**
**ಪಶ್ಚಾಚ್ಚಾನ್ಯಾನ್ ಸ್ವಮತಿವಿಭವಾನ್ ಜ್ಯೋತಿಷಾ ಸ್ವೇನ ಸೂಕ್ಷ್ಮಾನ್ ।**
**ಸರ್ವಾನೇತಾನ್ ಪುನರಪಿ ಶನೈಃ ಸ್ವಾತ್ಮನಿಸ್ಥಾಪಯಿತ್ವಾ**
**ಹಿತ್ವಾಸರ್ವಾನ್ ವಿಶೇಷಾನ್ ವಿಗತಗುಣಗಣಃ ಪಾತ್ವಸೌ**
**ನಸ್ತುರೀಯಃ ॥೩॥**

ಯಾವ ಪರಮಾತ್ಮನು ಪಾಂಚಭೌತಿಕ ಶರೀರದಿಂದ ಕೂಡಿ ವಿಶ್ವಾತ್ಮನೆನಿಸಿ ಜಾಗರಿತದಲ್ಲಿ ಬಾಹ್ಯೇಂದ್ರಿಯ ಗೋಚರಗಳೂ ಧರ್ಮಾಧರ್ಮಗಳಿಂದ ಪ್ರಾಪ್ತ ವಾದವೂ ಆದ ಭೋಗಗಳನ್ನು ಅನುಭವಿಸುತ್ತಾನೋ, ಅನಂತರ ತನ್ನ ಮನೋ ವಿಕಲ್ಪಿತಗಳಾದ ಸೂಕ್ಷ್ಮ ವಿಷಯಗಳನ್ನು ಸ್ವಪ್ನದಲ್ಲಿ ಆತ್ಮಜ್ಯೋತಿಯಿಂದಲೇ ಗೋಚರಿಸಿಕೊಂಡು ಅನುಭವಿಸುತ್ತಾನೋ ಆಮೇಲೆ ಸುಷುಪ್ತಿಯಲ್ಲಿ ಈ ಎಲ್ಲ ವಿಷಯಗಳನ್ನೂ ಅವಿದ್ಯೆಯೆಂಬ ಕಾರಣಶರೀರದಲ್ಲಿ ಬಿಟ್ಟು ಸಕಲ ಉಪಾಧಿ

ಗಳನ್ನೂ ತೊರೆದು ನಿರ್ಗುಣನೆನಿಸಿ ತುರೀಯಾತ್ಮನಾಗಿ ಬಿಡುತ್ತಾನೋ ಆ ಪರಮಾತ್ಮನು ನಮ್ಮನ್ನು ಕಾಪಾಡಲಿ.

**ಟಿಪ್ಪಣಿ :** ಈ ಶ್ಲೋಕದ ಮೊದಲನೆಯ ಮೂರು ಪಾದಗಳು ಮಂದಾಕ್ರಾಂತಾ ವೃತ್ತದಲ್ಲಿವೆ. ನಾಲ್ಕನೆಯ ಪಾದವು ಸ್ರಗ್ಧರಾ ವೃತ್ತದಲ್ಲಿರುವುದರಿಂದ ಛಂದೋಭಂಗವಾಗುತ್ತದೆ ಎಂಬ ಶಂಕೆ ಇದೆ. ಇದು ಗಾಥಾಲಕ್ಷಣವಿಶಿಷ್ಟವಾದ್ದರಿಂದ ಛಂದೋಭಂಗ ದೋಷವಿಲ್ಲವೆಂದು ವ್ಯಾಖ್ಯಾನದಲ್ಲಿದೆ. ಈ ಸಮಾಧಾನವುಯುಕ್ತವಾಗಿ ತೋರುವುದಿಲ್ಲ. ನಾಲ್ಕನೆಯ ಪಾದದಲ್ಲಿರುವ 'ವಿಶೇಷಾನ್' ಎಂಬುದು ಯಾವುದೋ ವ್ಯಾಖ್ಯಾನದಲ್ಲಿ ಅಧ್ಯಾಹಾರ ಮಾಡಿ ಬರೆದಿರಬೇಕು. ವೃತ್ತಲಕ್ಷಣಕ್ಕಾಗಿ 'ವಿ' ಎಂಬುದನ್ನೂ ಸೇರಿಸಿ ಲಿಪಿಕಾರನು ಈ ನಾಲ್ಕನೆಯ ಪಾದವನ್ನು ಬರೆದುಬಿಟ್ಟಿದ್ದಾನೆಂದು ನಮ್ಮ ಊಹೆ. ನಾಲ್ಕನೆಯ ಸಾಲು ಹೀಗಿದ್ದಿರಬಹುದು : **''ಹಿತ್ವಾ ಸರ್ವಾನ್ ಗತಗುಣಗಣಃ ಪಾತ್ವಸೌ ನಸ್ತುರೀಯಃ''.** ಈಗ ಛಂದೋಭಂಗವಾಗುವುದಿಲ್ಲ.

ಮಾಂಡೂಕ್ಯೋಪನಿಷತ್ತಿನ ವ್ಯಾಖ್ಯಾನರೂಪವಾದ ಶ್ರೀ ಗೌಡಪಾದರ ಕಾರಿಕೆಗಳನ್ನು ಆಗಮ ಪ್ರಕರಣ, ವೈತಥ್ಯಪ್ರಕರಣ, ಅದ್ವೈತಪ್ರಕರಣ, ಅಲಾತ ಶಾಂತಿ ಪ್ರಕರಣ ಎಂದು ನಾಲ್ಕು ಪ್ರಕರಣಗಳನ್ನಾಗಿ ವಿಂಗಡಿಸಿದ್ದಾರೆ. ಶ್ರೀ ಶಂಕರಾಚಾರ್ಯರು **''ವೇದಾಂತಾರ್ಥಸಾರ ಸಂಗ್ರಹಭೂತಮಿದಂ ಪ್ರಕರಣ ಚತುಷ್ಟಯಂ''** ಎಂದು ಆರಂಭದಲ್ಲಿಯೇ ಬರೆದಿದ್ದಾರೆ. ವೇದಾಂತಶಾಸ್ತ್ರದ ಪ್ರಯೋಜನಗಳಲ್ಲಿ ಸಾರಭೂತವಾದದ್ದು ಜೀವಾತ್ಮ ಪರಮಾತ್ಮರ ಐಕ್ಯಜ್ಞಾನದಿಂದಾಗುವ ಮೋಕ್ಷ. ಅದನ್ನು ಸರಿಯಾಗಿ ತಿಳಿಸಿಕೊಡುವ ಪ್ರಕರಣ ಗ್ರಂಥವೆಂದು ತಾತ್ಪರ್ಯ. ಶಾಸ್ತ್ರಕ್ಕೂ ಪ್ರಕರಣಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಶಾಸ್ತ್ರದಲ್ಲಿ ವೇದಾಂತಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಇರಬೇಕು. ಅಧಿಕಾರ, ಸಂಬಂಧ, ಪೂರ್ವಪಕ್ಷ, ಸಿದ್ಧಾಂತ ಮುಂತಾದ ಸಕಲ ಲಕ್ಷಣಗಳೂ ಇರಬೇಕು. ಈ ಗ್ರಂಥದಲ್ಲಾದರೋ ಜೀವ ಪರಮಾತ್ಮರ ಐಕ್ಯಜ್ಞಾನದಿಂದಾಗುವ ಮೋಕ್ಷವೆಂಬ ಫಲದ ನಿರೂಪಣೆಯೊಂದೇ ಇದೆ. ಇದರಲ್ಲಿರುವುದು ಶಾಸ್ತ್ರದ ಏಕದೇಶ. ಈ ಬಗೆಯ ಗ್ರಂಥವನ್ನು 'ಪ್ರಕರಣ' ಎನ್ನುತ್ತಾರೆ. ಆದ್ದರಿಂದ ಇಲ್ಲಿರುವ ನಾಲ್ಕು ವಿಭಾಗಗಳೂ ಪ್ರಕರಣಗಳು. ಪ್ರಕರಣವಾದರೂ ಅಧ್ಯಯನ ಮಾಡತಕ್ಕವರು ಪ್ರತಿಪಾದಿತ ವಿಷಯಗಳನ್ನು ತಿಳಿಯುವಾಗ 'ಅಧಿಕಾರ, ಸಂಬಂಧಾ'ದಿ ವಿಷಯಗಳನ್ನು ಊಹಿಸಿ ತಿಳಿದುಕೊಳ್ಳಬಲ್ಲವರಾದ್ದರಿಂದ ಸಂಪೂರ್ಣ ಶಾಸ್ತ್ರವನ್ನು ಅಧ್ಯಯನ ಮಾಡಿದಂತೆಯೇ ಆಗುವುದು. ಅಲ್ಲದೆ ಈ ನಾಲ್ಕು ಪ್ರಕರಣಗಳನ್ನೂ ಸೇರಿಸಿದರೆ ಒಂದು ಶಾಸ್ತ್ರವೇ ಆಗುತ್ತದೆ.

ಹೇಗೆಂದರೆ, ರೋಗಾರ್ತನಿಗೆ ರೋಗವು ಹೋದ ಮೇಲೆ ಸ್ವಾಸ್ಥ್ಯ ಉಂಟಾಗುವುದಷ್ಟೆ. ಅದೇ ಆರೋಗ್ಯ, ರೋಗನಿವೃತ್ತಿ. ಹಾಗೆಯೇ ದುಃಖಾರ್ತನಾದ ಜೀವನಿಗೆ, ದುಃಖಕಾರಣವಾದ ದ್ವೈತಪ್ರಪಂಚವು ಇಲ್ಲವಾದಾಗ ಸ್ವಸ್ಥತೆಯುಂಟಾಗುತ್ತದೆ. ಈ ಅದ್ವೈತಭಾವವು ವೇದಾಂತಶಾಸ್ತ್ರದಿಂದಾಗುವ ಪ್ರಯೋಜನ. ಜೀವಾತ್ಮನು ತನ್ನ ಸ್ವರೂಪದಲ್ಲಿ ನಿಲ್ಲುವುದೇ ಇದು. ಬ್ರಹ್ಮವಿದ್ಯೆಯೆಂಬ ಚಿಕಿತ್ಸೆಯಿಂದ ಜೀವಾತ್ಮನಿಗೆ ಅಂಟಿಕೊಂಡಿದ್ದ ದ್ವೈತಭಾವವೆಂಬ ರೋಗವು ಶಾಂತವಾಗುತ್ತದೆ. ಆಗ ಜೀವಾತ್ಮನು ತನ್ನ ನಿಜಸ್ವರೂಪದಲ್ಲಿ ನಿಲ್ಲುತ್ತಾನೆ. ರೋಗವು ಹೋದ್ದರಿಂದ ಅವನು ಸ್ವಸ್ಥನಾಗಿ ಆನಂದಸ್ವರೂಪನೇ ಆಗಿಬಿಡುತ್ತಾನೆ. ಈ ಶಾಸ್ತ್ರವು ಅದ್ವೈತ ಭಾವವನ್ನು ಪಡೆಯಲು ಉಪಾಯವನ್ನು ಪ್ರದರ್ಶಿಸುತ್ತದೆ.

ಇಲ್ಲಿ ನಾಲ್ಕು ಪ್ರಕರಣಗಳಿವೆಯೆಂದು ಹೇಳಿದೆವಷ್ಟೆ. ಅವುಗಳಲ್ಲಿ ಮೊದಲನೆಯ ಆಗಮ ಪ್ರಕರಣವು ಓಂಕಾರದ ಸ್ವರೂಪ ನಿರ್ಣಯದ ಮೂಲಕ ಆತ್ಮತತ್ತ್ವವನ್ನು ತಿಳಿಯಲು ಉಪಕಾರಿಯಾಗಿದೆ. ಇಲ್ಲಿ ಯುಕ್ತಿಯು ಸ್ವಲ್ಪ ಇದ್ದರೂ ವೇದವಾಕ್ಯವೇ ಮುಖ್ಯ ಪ್ರಮಾಣವಾದ್ದರಿಂದ ಆಗಮಪ್ರಕರಣವೆನಿಸಿಕೊಂಡಿದೆ. ಆಗಮವೆಂದರೆ ವೇದ. ಆರೋಪಿತವಾದ ದ್ವೈತವನ್ನು ನಿಷೇಧಿಸಿದ ಮೇಲೆ ಅನಾರೋಪಿತವಾದ ಸಹಜಸ್ಥಿತಿಯು ತಾನಾಗಿ ಲಭಿಸುತ್ತದೆ. ರಜ್ಜು ಸರ್ಪ ನ್ಯಾಯದಂತೆ ಹಗ್ಗವನ್ನು ಹಾವು ಎಂದು ಭ್ರಮಿಸಿದವನಿಗೆ ಅದು ಹಾವು ಅಲ್ಲ ಎಂದು ತಿಳಿಸಿದಾಗ ಹಗ್ಗವೆಂಬ ಜ್ಞಾನವು ತಾನಾಗಿ ಪ್ರಾಪ್ತವಾಗುತ್ತದೆ. ಅಲ್ಲಿ ಹಾವು ಎನ್ನುವುದು ಆರೋಪಿತ. ಹಗ್ಗ ಎನ್ನುವುದು ಅನಾರೋಪಿತ. ಹೀಗೆ ಆರೋಪಿತವಾದ ದ್ವೈತವನ್ನು ಯುಕ್ತಿಯಿಂದಲೂ ಶಾಸ್ತ್ರವಚನದಿಂದಲೂ ಮಿಥ್ಯೆಯೆಂದು ಪ್ರತಿಪಾದಿಸುವುದಕ್ಕಾಗಿ ಎರಡನೆಯ ವೈತಥ್ಯ ಪ್ರಕರಣವಿದೆ. ಹಾಗೆಯೇ ಅದ್ವೈತಸಿದ್ಧಾಂತವೂ ತಪ್ಪೆಂದು ಶಂಕಿಸಿದವರಿಗೆ ಆ ಶಂಕೆಯನ್ನು ದೂರ ಮಾಡಿ ಅದ್ವೈತವನ್ನು ಸ್ಥಿರಗೊಳಿಸುವುದಕ್ಕಾಗಿ ಮೂರನೆಯ ಅದ್ವೈತ ಪ್ರಕರಣವು ಹೊರಟಿದೆ. ಈ ಅದ್ವೈತ ಸಿದ್ಧಾಂತಕ್ಕೆ ಇತರ ಸಾಂಖ್ಯಾದಿ ದರ್ಶನಗಳು ಪ್ರತಿಪಕ್ಷವಾಗಿ ನಾನಾ ವಾದಗಳನ್ನು ಎತ್ತುತ್ತವೆ. ಅವುಗಳಿಗೆಲ್ಲ ಸರಿಯಾದ ಉತ್ತರಗಳನ್ನಿತ್ತು ಶಾಂತಗೊಳಿಸುವುದಕ್ಕಾಗಿ ನಾಲ್ಕನೆಯ ಅಲಾತಶಾಂತಿ ಪ್ರಕರಣವಿದೆ. ಅಲಾತಗಳೆಂದರೆ ಬೆಂಕಿ ಹತ್ತಿಸಿದ ದೊಂದಿಗಳು – ಕೊಳ್ಳಿಗಳು. ಅದ್ವೈತವನ್ನು ವಿರೋಧಿಸುವ ವಾದಗಳೇ ಕೊಳ್ಳಿಗಳು. ಅಲಾತಶಾಂತಿ ಪ್ರಕರಣವು ಆ ಎಲ್ಲ ಕೊಳ್ಳಿಗಳಿಗೂ ನೀರು ಹೊಯ್ದು ತಣ್ಣಗೆ ಮಾಡುತ್ತದೆ!

ಜೀವಾತ್ಮನ ಆತ್ಯಂತಿಕ ದುಃಖನಿವೃತ್ತಿಯು ಪ್ರಯೋಜನ. ಜೀವಾತ್ಮ

ಪರಮಾತ್ಮರ ಐಕ್ಯವು ವಿಷಯ. ಗ್ರಂಥವು ಅದನ್ನು ಪ್ರತಿಪಾದಿಸುವುದರಿಂದ ಪ್ರತಿಪಾದ್ಯ ಪ್ರತಿಪಾದಕ ಭಾವವು ಸಂಬಂಧ. ಶಮದಮಾದಿ ಸಂಪತ್ತನ್ನು ಗಳಿಸಿ ವಿರಕ್ತನಾಗಿ ಬ್ರಹ್ಮಜ್ಞಾನವನ್ನು ಪಡೆಯಲಪೇಕ್ಷಿಸುವ ಜಿಜ್ಞಾಸುವು ಈ ಶಾಸ್ತ್ರಕ್ಕೆ ಅಧಿಕಾರಿ ಎಂದು ಸ್ಪಷ್ಟವಾಗುತ್ತದೆ.

ಇಲ್ಲೊಂದು ಪ್ರಶ್ನೆಯುಂಟು. ಆಗಮಕಾಂಡದಲ್ಲಿ ಓಂಕಾರದ ಸ್ವರೂಪ ನಿರ್ಣಯವಿದೆ. ಇದು ಆತ್ಮತತ್ತ್ವನಿರ್ಣಯಕ್ಕೆ ಉಪಯುಕ್ತವಾಗುತ್ತದೆ ಎಂದು ಹೇಳಲಾಗಿದೆ. ಓಂಕಾರವು ಒಂದು ಅಕ್ಷರ. ಅದನ್ನು ತಿಳಿದರೆ ಆತ್ಮತತ್ತ್ವವು ಹೇಗೆ ತಿಳಿಯುತ್ತದೆ? ಓಂಕಾರಕ್ಕೂ ಆತ್ಮತತ್ತ್ವಕ್ಕೂ ಯಾವ ಸಂಬಂಧವಿದೆ? ನಿಜ; ಈ ಪ್ರಶ್ನೆಗೆ ಉತ್ತರವಾಗಿ ನಾವು ಶ್ರುತಿಯನ್ನೇ ಅವಲಂಬಿಸಬೇಕು. **''ಓಮಿತ್ಯೇತತ್, ಏತದಾಲಂಬನಂ, ಓಮಿತ್ಯಾತ್ಮಾನಂ ಯುಂಜೀತ, ಓಮಿತಿ ಬ್ರಹ್ಮ, ಓಂಕಾರ ಏವೇದಂ ಸರ್ವಂ''** ಇತ್ಯಾದಿ ಶ್ರುತಿವಾಕ್ಯಗಳು ಓಂಕಾರವನ್ನೂ ಆತ್ಮತತ್ತ್ವವನ್ನೂ ಸಮೀಕರಿಸಿ ಹೇಳುತ್ತವೆ. ಈ ವಾಕ್ಯಗಳ ತಾತ್ಪರ್ಯವೇನೆಂದರೆ :–

ಓಂಕಾರವೇ ಬ್ರಹ್ಮ ಸಾಲಗ್ರಾಮವು ವಿಷ್ಣುವಿನ ಪ್ರತೀಕವಾದ್ದರಿಂದ ಸಾಲಗ್ರಾಮವನ್ನೇ ವಿಷ್ಣುವೆಂದು ಪೂಜಿಸುವಂತೆ ಓಂಕಾರವೇ ಬ್ರಹ್ಮವೆಂದು ಉಪಾಸನೆ ಮಾಡಬೇಕು. ಓಂ ಎಂಬುದೇ ಆತ್ಮವೆಂದು ತಿಳಿದುಕೊಳ್ಳಬೇಕು. ದೂರದಲ್ಲಿ ಕಂಬದಂತೆ ಕಾಣಿಸಿದ್ದು ವಸ್ತುತಃ ಮನುಷ್ಯನೇ ಎನ್ನುವಂತೆ ಅಕ್ಷರವಾಗಿ ಕಾಣಿಸಿದ ಓಂ ಎಂಬುದು ವಸ್ತುತಃ ಬ್ರಹ್ಮವೇ ಎಂದು ಭಾವಿಸತಕ್ಕದ್ದು, ಇದು ಘಟ, ಮಠ, ಪಟ ಮುಂತಾದ ಸಮಸ್ತ ಅರ್ಥಪ್ರಪಂಚವೂ **''ಬ್ರಹ್ಮೈವೇದಂ ಸರ್ವಂ''** ಇತ್ಯಾದ್ಯುಪದೇಶಗಳಿಂದ ಬ್ರಹ್ಮವೇ ಎಂದು ತಿಳಿಯಬೇಕಾಗುತ್ತದೆ. ಹಾಗೆಯೇ ಸಮಸ್ತ ವಾಕ್ ಪ್ರಪಂಚವೂ ಓಂಕಾರವೇ ಸರಿ. ಈ ಓಂಕಾರವೂ ಬ್ರಹ್ಮವೇ ಎಂದು ತಿಳಿಯತಕ್ಕದ್ದು. ಆದ್ದರಿಂದ ಓಂಕಾರವನ್ನು ಬ್ರಹ್ಮದ ಸಮೀಪದಲ್ಲಿ ಬ್ರಹ್ಮದಂತೆಯೇ ಇರುವ ಅಕ್ಷರವೆಂದು ಭಾವಿಸಿ ಪರೀಕ್ಷಿಸಿದಾಗ ಅದಕ್ಕೆ ಸದೃಶವಾದ ಆತ್ಮತತ್ತ್ವವೂ ಗೊತ್ತಾಗುವುದೆಂದು ಶ್ರುತಿಯ ಆಶಯವಾಗಿದೆ.

ಆ ಓಂಕಾರವು ಬ್ರಹ್ಮವಾಚಕವಾದ್ದರಿಂದ ಬ್ರಹ್ಮಸ್ವರೂಪವೆಂದೇ ತಿಳಿಯಬೇಕು. ಪ್ರಾಣ, ಇಂದ್ರಿಯ, ಘಟ, ಪಟಾದಿ ಶಬ್ದಗಳೂ ಓಂಕಾರದ ವಿಕಾರಗಳು. ಆ ಶಬ್ದಗಳಿಗೆ ವಾಚ್ಯಗಳಾದ ಪ್ರಾಣಾದಿಪದಾರ್ಥಗಳೂ ಸಹ ಬ್ರಹ್ಮವೇ. ಏಕೆಂದರೆ ಅಭಿಧಾನಾಭಿಧೇಯಗಳಿಗೆ ಭೇದವಿಲ್ಲ. **ಅಭಿಧಾನ =** ವಾಚಕ ಶಬ್ದ. **ಅಭಿಧೇಯ =** ವಾಚ್ಯವಾದ (ಅಭಿಧೇಯವಾದ) ಅರ್ಥ. ಶಬ್ದಾರ್ಥಗಳಿಗೆ ತಾದಾತ್ಮ್ಯವನ್ನು ಶಾಸ್ತ್ರಕಾರರು ಅಂಗೀಕರಿಸಿದ್ದಾರೆ. ಶಬ್ದವನ್ನು

ಬಿಟ್ಟು ಅರ್ಥವಿಲ್ಲ. ಅರ್ಥವನ್ನು ಬಿಟ್ಟು ಶಬ್ದವಿಲ್ಲ. ಶಬ್ದಕ್ಕೆ ಅರ್ಥವು ವಾಚ್ಯವಾದಂತೆ ಶಬ್ದವೂ ವಾಚ್ಯವಾಗಿರುತ್ತದೆ. ಉದಾ. : ಘಟವು ಅಕಾರಾಂತ ಪುಲ್ಲಿಂಗ. ಇಲ್ಲಿ ಘಟವೆಂಬ ಶಬ್ದವೇ ಘಟಪದದ ಅರ್ಥ. ಘಟವು ಒಡೆದು ಹೋಯಿತು = ಇಲ್ಲಿ ಘಟ ಶಬ್ದಕ್ಕೆ ಗಡಿಗೆ ಎಂದರ್ಥ. ಆದ್ದರಿಂದಲೇ ಕಾಳಿದಾಸನು –

**ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ ।**
**ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ॥**

ಎಂದು ಅರ್ಧನಾರೀಶ್ವರ ಸ್ವರೂಪರಾದ ಪಾರ್ವತೀಪರಮೇಶ್ವರರನ್ನು ವಾಗರ್ಥಗಳಿಗೆ ಹೋಲಿಸಿದ್ದಾನೆ. ಶ್ರುತಿಯೂ ಸಹ **''ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ'' ''ಸರ್ವ ಹೀದಂ ನಾಮನಿ''** ಎಂದು ಹೇಳಿದೆ. ಹೀಗೆ ಅಭಿಧಾನಾಭಿಧೇಯಗಳಿಗೆ ಭೇದವಿಲ್ಲವಾದ್ದರಿಂದ **''ಓಮಿತಿ ಬ್ರಹ್ಮ. ಓಂಕಾರ ಏವೇದಂ ಸರ್ವಂ''** ಎಂಬ ಶ್ರುತಿಯೊಡನೆ ಯಾವ ವಿರೋಧವೂ ಇಲ್ಲದೆ **'ಸರ್ವಂ ಖಲ್ವಿದಂ ಬ್ರಹ್ಮ'** ಇತ್ಯಾದಿ ಶ್ರುತಿಗಳು ಸಂಗತವಾಗುತ್ತವೆ. **''ಓಮಿತ್ಯೇತದಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಂ''** ಎಂದು ಮಾಂಡೂಕ್ಯೋಪನಿಷತ್ತಿನ ಆರಂಭದಲ್ಲಿದೆ. ಅಭಿಧೇಯವು ಅಭಿಧಾನಕ್ಕಿಂತ ಅತಿರಿಕ್ತವಲ್ಲವೆಂದು ಹೇಳಿದ್ದಾಗಿದೆ. ಆದ್ದರಿಂದ ಈ ಜಗತ್ತಿನಲ್ಲಿರುವ ಸಕಲ ಪದಾರ್ಥಗಳೂ ಪದ (ಅಭಿಧಾನ) ಸ್ವರೂಪಗಳೇ ಹೊರತು ಅತಿರಿಕ್ತವಾದವುಗಳಲ್ಲ. ಆದ್ದರಿಂದ **''ಇದಂ ಸರ್ವಮೋಂಕಾರ ಏವ''** ಎಂದು ಸಿದ್ಧವಾಯಿತು. **''ಸರ್ವಂ ಹೀದಂ ನಾಮನಿ''** ಎಂಬ ಶ್ರುತಿಗೆ ಸಮಸ್ತ ಪದಾರ್ಥಗಳೂ **ನಾಮ** = ಶಬ್ದದಿಂದ, **ನೀಯತೇ** = ವ್ಯವಹಾರ ಮಾರ್ಗಕ್ಕೆ ಎಳೆಯಲ್ಪಡುತ್ತವೆ ಎಂದರ್ಥ. ಎಲ್ಲ ವಸ್ತುಗಳೂ **'ಓಂಕಾರೇಣ ಸರ್ವಾವಾಕ್ ಸಂತೃಣ್ಣಾ'** ಎಂಬ ಶ್ರುತಿಯಂತೆ ಸಮಸ್ತ ಶಬ್ದಗಳ ಪ್ರತಿನಿಧಿಯಾದ ಓಂಕಾರದಿಂದ ಅನುವಿದ್ಧವಾಗಿರುತ್ತವೆಯಾದ್ದರಿಂದ ಎಲ್ಲವೂ ಓಂಕಾರವೇ ಎಂದು ಹೇಳಿರುವುದು ಯುಕ್ತವಾಗಿದೆ.

ಅನಂತರ **'ಸರ್ವಂ ಹ್ಯೇತದ್ ಬ್ರಹ್ಮ'** ಎಂಬ ವಾಕ್ಯವು ಬಂದಿದೆ. ಹಿಂದೆ ಇದೆಲ್ಲವೂ ಓಂಕಾರವೇ ಎಂದು ಅಭಿಧಾನ (ಓಂಕಾರ)ವನ್ನು ಪ್ರಧಾನವಾಗಿ ಹೇಳಲಾಗಿದೆ. ಈಗ 'ಬ್ರಹ್ಮ' ಎಂದು ಅಭಿಧೇಯವನ್ನು ಪ್ರಧಾನವನ್ನಾಗಿ ಹೇಳಿದೆ. ಇದಕ್ಕೆ ಕಾರಣವೇನು? ಕಾರಣವೇನೆಂದರೆ ಅಭಿಧಾನ–ಅಭಿಧೇಯಗಳು ಒಂದೇ ಎಂದು ತೋರಿಸುವುದು. ಅವುಗಳಿಗೆ ಭೇದವಿಲ್ಲ ಎಂದು ವ್ಯಕ್ತಪಡಿಸುವುದು. ಎರಡು ಕಡೆಯೂ ಹಾಗೆ ಹೇಳದಿದ್ದರೆ ಅಭಿಧೇಯವು ಬೇರೆ ಅಭಿಧಾನವು ಬೇರೆ ಎಂದು ಜನರು ತಿಳಿದಾರು. ಆಗ ಅಭಿಧೇಯವನ್ನು ಅಭಿಧಾನದಿಂದ ನಿರ್ದೇಶಿಸಿರುವುದು ಗೌಣವೆಂದು ಜನರು ಭಾವಿಸಿಯಾರು. ಓಂಕಾರ ಶಬ್ದವೂ

ಬ್ರಹ್ಮವೂ ಒಂದೇ ಅರ್ಥದ ಮುಖ್ಯಪದಗಳೆಂದು ತಿಳಿಯದೇ ಹೋದಾರು. ಇದೇ ಪ್ರಯೋಜನ. ಇದರಿಂದ ವಾಚ್ಯತ್ವವಾಚಕತ್ವಗಳೆರಡೂ ಇಲ್ಲದೆ ಇರುವ ಉಭಯ ವಿಲಕ್ಷಣ ವಾದದ್ದು ಬ್ರಹ್ಮವಸ್ತು ಎಂದು ನಿಶ್ಚಯವಾಗುತ್ತದೆ. ಓಂಕಾರವೆಂಬ ಅಭಿಧಾನವನ್ನು ಶಬ್ದವೆಂದೂ ಅಭಿಧೇಯವಾದ ಬ್ರಹ್ಮವಸ್ತುವನ್ನು ಪರಬ್ರಹ್ಮ ಎಂದೂ ಶಾಸ್ತ್ರದಲ್ಲಿ ವ್ಯವಹರಿಸುತ್ತಾರೆ. ಶಬ್ದಬ್ರಹ್ಮವನ್ನು ಅಪರಬ್ರಹ್ಮವೆಂದೂ ಹೇಳುವುದುಂಟು.

ಅನಂತರ **''ಅಯಮಾತ್ಮಾ ಬ್ರಹ್ಮ ಸೋಽಯಮಾತ್ಮಾ ಚತುಷ್ಪಾತ್''** ಎಂದಿದೆ. ಕಾರ್ಯಕಾರಣಗಳೆಲ್ಲವೂ ಬ್ರಹ್ಮವೇ. ಅದು ಅಭಿಧಾನಾಭಿಧೇಯಗಳಿಗಿಂತ ಅತಿರಿಕ್ತವಾದದ್ದು. ಆದರೆ ಅದು ಪರೋಕ್ಷವಾಗಿ ಯಾವುದೋ ಲೋಕದಲ್ಲಿ ಕುಳಿತಿಲ್ಲ. ಮತ್ತೇನೆಂದರೆ, ಇದೋ ಈ ಹೃದಯದೇಶದಲ್ಲಿಯೇ ಇದೆ. ಇದೇ ಆತ್ಮ. ನಾನು ಎಂದುಕೊಳ್ಳುವ ನೀನೇ ಆತ್ಮ ಎಂದು ಅಭಿಪ್ರಾಯ. ಈ ಆತ್ಮನು ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂದು ನಾಲ್ಕು ಪಾದಗಳುಳ್ಳವನು. ಇಲ್ಲಿ ಪಾದ ವೆಂದರೆ ಗೋವಿಗೆ ನಾಲ್ಕು ಪಾದಗಳಿರುವಂತೆ ನಾಲ್ಕು ಕಾಲುಗಳು ಆತ್ಮನಿಗಿವೆ ಎಂದು ಅರ್ಥವಲ್ಲ. ಪಾದವೆಂದರೆ ಮಾನಸಿಕವಾದ ನಾಲ್ಕು ವಿಭಾಗವೆಂದರ್ಥ. ಒಂದು ರೂಪಾಯಿಗೆ ಹದಿನಾರು ಆಣೆಗಳು. ಈ ರೂಪಾಯಿಯ ನಾಲ್ಕನೆಯ ಒಂದು ವಿಭಾಗಕ್ಕೆ ಪಾವಲಿ ಎಂದು ವ್ಯವಹಾರವಿತ್ತು. ಅದೇ ನಾಲ್ಕು ಆಣೆ. ಇದು ವ್ಯವಹಾರ ಸೌಕರ್ಯಕ್ಕಾಗಿ ಕಲ್ಪಿತವಾದ ವಿಭಾಗ. ಹಾಗೆಯೇ ಅವಸ್ಥಾನುಗುಣವಾಗಿ ಒಬ್ಬನೇ ಆತ್ಮನನ್ನು ನಾಲ್ಕು ವಿಭಾಗ ಮಾಡಿಕೊಳ್ಳಬೇಕು. ಈ ವಿಭಾಗವೇ ಪಾದ. ಓಂಕಾರದಿಂದ ಅಭಿಧೇಯವಾದ ಪರಾಪರ ಬ್ರಹ್ಮವೆಂಬ ಆತ್ಮನನ್ನು ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂಬ ನಾಲ್ಕು ಪಾದಗಳನ್ನಾಗಿ ವಿಂಗಡಿಸಿಕೊಳ್ಳಬೇಕು.

ಇಲ್ಲಿ ಪಾದ ಶಬ್ದಕ್ಕೆ ರೂಢವಾದ ಕಾಲು ಎಂದು ಅರ್ಥವಲ್ಲ. ಯೌಗಿಕವಾದ ಅರ್ಥವನ್ನು ಗ್ರಹಿಸಬೇಕು. ಅದು ಯಾವುದೆಂದರೆ, **'ಪದ್ಯತೇ ಅನೇನ ಇತಿ ಪಾದಃ'**–ಯಾವುದರಿಂದ ಜ್ಞೇಯವಾದ ಬ್ರಹ್ಮವು ತಿಳಿಯಲ್ಪಡುವುದೋ ಅದು ಪಾದ. ವಿಶ್ವ, ತೈಜಸ, ಪ್ರಾಜ್ಞ ಇವು ಮೂರು ಈ ಬಗೆಯ ಪಾದಗಳು. ನಾಲ್ಕನೆಯದಾದ ತುರೀಯವೇ ಜ್ಞೇಯವಾದ್ದರಿಂದ ಅಲ್ಲಿ **ಪದ್ಯತೇ = ಜ್ಞಾಯತೇ ಇತಿ ಪಾದಃ** ಎಂದು ವ್ಯುತ್ಪತ್ತಿ. ಈ ಮೂರು ಸಾಧನಗಳಿಂದ ಯಾವುದು ತಿಳಿಯಲ್ಪಡುವುದೋ ಅದು ಪಾದ. ಹೀಗೆ ವ್ಯುತ್ಪತ್ತಿ ಭೇದದಿಂದ ಪಾದ ಶಬ್ದಕ್ಕೆ ಎರಡು ಯೌಗಿಕಾರ್ಥಗಳಿವೆ. ಉಪನಿಷತ್ತು ಒಂದು ಬಗೆಯ ಕಾವ್ಯಶೈಲಿಯಿಂದ ವಸ್ತುವನ್ನು ವರ್ಣಿಸುತ್ತದೆ. ವಿಶ್ವ, ತೈಜಸ, ಪ್ರಾಜ್ಞರು ಜ್ಞಾನಸಾಧನಗಳು. ತುರೀಯವು ಜ್ಞೇಯವಾದ ಆತ್ಮ ಆದ್ದರಿಂದ ಆತ್ಮನು ಚತುಷ್ಪಾತ್.

ಅಖಂಡವೂ ಅಮೂರ್ತವೂ ಆದ ಬ್ರಹ್ಮವಸ್ತುವಿಗೆ ನಾಲ್ಕು ಪಾದಗಳಾದರೂ ಹೇಗೆ ಇರಬಲ್ಲವು? ಹೌದು; ಪರಮಾರ್ಥವಾಗಿ ಅದಕ್ಕೆ ಪಾದವೇ ಇಲ್ಲ. ಆ ವಸ್ತುವಿನ ಸತ್ಯಸ್ವರೂಪವೇನೆಂಬುದನ್ನು ತಿಳಿಸುವುದಕ್ಕಾಗಿ ಉಪಾಧಿಗಳಿಂದ ನಾಲ್ಕು ಪಾದಗಳಿವೆಯೆಂದು ಕಲ್ಪಿಸಲು ಬರುತ್ತದೆ. ಹೇಗೆಂದರೆ, ಜಾಗ್ರದವಸ್ಥೆಯಲ್ಲಿರುವ ಆತ್ಮನು ಒಂದು ಪಾದ ಎಂದು ಕಲ್ಪಿಸಬಹುದು. ಇದನ್ನು ಉಪನಿಷತ್ತು ಈ ಪ್ರಕಾರದಲ್ಲಿ ವರ್ಣಿಸುತ್ತದೆ. ಜಾಗರಿತಸ್ಥಾನಃ – ಜಾಗ್ರತ್ತು ನನಗೆ ಇದೆ ಎಂದು ಅಭಿಮಾನವುಳ್ಳವನು ಎಂದರ್ಥ. ಆತ್ಮನಿಗೆ ಯಾವ ಅವಸ್ಥೆಯೂ ಇಲ್ಲ. ಜೀವಾತ್ಮನು ಜಾಗ್ರತ್ತಿನಲ್ಲಿದ್ದೇನೆ, ಎಚ್ಚರವಾಗಿದ್ದೇನೆ ಎಂದು ಅವಿದ್ಯೆಯಿಂದ ತಿಳಿದು ಕೊಂಡಿದ್ದಾನೆ. ಸ್ಥೂಲ ಸೂಕ್ಷ್ಮ ಕಾರಣಶರೀರಗಳು ಇವನಿಗೆ ಉಪಾಧಿ ಗಳು. ಈ ಸ್ಥಿತಿಯಲ್ಲಿ ಎಚ್ಚರವಾಗಿದ್ದೇನೆಂದು ತಿಳಿದ ಜೀವಾತ್ಮನು ಪರಬ್ರಹ್ಮದ ಮೊದಲನೆಯ ಪಾದವೆಂದು ತಿಳಿಯಬೇಕು. ಇದೇ ಕಾಲ್ಪನಿಕವಾದ ಪಾದ. **ಜಾಗರಿತ ಸ್ಥಾನ =** ಜಾಗ್ರತ್ ಎಂಬ ಉಪಾಧಿಯುಳ್ಳವನು.

**ಬಹಿಃಪ್ರಜ್ಞಃ =** ಬಾಹ್ಯ ವಸ್ತುವಿನ ಪ್ರಜ್ಞೆಯುಳ್ಳವನು. ಇಲ್ಲಿ ಪ್ರಜ್ಞೆಯೆಂದರೆ ವೃತ್ತಿಜ್ಞಾನ. ಶುದ್ಧಜ್ಞಾನರೂಪವಾದ ಬ್ರಹ್ಮಕ್ಕೆ ವಿಷಯವಾದ ವಸ್ತುವೇ ಇಲ್ಲ. ಅದು ನಿರ್ವಿಷಯವಾದ ಶುದ್ಧಜ್ಞಾನ. ಅದೇ **'ಪ್ರಜ್ಞಾನಂ ಬ್ರಹ್ಮ'**. ಜೀವನ ಉಪಾಧಿ ಯಾದ ಅಂತಃಕರಣದಲ್ಲಿ ಪ್ರಜ್ಞಾನವೆಂಬ ಚೈತನ್ಯವು ಪ್ರತಿಬಿಂಬಿಸಿದಾಗ, ಅದರ ಬಲದಿಂದ ಜಡಬುದ್ಧಿಯಲ್ಲಿ ವೃತ್ತಿಯುಂಟಾಗುತ್ತದೆ. ವೃತ್ತಿಯೆಂದರೆ ವ್ಯಾಪಾರ. ಆ ವೃತ್ತಿಯು ಘಟಪಟಾದಿ ವಿಷಯಗಳನ್ನು ಗ್ರಹಿಸುತ್ತದೆ. ಜೀವಾತ್ಮನ ದೃಷ್ಟಿಗೆ ತನ್ನ ದೇಹವೂ ದೇಹದ ಹೊರಗೂ ಇರುವ ಬಾಹ್ಯವಸ್ತುಗಳು ಗೋಚರಿಸುತ್ತವೆ. ಮನುಷ್ಯನ ಜ್ಞಾನವು ಈ ಬಾಹ್ಯ ವಿಷಯಗಳನ್ನು ಗ್ರಹಿಸಬಲ್ಲದಾದದ್ದರಿಂದ ಜೀವಾತ್ಮನು ಬಹಿಷ್ಪ್ರಜ್ಞನಾಗುತ್ತಾನೆ. ಆದರೆ ಪರಬ್ರಹ್ಮವು ಅದ್ವಿತೀಯ ವಸ್ತು. ಅದಕ್ಕೆ ಬಾಹ್ಯವಾದದ್ದು ಯಾವುದೂ ಇಲ್ಲ. ಘಟಪಟಾದಿಗಳೂ ಸಹ ಬ್ರಹ್ಮವೇ. **'ಸರ್ವಂ ಖಲ್ವಿದಂ ಬ್ರಹ್ಮ'**. ಘಟಜ್ಞಾನ, ಪಟಜ್ಞಾನ ಎಂಬ ವ್ಯವಹಾರದಲ್ಲಿ ಜ್ಞಾನವು ಅಂತಃಕರಣ ವ್ಯಾಪಾರವಾದ್ದರಿಂದ ವೃತ್ತಿಜ್ಞಾನವಾಗಿದೆ ಎಂಬುದನ್ನು ನೆನಪಿ ನಲ್ಲಿಡಬೇಕು.

**ಸಪ್ತಾಂಗಃ =** ಈ ಸಪ್ತಾಂಗತ್ವವು ಜೀವನಿಗೆ ಅನ್ವಯಿಸಿದಾಗ ಶಿರಸ್ಸು, ಕಣ್ಣು, ಪ್ರಾಣ , ಉದರಸಹಿತವಾದ ಸೊಂಟ, ಮೂತ್ರಕೋಶ, ಪಾದ ಮತ್ತು ಬಾಯಿ.

ಪ್ರಕೃತದಲ್ಲಿ ವ್ಯಷ್ಟಿಯಾದ ಮನುಷ್ಯನು ನರ. ಈ ನರರ ಸಮುದಾಯವು ಸಮಷ್ಟಿ. ಈ ಸಮಷ್ಟಿಯಲ್ಲಿ ಅಭಿಮಾನಿಯಾದ ವಿರಾಟ್ ಪುರುಷನನ್ನು ವೈಶ್ವಾನರ

ಎಂದು ಹೇಳುತ್ತಾರೆ. **ವಿಶ್ವಶ್ಚಾಸೌ ನರಶ್ಚ = ವೈಶ್ವಾನರಃ** ಎಂದು ಕರ್ಮಧಾರಯ ಸಮಾಸವನ್ನು ಮಾಡಿದಾಗ ವಿಶ್ವಾನರ ಎಂಬ ರೂಪವು ಸಿದ್ಧವಾಗುತ್ತದೆ. **''ನರೇಚ ಸಂಜ್ಞಾಯಾಮ್''** ಎಂಬ ಪಾಣಿನಿ ಸೂತ್ರದಿಂದ ವಿಶ್ವ ಶಬ್ದಕ್ಕೆ ದೀರ್ಘ. ಅನಂತರ ವಿಶ್ವಾನರ ಏವ ವೈಶ್ವಾನರಃ ಎಂದು ಸ್ವಾರ್ಥೇ ಅಣ್ ಪ್ರತ್ಯಯ ಬಂದಿದೆ. ಸಮಷ್ಟಿಯಾದ ವಿರಾಟ್ ಸ್ವರೂಪದಿಂದ ಪ್ರತಿಯೊಂದು ಪಿಂಡವೂ ಎಂದರೆ ಸಕಲ ಜೀವಿಗಳ ಶರೀರವೂ ನರ ಎಂದು ಗ್ರಹಿಸಬೇಕು. ವೈಶ್ವಾನರ ಎಂದರೆ ಜೀವಾತ್ಮರಿರುವ ಸಕಲ ದೇಹಗಳಿಗೂ ಅಭಿಮಾನಿಯಾದ ಆತ್ಮ. ಈ ಅಭಿಪ್ರಾಯದಿಂದಲೇ ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಸಮಷ್ಟಿಯಾದ ವೈಶ್ವಾನರನ ಸಪ್ತಾಂಗಗಳನ್ನು ನಿರೂಪಿಸಿದ್ದಾರೆ. ಒಂದೊಂದು ಭತ್ತದ ಕಾಳೂ ಭತ್ತದ ರಾಶಿಯಲ್ಲಿ ಸೇರಿಕೊಳ್ಳುವಂತೆ ವಿರಾಟ್ ಎಂಬ ಆತ್ಮನು ಸರ್ವ ಶರೀರಗಳಲ್ಲಿಯೂ ಸೇರಿ ಶರೀರ ಪರಿಚ್ಛಿನ್ನನಾಗಿರುತ್ತಾನೆ.

ಈ ವಿರಾಟ್ ಪುರುಷನಿಗೆ ಸಪ್ತಾಂಗಗಳು ಯಾವುವು? ಛಾಂದೋಗ್ಯದಲ್ಲಿ ಪ್ರಾಚೀನಶಾಲ ಮೊದಲಾದವರಿಗೆ ಅಶ್ವಪತಿಯು ವೈಶ್ವಾನರೋಪಾಸನೆಯ ಪ್ರಕಾರವನ್ನು ತಿಳಿಸಿಕೊಡುತ್ತಾನೆ. (ಛಾಂ. ೫-೧೮-೧) ತ್ರೈಲೋಕ್ಯಾತ್ಮಕನಾದ ವೈಶ್ವಾನರನಿಗೆ ಅಲ್ಲಿ ಪ್ರತಿಪಾದಿಸಿದ ಸಪ್ತಾಂಗಗಳು ಹೀಗಿವೆ. ಅವನಿಗೆ ದ್ಯುಲೋಕವು ಶಿರಸ್ಸು. ಸೂರ್ಯನು ಕಣ್ಣು. ವಾಯುವೇ ಪ್ರಾಣ. ಆಕಾಶವು ಉದರಸಹಿತವಾದ ಸೊಂಟ (ಕಟಿ). ರಯಿಯು ಜಲವನ್ನು ಪ್ರತಿನಿಧಿಸುತ್ತದೆ. ಜಲವೆಂದರೆ ಮೂತ್ರಕೋಶ. ಪೃಥಿವಿಯೇ ಪಾದದ್ವಯ. ಆಹವನೀಯ ಅಗ್ನಿಯು ಮುಖ (ಬಾಯಿ). ಹೀಗೆ ಏಳು ಅಂಗಗಳು ವಿರಾಟ್ ಪುರುಷನಿಗೆ ಇವೆ. ಈತನು **ಏಕೋನವಿಂಶತಿಮುಖಃ =** ಹತ್ತೊಂಬತ್ತು ಮುಖಗಳುಳ್ಳವನು. ಅವು ಯಾವುವೆಂದರೆ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಪ್ರಾಣಾಪಾನಾದಿ ಪಂಚವಾಯುಗಳು ಇವಿಷ್ಟು ಸೇರಿ ಹದಿನೈದು ಆಗುತ್ತವೆ. ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂಬ ಅಂತಃಕರಣ ಚತುಷ್ಟಯವು ಸೇರಿದರೆ ಹತ್ತೊಂಬತ್ತು ಆಗುತ್ತದೆ. ಈ ವೈಶ್ವಾನರನು ಸ್ಥೂಲಭುಕ್. ಶಬ್ದ ಸ್ಪರ್ಶಾದಿ ವಿಷಯಗಳು ಇಂದ್ರಿಯಗ್ರಾಹ್ಯವಾದ್ದರಿಂದ ಸ್ಥೂಲಗಳೆನಿಸಿವೆ. ಇವನ್ನು ಅನುಭವಿಸುವ ವೈಶ್ವಾನರನು ಸ್ಥೂಲಭುಕ್ ಎನಿಸುತ್ತಾನೆ. ಈತನು ಪ್ರಥಮಪಾದ. ಪಾದ ಎಂದರೆ ಜ್ಞಾನಕ್ಕೆ ಕಾರಣವಾದದ್ದು ಎಂದು ಹಿಂದೆ ಹೇಳಿದೆ. ಮುಂದಿನ ಸ್ವಪ್ನಸ್ಥಾನದ ತೈಜಸಜ್ಞಾನಕ್ಕೆ ಈ ವೈಶ್ವಾನರನ ಜ್ಞಾನವು ಕಾರಣವಾದ್ದರಿಂದ ಈತನು ಪ್ರಥಮ ಪಾದ. ಶ್ರೀ ಗೌಡಪಾದರು ವೈಶ್ವಾನರನನ್ನು 'ವಿಶ್ವ' ಎಂದು ವ್ಯವಹರಿಸಿದ್ದಾರೆ. ದೇಹಪರಿಚ್ಛಿನ್ನನಾದ ಆತ್ಮನು ವಿಶ್ವ. ಇದು ವ್ಯಷ್ಟಿ. ಸಮಷ್ಟಿಯಾಗಿ ವಿರಾಟ್

ಪುರುಷ ನನ್ನು ಗ್ರಹಿಸಿದಾಗ ವೈಶ್ವಾನರ ಎಂದು ಸಂಜ್ಞೆ. ಈ ರೀತಿಯಾಗಿ ಪಂಚದಶೀ ಮೊದಲಾದ ಕೆಲವು ಗ್ರಂಥಗಳಲ್ಲಿ ವಿಭಜಿಸಿದ್ದುಂಟು.

ಈಗ ವೈಶ್ವಾನರನನ್ನು ಇಷ್ಟು ವಿಶೇಷಣಗಳಿಂದ ವರ್ಣಿಸಿರುವುದರ ತಾತ್ಪರ್ಯವೇನೆಂಬುದು ಪರಿಶೀಲನೀಯವಾಗಿದೆ. **''ಅಯಮಾತ್ಮಾ ಬ್ರಹ್ಮ''** ಎಂಬ ವಾಕ್ಯವು ನಮ್ಮ ದೇಹದಲ್ಲಿರುವ ಪ್ರತ್ಯಗಾತ್ಮನೇ ಬ್ರಹ್ಮವೆಂದು ತಿಳಿಸುತ್ತದೆ. **''ಸೋಽಯಮಾತ್ಮಾ ಚತುಷ್ಪಾತ್''** ಎಂಬ ವಾಕ್ಯವು ಈ ಪ್ರತ್ಯಗಾತ್ಮವೇ ನಾಲ್ಕು ಪಾದಗಳುಳ್ಳದ್ದೆಂದು ಹೇಳುತ್ತದೆ. ಪ್ರತ್ಯಗಾತ್ಮವು ಸ್ವದೇಹ ಪರಿಚ್ಛಿನ್ನವಾದದ್ದು. ಅದು ಜಾಗರಿತ ಸ್ಥಾನವೂ ಬಹಿಷ್ಪ್ರಜ್ಞವೂ ಆಗಿದೆಯೆಂಬುದು ಸರಿ. ಆದರೆ ಸಪ್ತಾಂಗತ್ವ ಮುಂತಾದವೂ ಸರಿಯಾಗಿ ಕೂಡುವುದಿಲ್ಲ. ಆಕಾಶವು ಸೊಂಟ, ದ್ಯುಲೋಕವು ಶಿರಸ್ಸು, ಪೃಥ್ವಿಯೇ ಪಾದ ಎಂಬುದಂತೂ ಜೀವಾತ್ಮನಿಗೆ ಹೇಗೆ ಹೊಂದುತ್ತದೆ? ಎಂದು ಯಾರಾದರೂ ಶಂಕಿಸಬಹುದು. ಅದಕ್ಕೆ ಉತ್ತರ ವೇನೆಂದರೆ, ಆಧ್ಯಾತ್ಮಿಕ ಮತ್ತು ಆಧಿದೈವಿಕಗಳಿಂದ ಕೂಡಿದ ಈ ಸಮಸ್ತ ಪ್ರಪಂಚವೂ ವಿರಾಟ್ ಸಹಿತವಾಗಿ ಪ್ರಥಮ ಪಾದವೆಂದು ಪ್ರತಿಪಾದಿಸ ಬೇಕಾಗಿದೆ. ಅನಂತರ ಈ ಪ್ರಥಮ ಪಾದವು ದ್ವಿತೀಯ ಪಾದವಾದ ಹಿರಣ್ಯಗರ್ಭದಲ್ಲಿ ಲಯವಾಗುವುದೆಂದೂ ಹಿರಣ್ಯಗರ್ಭನು ಅವ್ಯಾಕೃತ ದಲ್ಲಿಯೂ ಅವ್ಯಾಕೃತವು ಪರಬ್ರಹ್ಮದಲ್ಲಿಯೂ ವಿಲಯವಾಗುವುದೆಂದೂ ಪ್ರತಿಪಾದಿಸ ಬೇಕಾಗಿದೆ. ಆಗಲೇ ಅದ್ವೈತವು ಸಿದ್ಧಿಸುತ್ತದೆ. ಪ್ರತ್ಯಗಾತ್ಮನಿಂದ ಪ್ರಾರಂಭವಾಗಿ ಪರಮಾತ್ಮನಲ್ಲಿ ಮುಗಿಯಬೇಕು. ಇದನ್ನು ಅನುಭವಕ್ಕೆ ತಂದುಕೊಡುವುದು ಅತ್ಯಾವಶ್ಯಕವಾದ್ದರಿಂದ ಪ್ರತ್ಯಗಾತ್ಮನ ಅಭಿಮಾನಕ್ಕೆ ಆಸ್ಪದ ನಾದ ನರನಿಂದ ಪ್ರಾರಂಭಿಸಿ ವಿಶ್ವಾತ್ಮನಾದ ಪರಮಾತ್ಮನವರೆಗೆ ಹೋಗಬೇಕು. ಎರಡನೆಯ ಪಾದದಲ್ಲಿ ಹಿರಣ್ಯಗರ್ಭನನ್ನೂ, ಮೂರನೆಯ ಪಾದದಲ್ಲಿ ಅವ್ಯಾಕೃತ ನಾದ ಈಶ್ವರನನ್ನೂ ಸೇರಿಸಿಕೊಂಡು, ನಾಲ್ಕನೆಯ ಪಾದದಲ್ಲಿ ಪರಮಾತ್ಮನನ್ನು ಪ್ರತಿಪಾದಿಸಬೇಕು. ಮೂರು ಪಾದಗಳು ಸಾಧನಗಳೆಂದೂ, ನಾಲ್ಕನೆಯ ಪಾದವು ಸಾಧ್ಯವಾದದ್ದೆಂದೂ ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಮಾನವನು ಮುಕ್ತನಾಗ ಬೇಕಾಗಿರುವುದರಿಂದ ನರನಲ್ಲಿ ಆರಂಭಿಸಿ ವಿರಾಟ್ ಪುರುಷನಲ್ಲಿಗೆ ಹೋಗಬೇಕಾಗಿ ಬಂದದ್ದರಿಂದ ಸಮಷ್ಟಿಯವರೆಗೆ ಧಾವಿಸಿ, ದ್ಯುಲೋಕಾದಿಗಳನ್ನು ವಿರಾಟ್ ಪುರುಷನ ಅಂಗಗಳೆಂದು ವರ್ಣಿಸಿರುವುದು ಯುಕ್ತವಾಗಿದೆ. ವಿರಾಟ್ ಎನಿಸಿದ ಈ ಸ್ಥೂಲ ಪ್ರಪಂಚವನ್ನು ಪರಬ್ರಹ್ಮದಲ್ಲಿ ವಿಲಾಪನ ಮಾಡದಿದ್ದರೆ, ಇತರ ಜೀವರನ್ನೂ ಪ್ರಪಂಚವನ್ನೂ ಸತ್ಯವೆಂದು ಉಳಿಸಿದಂತಾಗುವುದು. ಅದು ಅದ್ವೈತ ಸಿದ್ಧಾಂತವಾಗುವುದಿಲ್ಲ.

**ತೈಜಸೋದ್ವಿತೀಯಃ ಪಾದಃ** = ತೈಜಸನು ದ್ವಿತೀಯ ಪಾದ. **ಸ್ವಪ್ನಸ್ಥಾನ** = ಈತನು ಸ್ವಪ್ನಾಭಿಮಾನಿ. ನನಗೆ ಕನಸು ಬೀಳುತ್ತಿದೆ ಎಂದುಕೊಂಡವನು. **ಅಂತಃಪ್ರಜ್ಞಃ** = ಆಂತರಿಕವಾದ ಜ್ಞಾನವುಳ್ಳವನು. ಅಂತಃಪ್ರಜ್ಞೆಗೆ ಬಾಹ್ಯವಾದ ಯಾವ ವಸ್ತುವೂ ಎದುರಿಗಿರಬೇಕಾಗಿಲ್ಲ. ಜಾಗ್ರತ್ ಪ್ರಜ್ಞೆಯಾದರೋ ಮನೋ ಬುದ್ಧಿಗಳನ್ನೂ, ನೇತ್ರಾದಿ ಇಂದ್ರಿಯಗಳನ್ನೂ ಬಾಹ್ಯವಸ್ತುಗಳ ಸಾನ್ನಿಧ್ಯವನ್ನೂ ಬಯಸುತ್ತದೆ. ಸ್ವಪ್ನಜ್ಞಾನವಾದರೋ ಮನಃಸ್ಪಂದನ ಮಾತ್ರವಾಗಿದೆ. ಜಾಗ್ರತ್ತಿನಲ್ಲಾದ ಜ್ಞಾನವು ಮನಸ್ಸಿನಲ್ಲಿ ಒಂದು ಸಂಸ್ಕಾರವನ್ನುಂಟು ಮಾಡಿರುತ್ತದೆ. ಚಿತ್ರವನ್ನು ಬರೆದ ಪಟದಂತೆ ಆ ಮನಸ್ಸು ಬಾಹ್ಯ ವ್ಯಕ್ತಿಗಳಿಲ್ಲದಿದ್ದರೂ ಇಂದ್ರಿಯಗಳ ಕಾರ್ಯವಿಲ್ಲದಿದ್ದರೂ ಆ ವ್ಯಕ್ತಿಗಳಿದ್ದಂತೆ ಒಂದು ಪ್ರಜ್ಞೆಯನ್ನುಂಟು ಮಾಡುತ್ತದೆ. ಸಾಮಾನ್ಯವಾಗಿ ಸ್ವಪ್ನವು ಸ್ಮರಣೆ ಇದ್ದಂತೆ. ಸ್ಮರಣೆಯು ಪ್ರಮಾರೂಪವಾಗಿರುತ್ತದೆ. ಸ್ವಪ್ನಜ್ಞಾನವು ಭ್ರಮೆಯಾಗಿರುತ್ತದೆ. ಅವಿದ್ಯಾಕಾಮ ಕರ್ಮಗಳಿಂದ ಪರವಶವಾದ ಮನಸ್ಸು ಕನಸಿಗೆ ಕಾರಣವಾದ ಕರ್ಮದ ಪ್ರೇರಣೆಗೆ ಒಳಪಟ್ಟು ಜಾಗ್ರತ್ತಿನಲ್ಲಿರು ವಂತೆಯೇ ಕಥಾಸಂಗತಿಯನ್ನು ವಿಚಿತ್ರವಾಗಿ ಕಲ್ಪಿಸಿ ತೋರಿಸುತ್ತದೆ.

ಬೃಹದಾರಣ್ಯಕದಲ್ಲಿ "**ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾ-ಮುಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರಸ್ವಪಿತಿ**" ಎಂಬ ಮಂತ್ರವಿದೆ (ಬೃ.೪–೩.೯). ಸರ್ವಭೂತ ಭೌತಿಕ ಸಾಮಗ್ರಿಯುಳ್ಳ ಈ ಲೋಕದ ಅಂಶವನ್ನು ತಾನೇ ವಿಭಾಗಿಸಿ ತೆಗೆದು ಕೊಂಡು ತನಗೆ ಬೇಕಾದಂತೆ ತಾನೇ ನಿರ್ಮಿಸಿಕೊಂಡು, **ಸ್ವೇನಭಾಸಾ** = ಅಂತಃಕರಣವೃತ್ತಿಯಾದ ತನ್ನ ಪ್ರಕಾಶದಿಂದ, **ಸ್ವೇನ ಜ್ಯೋತಿಷಾ** = ತನ್ನನ್ನೇ ವಿಷಯೀಕರಿಸಿದ ಆತ್ಮಚೈತನ್ಯದಿಂದ ಪ್ರಕಾಶಪಡಿಸುತ್ತಾ, **ಪ್ರಸ್ವಪಿತಿ** = ಸ್ವಪ್ನವನ್ನು ಕಾಣುತ್ತಿರುವುದು ಎಂದು ಶಬ್ದಾರ್ಥ. ಸ್ವಪ್ನಕಾಲದಲ್ಲಿ ಮನಸ್ಸು ಮಾತ್ರ ಸ್ಪಂದಿಸುತ್ತದೆ. ಜಾಗ್ರತ್ತಿನ ಸಂಸ್ಕಾರವನ್ನು ಪಡೆದು, ಚಿತ್ರಪಟದಂತೆ ಕಾಲ್ಪನಿಕ ವ್ಯಕ್ತಿಚಿತ್ರಗಳನ್ನು ಅಂತಃಕರಣವು ರಚಿಸುತ್ತದೆ. ಚೈತನ್ಯ ಜ್ಯೋತಿಯಿಂದ ಅಂತಃಕರಣಕ್ಕೆ ವಿಷಯಗಳನ್ನು ನೋಡುವ ಸಾಮರ್ಥ್ಯ ಬಂದಿದೆ. ಸ್ವಪ್ನದಲ್ಲಿ ಬಾಹ್ಯ ವಿಷಯವಿಲ್ಲ. ತಾನೇ ವಿಷಯ. ತಾನೇ ಪ್ರಮಾಣ (ಕರಣ). ತಾನೇ ಜ್ಞಾತೃ. ಈ ಶಕ್ತಿ ಅಂತಃಕರಣಕ್ಕೆ ಚೈತನ್ಯಜ್ಯೋತಿಯಿಂದ ಬಂದಿದೆ. ಜ್ಯೋತಿಯು ತೇಜೋರೂಪವಾದದ್ದು. ಆದ್ದರಿಂದ ಕನಸಿನಲ್ಲಿ ಜೀವನು ತೈಜಸನಾಗಿಬಿಡುತ್ತಾನೆ. ಜಾಗ್ರತ್ತಿನಲ್ಲಿ ವಿಶ್ವನಾದವನು ಕನಸಿನಲ್ಲಿ ತೈಜಸ. ಸಮಷ್ಟಿಯಲ್ಲಿ ಈತನು ಹಿರಣ್ಯಗರ್ಭ ಎನ್ನಿಸುತ್ತಾನೆ.

ಅವಿದ್ಯಾಕಾಮಕರ್ಮಗಳಿಂದ ಪ್ರೇರಿತವಾದ ಮನಸ್ಸು ಇಂದ್ರಿಯ ಬಾಹ್ಯವಾದ ವಸ್ತು, ಬೆಳಕು – ಮುಂತಾದ ಸಾಧನಗಳಿಂದ ಅವಿದ್ಯಾಕಲ್ಪಿತಬಾಹ್ಯವಸ್ತುಗಳನ್ನೇ ಅನುಭವಿಸುವಾಗ ಬಹಿಃಪ್ರಜ್ಞವಾಗಿ ಜಾಗರಿತಾವಸ್ಥೆಯಲ್ಲಿರುತ್ತದೆ. ಆ ಕರ್ಮವು ಶಾಂತವಾದಾಗ ಸ್ವಪ್ನಾವಸ್ಥೆಗೆ ತೆರಳುತ್ತದೆ. ಅಲ್ಲಿಯೂ ಆತ್ಮಸಂಬಂಧವನ್ನೈದಿದ ಮನಸ್ಸು ಸಪ್ತಾಂಗವೂ ಏಕೋನವಿಂಶತಿ ಮುಖವೂ ಆಗಿರುತ್ತದೆ. ಆದರೆ ಇದು ಅಂತಃಪ್ರಜ್ಞವಾಗಿರುವುದೇ ವಿಶೇಷ. ಜಗತ್ತಿನಲ್ಲಿ ಬಹಿರ್ವ್ಯಾಪಾರಗಳನ್ನು ಮಾಡುವ ಇಂದ್ರಿಯಗಳಿಂದಲೂ ವಿಭಿನ್ನ ಸಾಧನಗಳಿಂದಲೂ ಪ್ರಜ್ಞೆಯು ಬಹಿರ್ಮುಖವಾಗಿರುತ್ತದೆ. ಸ್ವಪ್ನದಲ್ಲಿ ಇಂದ್ರಿಯಗಳಿದ್ದರೂ ಯಾವ ವ್ಯಾಪಾರವನ್ನು ಮಾಡದೆ ಶಾಂತವಾಗಿರುತ್ತದೆ. ಜಗತ್ತಿನ ವಸ್ತುಗಳಾವುವೂ ಕಾಣದಿದ್ದರೂ ಕಂಡಂತೆ ಕೇಳಿದಂತೆ ತೋರುತ್ತದೆ. ಅದಷ್ಟು ಮನಸ್ಸಿನ ಸ್ಪಂದಿತವೇ ಹೊರತು ಬಾಹ್ಯವಸ್ತುವಿನ ಸಂಬಂಧವಿರುವುದಿಲ್ಲ. ಆಗಿನ ಪ್ರಜ್ಞೆ ಮನಸ್ಸಿನ ಒಳಗೆ ಹುಟ್ಟಿದಂತಾಗುತ್ತದೆ. ಆದ್ದರಿಂದ ಆತ್ಮನು ಅಂತಃಪ್ರಜ್ಞನೆನಿಸುತ್ತಾನೆ. ಚಿತ್ರದಲ್ಲಿ ಮನುಷ್ಯಾದಿಗಳಿಲ್ಲದಿದ್ದರೂ ಇದ್ದಂತೆ ಹೇಗೆ ತೋರುವುದೋ ಹಾಗೆ ಸ್ವಪ್ನದಲ್ಲಿ ಮನುಷ್ಯಾದಿಗಳಿಲ್ಲದಿದ್ದರೂ ಇದ್ದಂತೆ ತೋರುತ್ತದೆ. ಮನಸ್ಸು ಎಲ್ಲವನ್ನೂ ಕಲ್ಪಿಸಿಕೊಳ್ಳುತ್ತದೆ. ಹಾಗೆಯೇ ಜಾಗ್ರತ್ತಿನಲ್ಲಿಯೂ ಮನಸ್ಸು–ಬಾಹ್ಯ ವಸ್ತುಗಳನ್ನು ಅವಿದ್ಯೆಯ ಆಕ್ರಮಣದಿಂದ ಕಲ್ಪಿಸಿಕೊಂಡಿರುತ್ತದೆಯೆಂದು ತಿಳಿಯಬೇಕು.

ಈಗ ಸುಷುಪ್ತಿಸ್ಥಾನಕ್ಕೆ ಬರಬಹುದು. ಜಾಗ್ರತ್, ಸ್ವಪ್ನ, ಸುಷುಪ್ತಿ– ಎಂಬ ಮೂರು ಸ್ಥಾನಗಳಲ್ಲಿಯೂ ಜೀವಾತ್ಮನಿಗೆ ತತ್ತ್ವಜ್ಞಾನವಿರುವುದಿಲ್ಲ. ನಿದ್ರಿಸತಕ್ಕವನು ಯಾವ ಸ್ಥಾನದಲ್ಲಿದ್ದಾಗ ಯಾವ ಅಭಿಮಾನವನ್ನೂ ಇಟ್ಟುಕೊಂಡಿರುವುದಿಲ್ಲವೋ, ಯಾವ ಕನಸನ್ನೂ ಕಾಣುವುದಿಲ್ಲವೋ ಅದಕ್ಕೆ ಸುಷುಪ್ತಿ (ಸುಷುಪ್ತ) ಎಂದು ಹೆಸರು. ಈ ಸುಷುಪ್ತಿಯಲ್ಲಿ ಜಾಗ್ರತ್ ಸ್ವಪ್ನಗಳಲ್ಲಿರುವಂತೆ ಅನ್ಯಥಾಗ್ರಹಣವೂ, ಕಾಮನೆಯ ಸ್ಪರ್ಶವೂ ಇಲ್ಲ. ಆದ್ದರಿಂದ ಈ ತನಿನಿದ್ರೆಯಲ್ಲಿ ಆತ್ಮನು ಸುಷುಪ್ತಸ್ಥಾನನಾಗಿರುತ್ತಾನೆ. ಈತನಿಗೆ ಪ್ರಾಜ್ಞನೆಂದು ಹೆಸರು. ಇವನು ಏಕಾತ್ಮನ ತೃತೀಯಪಾದ. ಸರ್ವ ಜಗತ್ತಿಗೂ ಬೀಜವಾದದ್ದು ಅಜ್ಞಾನ. ಇದು ಆವರಣರೂಪವಾದದ್ದು. ಅದು ಸುಷುಪ್ತಿಯಲ್ಲಿಯೂ ಇದ್ದೇ ಇರುತ್ತದೆ. ಆದರೂ ಸುಷುಪ್ತಿಯಲ್ಲಿ ಅಂತಃಕರಣದ ವಿಕ್ಷೇಪವು ಇರುವುದಿಲ್ಲವಾದ್ದರಿಂದ ದ್ವೈತಜಾತವು ನಷ್ಟವಾಗಿರುತ್ತದೆ. ಜಾಗ್ರತ್ ಸ್ವಪ್ನಗಳಲ್ಲಿ ದ್ವೈತವಿರುತ್ತದೆ. ಅದೆಲ್ಲವೂ ಮನಸ್ಸಿನ ಸ್ಪಂದಿತವೇ ಹೊರತು ವಾಸ್ತವವಲ್ಲ. ಸುಷುಪ್ತಿಯಲ್ಲಿ ಮನಸ್ಸಿನ ಸ್ಪಂದನವಿಲ್ಲವಾದ್ದರಿಂದ ಈ ಪ್ರಾಜ್ಞನು ಏಕೀಭೂತನೋ ಎಂಬಂತೆ ಆಗಿಬಿಡುತ್ತಾನೆ. ಹೇಗೆಂದರೆ, ಹಗಲಿನಲ್ಲಿ ನಾನಾವಿಧವಾದ ವಸ್ತುಗಳು ಗೋಚರಿಸುತ್ತಾ ಇದ್ದರೂ ರಾತ್ರಿ

ಯಾದೊಡನೆ ಕತ್ತಲಿನಲ್ಲಿ ಎಲ್ಲವೂ ಮರೆಯಾಗಿ ಒಂದೇ ಆಗಿಬಿಡುತ್ತವೆ. ಹಾಗೆಯೇ ಸುಷುಪ್ತಿಯಲ್ಲಿ ಯಾವ ವಸ್ತುವೂ ಕಾಣದೆ ಸರ್ವವೂ ಒಂದೇ ಆಗಿಬಿಡುತ್ತದೆ.

ಈ ಅವಸ್ಥೆಯಲ್ಲಿ ಆತ್ಮನು ಪ್ರಜ್ಞಾನಘನನಾಗಿರುತ್ತಾನೆ. ಜಾಗ್ರತ್ತಿನಲ್ಲಿ ಮನಃಸ್ಪಂದನಗಳಾದ ಪ್ರಜ್ಞಾನಗಳು (ವಿವಿಧ ವಸ್ತುಜ್ಞಾನಗಳು) ಸುಷುಪ್ತಿಯಲ್ಲಿ ಚಲಿಸದಿರುವ ಗಟ್ಟಿಯಾದ ಮುದ್ದೆಯೋ ಎಂಬಂತೆ ಘನೀಭೂತವಾಗಿಬಿಡುತ್ತವೆ. ಯಾವ ವಸ್ತುವಿನ ಜ್ಞಾನವೂ ಆಗುವುದಿಲ್ಲ. ರಾತ್ರಿಯಲ್ಲಿ ಕತ್ತಲು ಮುಚ್ಚಿದಾಗ ಯಾವ ವಸ್ತುವಿನ ವಿಭಾಗವೂ ಇಲ್ಲದೆ ಸರ್ವವೂ ಘನವಾದ ಒಂದು ಮುದ್ದೆ ಯೆಂಬಂತೆ ಇರುವುದೋ ಹಾಗೆಯೇ ಸುಷುಪ್ತಿಯಲ್ಲಿ ವಸ್ತುವಿವೇಕವಿಲ್ಲದ್ದರಿಂದ ಪ್ರಜ್ಞಾನಗಳ ಗಟ್ಟಿಯೊಂದೇ ಇರುತ್ತದೆ. ಜ್ಞಾನಕ್ಕೆ ಗೋಚರವಾದ ಯಾವ ವಸ್ತುವೂ ಇರುವುದಿಲ್ಲ.

ಈ ಪ್ರಾಜ್ಞನು ಆನಂದಮಯನು. ಏಕೆಂದರೆ, ಮನಸ್ಸಿಗೆ ವಿಷಯ ವಿಷಯಿ ರೂಪದಿಂದ ಸ್ಪಂದನಗೊಳ್ಳುವ ಆಯಾಸವಿರುವುದಿಲ್ಲ. ಸ್ವಪ್ನ ಜಾಗ್ರತ್ತುಗಳಲ್ಲಿ ಸ್ಪಂದನವಿರುತ್ತದೆ. ಆದ್ದರಿಂದ ಸುಷುಪ್ತಿಯಲ್ಲಿ ಯಾವ ದುಃಖವೂ ಇರುವುದಿಲ್ಲ. ಆನಂದಮಯನೆಂದರೆ ಆನಂದಪ್ರಚುರ, ತುಂಬಿದ ಆನಂದ ಉಳ್ಳವನು ಎಂದರ್ಥ. ಪ್ರಾಚುರ್ಯಾರ್ಥದಲ್ಲಿ ಮಯಟ್ ಪ್ರತ್ಯಯ ಬಂದಿದೆ. ಪ್ರಾಜ್ಞನು ಆನಂದಸ್ವರೂಪನೇ ಅಲ್ಲ, ಏಕೆಂದರೆ, ಇವನು ಅವಿದ್ಯೆಯೆಂಬ ಕಾರಣದಿಂದ ಉಪಹಿತನಾಗಿರುತ್ತಾನೆ. ಹಾಗಲ್ಲದೆ ಪ್ರಾಜ್ಞನು ಆನಂದನೇ ಆಗಿಬಿಟ್ಟರೆ ಅವನು ಮುಕ್ತನಾದನೆಂದು ಅಂಗೀಕರಿಸಬೇಕಾಗುತ್ತದೆ. ಆಗ ಸುಷುಪ್ತಿಯಿಂದ ಎಚ್ಚರ ಗೊಂಡು ಮತ್ತೆ ಸಂಸಾರಕ್ಕೆ ಬರುವ ಸಂಭವವೇ ಇಲ್ಲದೆ ಹೋದೀತು. ಆದ್ದ ರಿಂದಲೇ ಪ್ರಾಜ್ಞನು ಆನಂದಭುಕ್ ಎಂದು ಶ್ರುತಿಯು ಹೇಳಿದೆ. ಈ ಅವಸ್ಥೆಯಲ್ಲಿ ರುವ ಆತ್ಮನಿಗೆ ಆನಂದವು ಶಾಶ್ವತವೂ ಅಲ್ಲ, ಜಾಗ್ರತ್ತಿಗೆ ಬಂದೊಡನೆ ಆನಂದವು ನಷ್ಟವಾಗಿ ಬಿಡುತ್ತದೆ. ಆನಂದಭುಕ್ ಎಂದರೆ ಆನಂದವನ್ನು ಭುಂಜಿಸುವವನು, ಆನಂದವನ್ನು ಅನುಭವಿಸುವವನು ಎಂದರ್ಥ. ಆಗ ಆನಂದವು ಭೋಕ್ತನಿಗಿಂತ ಬೇರೆಯಾಗಿರಲೇಬೇಕು. ಈ ಆನಂದವು ವಿಷಯಭೋಗಜನ್ಯವಾದದ್ದಲ್ಲ. ಪ್ರಾಜ್ಞನು ಸೂಕ್ಷ್ಮವಾದ ಅವಿದ್ಯಾ ವೃತ್ತಿಗಳಿಂದ ಅನಾಯಾಸರೂಪವಾದ ಆನಂದ ವನ್ನು ಅನುಭವಿಸುತ್ತಾನೆ. ಆ ವೃತ್ತಿಗಳು ಸೂಕ್ಷ್ಮವಾದ್ದರಿಂದ ತನಿನಿದ್ರೆಯಲ್ಲಿ ''ನಾನು ಸುಖವನ್ನು ಅನುಭವಿಸುತ್ತಿದ್ದೇನೆ'' ಎಂಬ ಜ್ಞಾನವಿರುವುದಿಲ್ಲ.

ಪ್ರಾಜ್ಞನು ಚೇತೋಮುಖ. ಸ್ವಪ್ನ ಜಾಗರಿತಗಳೆರಡೂ ಪ್ರತಿಬೋಧ ಸ್ವರೂಪದವು. ಸುಷುಪ್ತಿಯಾದೊಡನೆ ಜಾಗ್ರತ್ತಿನ ಕಡೆಗೆ ಅಥವಾ ಸ್ವಪ್ನದ ಕಡೆಗೆ

ಪ್ರಾಜ್ಞನು ಧಾವಿಸುತ್ತಾನೆ. ಆಗ ಚಿತ್ತವು ಕಾರ್ಯಪ್ರವೃತ್ತವಾಗುವುದು. ಆದ್ದರಿಂದ ಪ್ರಾಜ್ಞನು ಚೇತೋಮುಖ. ಒಳ್ಳೆಯದು. ಈತನಿಗೆ ಪ್ರಾಜ್ಞನೆಂದು ಹೆಸರೇಕೆ? ಸುಷುಪ್ತಿಯಲ್ಲಿ ಜ್ಞಾನವೇ ಇರುವುದಿಲ್ಲವಲ್ಲ. ನಿಜ; **'ಪ್ರಜ್ಞಾ ನಿತ್ಯಪ್ರಜ್ಞಪ್ತಿರೂಪಾ ಅಸ್ಯಾಸ್ತೀತಿ ಪ್ರಾಜ್ಞಃ'** ಎಂದು ಈ ಶಬ್ದದ ವ್ಯುತ್ಪತ್ತಿ. **'ಪ್ರಜ್ಞಾ ಶ್ರದ್ಧಾರ್ಚಾಭ್ಯೋಣಃ'** ಎಂಬ ಪಾಣಿನಿ ಸೂತ್ರದಿಂದ **ಣ** ಪ್ರತ್ಯಯ ಬಂದು ಈ ರೂಪವು ಸಿದ್ಧವಾಗಿದೆ. ವಿಶ್ವತೈಜಸರ ಪ್ರಜ್ಞಾನಗಳು ಚಲಸ್ವಭಾವದ ವೆಂದೂ ಘಟಪಟಾದಿ ವಿಷಯಗಳನ್ನು ಗ್ರಹಿಸುತ್ತವೆಯೆಂದೂ ಅನುಭವಸಿದ್ಧವಾಗಿದೆ. ಸುಷುಪ್ತಿಯಲ್ಲಿ ಈ ಪ್ರಾಜ್ಞನು ಯಾವ ವಿಷಯಗಳೂ ತೋರದೆ ಪ್ರಜ್ಞಾನ ಘನಸ್ವರೂಪನಾಗಿರುತ್ತಾನೆಂದೂ ಹಿಂದೆ ಹೇಳಿದೆ. ಹೀಗೆ ಪ್ರಜ್ಞಾನಘನನಾದ್ದರಿಂದ ಈತನಿಗೆ ಪ್ರಾಜ್ಞನೆಂದು ಹೆಸರು.

ಜಗತ್ತಿನಲ್ಲಿ ವಿಶ್ವನಿಗೂ ವಿರಾಟ್‌ಪುರುಷನಿಗೂ ಸ್ವಪ್ನದಲ್ಲಿ ತೈಜಸನಿಗೂ ಹಿರಣ್ಯ ಗರ್ಭನಿಗೂ ಸುಷುಪ್ತಿಯಲ್ಲಿ ಪ್ರಾಜ್ಞನಿಗೂ ಅವ್ಯಾಕೃತನಿಗೂ ಐಕ್ಯವೆಂದು ತಿಳಿಯಬೇಕು.

ಈಗ ಪ್ರಾಜ್ಞನ ಸ್ವರೂಪ ವಿಶೇಷವನ್ನು ಹೇಳಲಾಗುತ್ತದೆ. **ಏಷ ಸರ್ವೇಶ್ವರಃ ಏಷ ಸರ್ವಜ್ಞಃ ಏಷೋಽಂತರ್ಯಾಮೀ ಏಷಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥ ಉಪನಿಷತ್ತು ॥** ಈ ಪ್ರಾಜ್ಞನು ಸರ್ವೇಶ್ವರನಾಗಿದ್ದಾನೆ. ಪ್ರಾಜ್ಞನು ಪ್ರಕೃತದಲ್ಲಿ ಅವಿದ್ಯಾಲೇಶವುಳ್ಳವನಾದರೂ, ವಸ್ತುತಃ ಅವಿದ್ಯಾಸಂಬಂಧವೇ ಅವನಿಗಿಲ್ಲವಾದ್ದರಿಂದ ಸ್ವರೂಪಾವಸ್ಥೆಯಲ್ಲಿ ಪರಮಾತ್ಮನೇ ಆಗಿರುವುದರಿಂದ ಸರ್ವೇಶ್ವರನಾಗಿದ್ದಾನೆ.

ವಿಶಾಲವಾದ ಈ ಜಗತ್ತು, ನಾನಾ ಬಗೆಯ ಪಶು, ಪಕ್ಷಿ ಮುಂತಾದವೂ ಅವಿದ್ಯೆಯಿಂದ ಕಾಣತಕ್ಕವು. ವ್ಯಾವಹಾರಿಕವಾಗಿ ಇವೆಲ್ಲವೂ ಸತ್ಯವಾದವು. ಈ ವ್ಯಾವಹಾರಿಕ ದೃಷ್ಟಿಯುಳ್ಳ ದ್ವೈತದರ್ಶಿಗಳಿಗೆ ಪೂರ್ವೋಕ್ತನಾದ ತುರೀಯನು ಸರ್ವೇಶ್ವರ, ಸರ್ವಜ್ಞ, ಅಂತರ್ಯಾಮಿ, ಸಕಲ ಭೂತಗಳ ಜನಕ, ಲಯಕರ್ತನೂ ಆಗಿದ್ದಾನೆಂದು ಉಪನಿಷತ್ತು ವರ್ಣಿಸಿದೆ.

ಇದುವರೆಗೆ ಆತ್ಮನ ಮೂರು ಪಾದಗಳನ್ನು ವಿವರಿಸಲಾಯಿತು. ಈಗ ಚತುರ್ಥ ಪಾದವನ್ನು ಪ್ರತಿಪಾದಿಸಬೇಕಾಗಿದೆ. ಈ ಚತುರ್ಥಪಾದವು ಹೀಗಿದೆ ಎಂದು ಹೇಳದೆ ಹೀಗಿಲ್ಲ ಎಂದು ನಿಷೇಧಮುಖದಿಂದ ಉಪನಿಷತ್ತು ವರ್ಣಿಸಿದೆ. ಮೊದಲು ವಿಶ್ವ, ತೈಜಸ, ಪ್ರಾಜ್ಞರನ್ನು ವರ್ಣಿಸುವಾಗ ನಿರಂಜನನಾದ ಪರಮಾತ್ಮನಲ್ಲಿ **'ಏಕೋನವಿಂಶತಿ ಮುಖಃ'** ಇತ್ಯಾದಿ ಧರ್ಮಗಳನ್ನು ಆರೋಪಿಸಿ ವರ್ಣಿಸ ಲಾಗಿದೆ. ಅದೆಲ್ಲವೂ ಜೀವಾವಸ್ಥೆಯಲ್ಲಿ ಆರೋಪಿತ, ವಸ್ತುತಃ ಅದಾವ

ಧರ್ಮವೂ ಪರಮಾತ್ಮನಲ್ಲಿಲ್ಲ ಎಂದು ಸ್ಪಷ್ಟವಾಗಿ ತಿಳಿಸುವುದಕ್ಕಾಗಿ ನಿಷೇಧ ಮುಖದಿಂದ ಈಗ ವರ್ಣಿಸಲಾಗುತ್ತದೆ. **'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ'** ಎಂಬ ನ್ಯಾಯವನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ಹಿತ್ತಾಳೆ ಪಾತ್ರೆಗೆ ಹುಣಿಸೆಹುಳಿಯನ್ನು ಹಚ್ಚಿ ಅದರ ಮೇಲೆ ಸೀಗೆಪುಡಿ ಮಣ್ಣನ್ನು ಉದುರಿಸುವುದು ಅಧ್ಯಾರೋಪ. ಅನಂತರ ಹಿತ್ತಾಳೆ ಪಾತ್ರೆಯನ್ನು ತೆಂಗಿನ ಜುಂಗಿನಿಂದ ಉಜ್ಜಿ ತೊಳೆಯುವುದು ಅಪವಾದ. ಹೀಗೆ ಉಜ್ಜಿ ತೊಳೆದರೆ ಪಾತ್ರೆಯು ಸ್ವಚ್ಛವಾಗಿ ತನ್ನ ನಿಜಸ್ವರೂಪವನ್ನು ತೋರಿಸುವುದು. ಅಂತೆಯೇ ಮೂರು ಪಾದಗಳನ್ನು ವಿಧಿಮುಖದಿಂದ ವರ್ಣಿಸಿ ಈಗ ಚತುರ್ಥಪಾದವನ್ನು ನಿಷೇಧ ಮುಖದಿಂದ ವರ್ಣಿಸಲಾಗುವುದು. ವಸ್ತು ಒಂದೇ ಎಂಬುದನ್ನು ನೆನಪಿನಲ್ಲಿಡಬೇಕು.

ಪಾದತ್ರಯವನ್ನು ವಿಧಿಮುಖದಿಂದ ವರ್ಣಿಸಿದಂತೆ ಚತುರ್ಥಪಾದವನ್ನೂ ವಿಧಿಮುಖದಿಂದ ಏಕೆ ವರ್ಣಿಸಿಲ್ಲ ಎಂಬ ಪ್ರಶ್ನೆ ಹುಟ್ಟಬಹುದು. ಇದಕ್ಕೆ ಉತ್ತರವೇನೆಂದರೆ, ಮೊದಲಿನ ಮೂರು ಪಾದಗಳು ಜ್ಞೇಯವಸ್ತುವಿಗೆ ಸಾಧನಗಳೆಂದೂ, ಈ ನಾಲ್ಕನೆಯ ಪಾದವು ಜ್ಞೇಯ ವಸ್ತುವೆಂದೂ ಸಾಧನವಲ್ಲವೆಂದೂ ಆರಂಭದಲ್ಲಿಯೇ ಹೇಳಿದ್ದೇವೆ. ಅಲ್ಲದೆ **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** ಎಂಬ ಶ್ರುತಿವಾಕ್ಯದಂತೆ ಈ ಜ್ಞೇಯವಸ್ತುವನ್ನು ಯಾವ ಶಬ್ದವೂ ವರ್ಣಿಸಲಾರದು. ಎಲ್ಲ ಶಬ್ದಗಳೂ ಜಾತಿ, ಗುಣ, ಕ್ರಿಯೆಗಳೆಂಬ ಪ್ರವೃತ್ತಿನಿಮಿತ್ತಗಳ ಮೂಲಕವೇ ಪದಾರ್ಥವನ್ನು ವರ್ಣಿಸುತ್ತದೆ. ಪರಬ್ರಹ್ಮ ವಸ್ತುವಿನಲ್ಲಿ ಯಾವ ಪ್ರವೃತ್ತಿನಿಮಿತ್ತವೂ ಇಲ್ಲ. ಆದ್ದರಿಂದ ಯಾವ ಶಬ್ದವೂ ಈ ಪರಬ್ರಹ್ಮವನ್ನು ವರ್ಣಿಸಲಾರದು. ಈ ಚತುರ್ಥಪಾದವು ಶಬ್ದದಿಂದ ವಾಚ್ಯವೇ ಆಗುವುದಿಲ್ಲ. ಅದು ಹೀಗಿದೆ ಎಂದು ನಾವು ಹೇಳಲಾರೆವು. ಹೀಗಿಲ್ಲ ಎಂದು ಮಾತ್ರ ಹೇಳಲು ಸಾಧ್ಯ! ನಿಷೇಧ ಮುಖದಿಂದಲೇ ಆ ಸದ್ವಸ್ತುವನ್ನು ಪರಿಚಯಮಾಡಿಸಬೇಕಾಗಿದೆ. ಹಾಗಾದರೆ ಅಂತಹ ವಸ್ತುವೇ ಇಲ್ಲ, ಅದು ಶೂನ್ಯವೇ ಸರಿ ಎಂದೇಕೆ ಹೇಳಬಾರದು? ಹಾಗಲ್ಲ; ನಾವು ನೋಡುವ ಘಟಪಟಾದಿ ವಸ್ತುಗಳು ಕಲ್ಪಿತವಾದವು ಎಂಬುದು ಸಿದ್ಧಾಂತ. ಕಲ್ಪನೆಗೆ ಆಧಾರವಾಗಿ ಒಂದು ಸದ್ವಸ್ತು ಇರಲೇಬೇಕು. ಕಪ್ಪೆಚಿಪ್ಪು, ಹಗ್ಗ, ಕಂಭ, ಮರಳುಭೂಮಿ ಇಂತಹ ಆಧಾರಭೂತವಸ್ತುಗಳ ಮೇಲೆಯೇ ಮುತ್ತು, ಸರ್ಪ, ಮನುಷ್ಯ, ನೀರು ಇವುಗಳನ್ನು ಭ್ರಾಂತಿಯಿಂದ ಕಲ್ಪಿಸಿಕೊಳ್ಳುತ್ತೇವೆ. ನಿರಾಧಾರವಾಗಿ ಯಾವುದನ್ನೂ ಯಾರೂ ಭ್ರಾಂತಿಯಿಂದ ಕಲ್ಪಿಸಿಕೊಳ್ಳುವುದಿಲ್ಲ. ಹಾಗೆಯೇ ಘಟಪಟಾದಿ ಪ್ರಪಂಚಕ್ಕೆ ಆಧಾರಭೂತವಾದ ಒಂದು ಸದ್ವಸ್ತುವಿರಬೇಕು. ಅದು ಶೂನ್ಯವಲ್ಲ, ಅವಸ್ಥಾತ್ರಯವೂ ಇಲ್ಲದ ಆತ್ಮವಸ್ತು. **ನಾಂತಃಪ್ರಜ್ಞಂ** = ಸ್ವಪ್ನದಲ್ಲಿರುವಂತೆ ಸಂಸ್ಕಾರವಶದಿಂದ ಮಾನವ

ವಿಲಾಸ ಉಳ್ಳದ್ದಲ್ಲ, **ನ ಬಹಿಃಪ್ರಜ್ಞಂ** = ವೈಶ್ವಾನರನಂತೆ ಇಂದ್ರಿಯಗಳ ಮೂಲಕ ಬಾಹ್ಯವಸ್ತುಗಳ ಜ್ಞಾನವನ್ನು ಪಡೆದದ್ದೂ ಅಲ್ಲ. **ನೋಭಯತಃಪ್ರಜ್ಞಂ** = ಆದ್ದರಿಂದಲೇ ಅಂತಃಪ್ರಜ್ಞ ಬಹಿಃಪ್ರಜ್ಞಗಳೆರಡೂ ಏಕಕಾಲದಲ್ಲಿ ಆಗಿಲ್ಲ. **ನ ಪ್ರಜ್ಞಾನ ಘನಂ** = ಅನ್ಯವಸ್ತು ಜ್ಞಾನವಿಲ್ಲದ ಪ್ರಜ್ಞಾನಗಳ ರಾಶಿಯೂ ಅಲ್ಲ. **ನಪ್ರಜ್ಞಂ** = ಬಾಹ್ಯ ವಸ್ತುಜ್ಞಾನವಿಲ್ಲದ್ದೂ ಅಲ್ಲ. **ನಾಪ್ರಜ್ಞಂ** = ಜ್ಞಾನಾಭಾವ ರೂಪವೂ ಅಲ್ಲ. **ಅದೃಷ್ಟಂ** = ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಾದ್ದಲ್ಲ. **ಅವ್ಯವಹಾರ್ಯಂ** = ಸಂಭಾಷಣ, ಸ್ವೀಕಾರಾದಿ ವ್ಯವಹಾರ ಶೂನ್ಯ. **ಅಗ್ರಾಹ್ಯಂ** = ಕರ್ಮೇಂದ್ರಿಯಗಳಿಂದ ಗ್ರಹಣಕ್ಕೆ ಶಕ್ಯವಿಲ್ಲದ್ದು. **ಅಲಕ್ಷಣಂ** = ಗಂಧವತ್ವಂ ಪೃಥಿವ್ಯಾ ಲಕ್ಷಣಂ ಎಂಬಂತೆ ಯಾವ ಲಕ್ಷಣವನ್ನೂ ಹೇಳಲು ಶಕ್ಯವಲ್ಲದ್ದು. **ಅಚಿಂತ್ಯಂ** = ಅಂತಃಕರಣವೃತ್ತಿಗೆ ಗೋಚರವಲ್ಲದ್ದು. ಅವ್ಯಪದೇಶ್ಯಂ = ಪೃಥಿವೀ, ವಾಯು ಎಂಬಂತೆ ಯಾವ ಹೆಸರಿನಿಂದ ಹೇಳಲೂ ಶಕ್ಯವಲ್ಲದ್ದು. **ಏಕಾತ್ಮ ಪ್ರತ್ಯಯಸಾರಂ = ''ಸರ್ವಾದ್ವೈತ ಪ್ರತ್ಯಯಃ ಸಾರಭೂತಃ ಅವಗತಿ ಹೇತುತ್ವೇನ ಯಸ್ಮಿನ್ ತದೇಕಾತ್ಮ ಪ್ರತ್ಯಯ ಸಾರಂ''**. ಸರ್ವವೂ ಅದ್ವೈತವೇ, ದ್ವೈತವೆಂಬುದೇ ಇಲ್ಲ ಎಂದು ನಿಶ್ಚಯಿಸಿದಾಗ ಗೋಚರವಾಗತಕ್ಕದ್ದು. **ಶಿವಂ** = ಸ್ವಯಂಪ್ರಕಾಶವಾಗಿ, ಆನಂದಸ್ವರೂಪವಾಗಿರುವುದರಿಂದ ಮಂಗಳವಾದದ್ದು. **ಅದ್ವೈತಂ** = ಆನಂದ ವ್ಯತಿರಿಕ್ತವಲ್ಲದ್ದು. ಸರ್ವ ದ್ವೈತ ಕಲ್ಪನೆಗಳಿಗೂ ಅಧಿಷ್ಠಾನವಾದ ಅದ್ವಿತೀಯ. **ಚತುರ್ಥಂ** = ಸಂಖ್ಯಾಶೂನ್ಯವಾದದ್ದಾದರೂ ವಿಶ್ವ, ತೈಜಸ, ಪ್ರಾಜ್ಞ– ಇವರ ಅಪೇಕ್ಷೆಯಿಂದ ನಾಲ್ಕನೆಯದಾದದ್ದು. ಈ ತುರೀಯನು ಆತ್ಮ, ಇವನನ್ನು ತಿಳಿಯಬೇಕು. ಆತ್ಮ–ಓಂಕಾರಗಳಿಗೆ ಇಲ್ಲಿ ಅಭೇದವನ್ನು ಸ್ಪಷ್ಟವಾಗಿ ಉಪನಿಷತ್ತು ಹೇಳಿದೆ.

ಓಂಕಾರಕ್ಕೆ ಅಭಿಧೇಯನಾದವನು ಆತ್ಮ. ಈ ಆತ್ಮನು ಚತುಷ್ಪಾತ್ ಎಂಬುದನ್ನು ಹೇಳಿದ್ದಾಯಿತು. ಓಂಕಾರದ ಅಕ್ಷರಗಳನ್ನು ಪ್ರಧಾನವಾಗಿಟ್ಟುಕೊಂಡಾಗ ಅಭಿಧಾನವು ಪ್ರಧಾನವಾಗುತ್ತದೆ. ಆತ್ಮನನ್ನು ಹೇಳುವ ಈ ಅಭಿಧಾನವೇ ಓಂಕಾರ. ಈ ಓಂಕಾರವು ಅ ಉ ಮ್ – ಎಂಬ ಮೂರು ವರ್ಣಗಳಿಂದ ಘಟಿತವಾಗಿದೆ. ಇವುಗಳಲ್ಲಿ ಜಾಗರಿತ ಸ್ಥಾನವಾದ ವಿಶ್ವನೇ ಅಕಾರ. ವಿಶ್ವನು ಸರ್ವ ಜಗತ್ತನ್ನು ವ್ಯಾಪಿಸಿರುವಂತೆ ಅಕಾರವು ಸರ್ವ ವಾಕ್ಕುಗಳನ್ನೂ ವ್ಯಾಪಿಸಿದೆ. **''ಅಕಾರೋ ವೈ ಸರ್ವಾ ವಾಕ್''** ಎಂದು ಶ್ರುತಿವಾಕ್ಯವುಂಟು. ಪ್ರಾಯೇಣ ವಾಙ್ಮಯದಲ್ಲಿ ಅಕಾರದ ಪ್ರಯೋಗವೇ ಅಧಿಕವಾಗಿರುವುದರಿಂದ ಹೀಗೆ ಹೇಳಿರಬಹುದು. ಇದನ್ನರಿತವನು ಸಕಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ. ಸ್ವಪ್ನಸ್ಥಾನನಾದ ತೈಜಸನು ದ್ವಿತೀಯ ಮಾತ್ರೆಯಾದ

ಉಕಾರ. ಅಕಾರದ ಮುಂದೆ ಅಕ್ಷರಮಾಲೆಯಲ್ಲಿಯೂ ಮತ್ತು ಓಂಕಾರದಲ್ಲಿಯೂ ಮುಂದೆ ಉಕಾರವಿರುವುದರಿಂದ ಅದಕ್ಕೆ ಅಕಾರಕ್ಕಿಂತ ಉತ್ಕರ್ಷವಿದೆ ಎನ್ನಬಹುದು. ಅಲ್ಲದೆ, ಉಕಾರವು ಅಕಾರ ಮತ್ತು ಮಕಾರದ ಮಧ್ಯದಲ್ಲಿ ವಿರಾಜಿಸಿರುವುದರಿಂದ ಉತ್ಕರ್ಷವನ್ನು ಹೇಳಬಹುದು. ಹಾಗೆಯೇ ತೈಜಸನು ಮಧ್ಯಸ್ಥನಾದ್ದರಿಂದ ಅಭಿಧಾನದಲ್ಲಿ ಉಕಾರವು ತೈಜಸ. ಅವನೇ ದ್ವಿತೀಯ ಮಾತ್ರೆ. ಇದನ್ನರಿತವನ ವಂಶದಲ್ಲಿ ಬ್ರಹ್ಮವಿಲ್ಲದವನು ಹುಟ್ಟುವುದಿಲ್ಲ! ಇನ್ನು ಮಕಾರವೇ ಸುಷುಪ್ತಸ್ಥಾನ ವಾದ ಪ್ರಾಜ್ಞನೆಂದೂ ತೃತೀಯ ಮಾತ್ರೆಯೆಂದೂ ತಿಳಿಯಬೇಕು. ಮಕಾರವು ಅರ್ಧಮಾತ್ರೆ. ಅಂತಃಕರಣಾದಿ ಸಂಬಂಧವಿಲ್ಲ ದಿದ್ದರೂ ಪ್ರಾಜ್ಞನನ್ನು ಪಾದವೆಂದು ಗಣಿಸಲಾಗಿದೆ. ಅಭಿಧೇಯನಾದ ಆತ್ಮನಲ್ಲಿ ಪಾದತ್ರಯ ವೈಲಕ್ಷಣ್ಯವಿದ್ದು ಪಾದವೆಂದರೆ ಜ್ಞೇಯ ಎಂಬ ಅತಿರಿಕ್ತತೆ ಇದೆ ಯೆಂದೂ ಅದು ನಾದಸ್ವರೂಪವೆಂದೂ, ಅವಾಚ್ಯವೂ ಅವ್ಯವಹಾರ್ಯವೂ ಆಗಿರು ತ್ತದೆ ಎಂದೂ ತಿಳಿಯಬೇಕು. ಅಭಿಧಾನದಲ್ಲಿ ಮಾತ್ರೆಯೆನಿಸಿದ್ದೇ ಅಭಿಧೇಯದಲ್ಲಿ ಪಾದ ವೆನಿಸಿದೆ. ಆದ್ದರಿಂದ ಉಪನಿಷತ್ತು **'ಅಮಾತ್ರಶ್ಚತುರ್ಥೋಽವ್ಯವಹಾರ್ಯಃ''** ಎಂದು ಹೇಳಿದೆ. ಎಂಟನೆಯ ಮಂತ್ರದಲ್ಲಿ **''ಪಾದಾಮಾತ್ರಾ ಮಾತ್ರಾಶ್ಚಪಾದಾಃ''** ಎಂದೂ ಹೇಳಿದೆ. **''ಏವಮೋಂಕಾರ ಆತ್ಮೈವ''** ಎಂದು ಓಂಕಾರಕ್ಕೆ ಆತ್ಮಸ್ವರೂಪವನ್ನು ತಿಳಿಸಿದೆ. ಆದ್ದರಿಂದ ವೈಯಾಕರಣರು ಹೇಳುವ ಶಬ್ದಾದ್ವೈತವಾದಕ್ಕೂ ಇಲ್ಲಿ ಪುಷ್ಟಿ ದೊರಕಿದಂತಾಗಿದೆ. ಅರ್ಧಮಾತ್ರೆಯಾದ ಮಕಾರವು ಅ–ಉಗಳನ್ನು ತನ್ನಲ್ಲಿ ಸೇರಿಸಿಕೊಂಡು ಅನುಸ್ವಾರವೆಂಬ ಬಿಂದುವಾಗಿ ನಾದದೊಡನೆ ಸೇರಿ ಹೋಗುತ್ತದೆ. ಹಾಗೆಯೇ ವಿಶ್ವ ತೈಜಸರೊಡನೆ ಪ್ರಾಜ್ಞನು ಒಂದಾಗಿ ತನ್ನ ಸ್ವರೂಪವನ್ನೂ ಲಯಗೊಳಿಸಿ ಪರಬ್ರಹ್ಮನೊಡನೆ ಸೇರಿಹೋಗುತ್ತಾನೆ.

ಇಲ್ಲಿಗೆ ಮಾಂಡೂಕ್ಯೋಪನಿಷತ್ತಿನ ಮೂಲದ ವ್ಯಾಖ್ಯಾನ ಮುಗಿಯಿತು.

ಇನ್ನು ಮುಂದೆ ಶ್ರೀ ಗೌಡಪಾದಕಾರಿಕೆಗಳಿಗೆ ಪದಶಃ ಅರ್ಥವನ್ನು ಬರೆದು ವಿವರಿಸಲಾಗುವುದು. ಸುಲಭವಾದ ಕಾರಿಕೆಗಳಿಗೆ ಪದಶಃ ಅರ್ಥವನ್ನು ಬರೆಯುವುದಿಲ್ಲ.



॥ ಶ್ರೀಃ ॥

ಶಂಕರಭಗವತ್ಪಾದಪ್ರಣತಃ ಶ್ರೀಗೌಡಪಾದಗುರುರಾಜಃ ।
ಕೃಪಯಾ ಚೇತಃಶುದ್ಧಿಂ ವಿಧಾಯ ಮೇ ಧಿಯಃ ಪ್ರಚೋದಯತು ॥

# ಆಗಮ ಪ್ರಕರಣ – ೧

**ಬಹಿಷ್ಪ್ರಜ್ಞೋ ವಿಭುರ್ವಿಶ್ವೋ ಹ್ಯಂತಃ ಪ್ರಜ್ಞಸ್ತು ತೈಜಸಃ ।**
**ಘನಪ್ರಜ್ಞಸ್ತಥಾ ಪ್ರಾಣಃ ಏಕ ಏವ ತ್ರಿಧಾ ಸ್ಮೃತಃ ॥೧॥**

ಇಲ್ಲಿರುವ ಪದಗಳ ಅರ್ಥವನ್ನು ಹಿಂದೆ ಹೇಳಿದ್ದಾಗಿದೆ. ಕಾರಿಕೆಯ ತಾತ್ಪರ್ಯವನ್ನೀಗ ಹೇಳಬೇಕಾಗಿದೆ. ಜಾಗ್ರತ್ತಿನಲ್ಲಿರುವ ವಿಶ್ವನು ಆಧಿದೈವಿಕವಾದ ವಿರಾಡ್ರೂಪನೇ ಆದ್ದರಿಂದ ಅವನು ವಿಭುವೆಂದು ತಿಳಿಯಬೇಕು. ಸ್ವಪ್ನಾವಸ್ಥೆಯಲ್ಲಿರುವ ತೈಜಸನು ಹಿರಣ್ಯಗರ್ಭಸ್ವರೂಪನಾಗಿ ತಾನೂ ವಿಭುವಾಗಿದ್ದಾನೆ. ಸುಷುಪ್ತಿಯಲ್ಲಿರುವ ಘನಪ್ರಾಜ್ಞನಾದ ಆತ್ಮನು ಅವ್ಯಾಕೃತ (ಈಶ್ವರ) ಸ್ವರೂಪನಾಗಿದ್ದಾನೆ. ಆದರೆ ಇವರು ಬೇರೆ ಬೇರೆ ಆತ್ಮರೆಂದು ತಿಳಿಯಬಾರದು. ಒಬ್ಬ ಆತ್ಮನೇ ಪರ್ಯಾಯದಿಂದ ಮೂರು ಹೆಸರುಗಳನ್ನು ಪಡೆದಿದ್ದಾನೆ. ಜಾಗ್ರತ್ತಿನಲ್ಲಿದ್ದಾಗ ಸ್ವಪ್ನಸ್ಥಾನದಲ್ಲಿದ್ದವನೇ ನಾನು, ಸುಷುಪ್ತಿಸ್ಥಾನದಲ್ಲಿದ್ದವನೇ ನಾನು ಎಂಬ ಪ್ರತಿಸಂಧಾನ ಬರುವುದರಿಂದ ಈ ಮೂರು ಸ್ಥಾನಗಳೂ ಕಲ್ಪಿತವಾದವೆಂದು ಗೊತ್ತಾಗುತ್ತದೆ. ಈ ಆತ್ಮನು ಒಬ್ಬನೇ ಎಂಬುದೂ ದೇಹ ಮನಸ್ಸು ಮುಂತಾದವುಗಳ ಸಂಬಂಧವಿಲ್ಲದೇ ಇರುವ ಶುದ್ಧನೆಂಬುದೂ ಆದ್ದರಿಂದಲೇ ಅಸಂಗನೆಂಬುದೂ ತಿಳಿದು ಬರುತ್ತದೆ.

ಅಲ್ಲದೆ ಜಾಗರಿತಾದಿ ಸ್ಥಾನತ್ರಯವು ಈ ಆತ್ಮನಿಗೆ ಸ್ವಾಭಾವಿಕವಲ್ಲ. ಸ್ವಾಭಾವಿಕವಾಗಿದ್ದರೆ ಏಕಕಾಲದಲ್ಲಿ ಮೂರು ಅವಸ್ಥೆಗಳೂ ಕಾಣಿಸಬೇಕಾಗಿತ್ತು. ಪರ್ಯಾಯವಾಗಿ ಒಂದಾದಮೇಲೊಂದರಂತೆ ಇವು ಬರುವುದರಿಂದ ಸ್ಥಾನತ್ರಯಕ್ಕೆ ಆತ್ಮನು ಅತಿರಿಕ್ತನಾದವನು. ಇವು ಮೂರೂ ಈತನಿಗೆ ಇಲ್ಲ ಎಂದು ಊಹಿಸಬಹುದು. ಇದಕ್ಕೆ ದೃಷ್ಟಾಂತವಾಗಿ ಮಹಾಮತ್ಸ್ಯದ ಸಂಚಾರವನ್ನು ಬೃಹದಾರಣ್ಯಕ ಶ್ರುತಿಯು ಉದಾಹರಿಸಿದೆ –

**''ತದ್ಯಥಾ ಮಹಾಮತ್ಸ್ಯ ಉಭೇ ಕೂಲೇ ಅನುಸಂಚರತಿ ಪೂರ್ವಂ ಚ ಪರಂ ಚ''** ಇತ್ಯಾದಿ (ಬೃಹ. ೪–೩–೧೮). ಒಂದು ಮಹಾಮತ್ಸ್ಯವು ದೊಡ್ಡ ನದಿಯಲ್ಲಿ ಆಚೆಯ ದಡ–ಈಚೆಯ ದಡಗಳೆರಡನ್ನೂ ಕ್ರಮವಾಗಿ ಮುಟ್ಟಿ ಸಂಚರಿಸುತ್ತದೆ. ಹಾಗೆ ಆತ್ಮನು ಮೂರು ಅವಸ್ಥೆಗಳಿಗೂ ಹೋಗುತ್ತ ಸಂಚರಿಸು

ವವನು ಎಂದರ್ಥ. ಮಹಾಮತ್ಸ್ಯವು ಎರಡು ದಡಗಳನ್ನು ತಾಕುತ್ತದೆ. ಆದರೆ ದಡದ ಸಂಬಂಧ ಅದಕ್ಕಿಲ್ಲ. ದಡವನ್ನು ತಾಕಿಕೊಂಡೇ ಇರುವುದಿಲ್ಲ. ಆದ್ದರಿಂದಲೇ ಅದು ತೀರದ್ವಯಕ್ಕಿಂತ ಬೇರೆ. ಸಮಷ್ಟಿ ಸ್ಥೂಲಾಭಿಮಾನಿಯಾದ ವಿರಾಡಾತ್ಮನನ್ನು ಭಾಷ್ಯದಲ್ಲಿ ಹಿರಣ್ಯಗರ್ಭನೆಂದು ಹೇಳಿದ್ದಾರೆ. ಸ್ಥಾನಭೇದವೇ ಹೊರತು ವಾಸ್ತವವಾಗಿ ಅವರಿಬ್ಬರಿಗೆ ಭೇದವಿಲ್ಲದ್ದರಿಂದ ಹೀಗೆ ಹೇಳಿದ್ದಾರೆಂದು ತಿಳಿಯಬೇಕು. ಆದಿತ್ಯಮಂಡಲದಲ್ಲಿರುವ ವಿರಾಡಾತ್ಮನಿಗೂ (ಹಿರಣ್ಯಗರ್ಭ) ದೇಹಸ್ವಾಮಿಯಾದ ಆತ್ಮನಿಗೂ ಭೇದವಿಲ್ಲ. ಭೇದಪ್ರತೀತಿಯು ಕೇವಲ ಉಪಾಧಿ ಭೇದದಿಂದಲೇ ಸರಿ. **'ಏಕೋ ದೇವಃ ಸರ್ವಭೂತೇಷು ಗೂಢಃ'** (ಶ್ವೇತಾ. ೬–11) ಎಂದು ಶ್ರುತಿ ಇದೆ. ಭಗವದ್ಗೀತೆಯೂ ಸಹ **'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ'** (1೩–೨) ಎಂದು ಹೇಳಿದೆ. ಜಾಗ್ರತ್ತಿನಲ್ಲಿ ಕಂಡದ್ದನ್ನು ಸ್ವಪ್ನದಲ್ಲಿ ಸ್ಮರಿಸಿಕೊಳ್ಳುವುದರಿಂದ ಜಾಗ್ರತ್ತಿನ ಆತ್ಮನೇ ಸ್ವಪ್ನ ದಲ್ಲಿರುತ್ತಾನೆಂದು ಸಿದ್ಧವಾಗುವುದರಿಂದ ವಿಶ್ವನೇ ತೈಜಸನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ **'ಮನಸ್ಯಂತಸ್ತು ತೈಜಸಃ'** ಎನ್ನುವುದು ಯುಕ್ತವಾಗಿದೆ.

**'ಆಕಾಶೇ ಚ ಹೃದಿ ಪ್ರಾಣಃ'** ಜಾಗ್ರತ್ತಿನಲ್ಲಿ ದೇಹಾಭಿಮಾನಿಯಾಗಿಯೂ ಸ್ವಪ್ನದಲ್ಲಿ ಮನೋಭಿಮಾನಿಯಾಗಿಯೂ ಇರುವ ಆತ್ಮನಿಗೆ ಸುಷುಪ್ತಿಯಲ್ಲಿ ಹೃದಯವೇ ಸ್ಥಾನವಾಗಿರುತ್ತದೆ. ದರ್ಶನಸ್ಮರಣಗಳೆರಡೂ ಇಲ್ಲದಾಗ ಆತ್ಮನು ಹೃದಯದಲ್ಲಿ ಪ್ರಾಣರೂಪನಾಗಿರುತ್ತಾನೆ. ವಿಶ್ವನೇ ಸ್ವಪ್ನದಲ್ಲಿ ತೈಜಸನಾಗಿ, ಸುಷುಪ್ತಿಯಲ್ಲಿ ಸ್ಮರಣ ವ್ಯಾಪಾರವೂ ಅಡಗಿದ ಮೇಲೆ ಹೃದಯಾವಚ್ಛಿನ್ನವಾದ ಆಕಾಶದಲ್ಲಿ ಪ್ರಾಣನೆನಿಸಿಕೊಂಡು ಘನಪ್ರಜ್ಞನಾಗುತ್ತಾನೆ. ಆಗ ವಿಷಯ–ವಿಷಯಿ ಯೆಂಬ ಭೇದವಿರುವುದಿಲ್ಲ. ಇದು ಆತ್ಮನ ಅವ್ಯಾಕೃತಸ್ವರೂಪ. ನನ್ನ ಪ್ರಾಣ – ಎಂಬ ಅಭಿಮಾನವಿರುವಾಗ ಪ್ರಾಣವು ದೇಹಪರಿಚ್ಛಿನ್ನವಾದ್ದರಿಂದ ವ್ಯಾಕೃತವೇ ಆಗಿರುತ್ತದೆ. ವ್ಯಾಕೃತವಾದ ಪ್ರಾಣಕ್ಕೂ ಅವ್ಯಾಕೃತನಾದ ಆತ್ಮನಿಗೂ ಅಭೇದವು ಸಂಗತವಾಗುವುದಿಲ್ಲವೆಂಬ ಶಂಕೆ ಹುಟ್ಟಬಹುದು. ಅದಕ್ಕೆ ಸಮಾಧಾನ ವೇನೆಂದರೆ, ಸುಷುಪ್ತಾವಸ್ಥೆಯಲ್ಲಿ 'ಪ್ರಾಣವು ನನ್ನದು' ಎಂಬ ಅಭಿಮಾನ ವಿರುವುದಿಲ್ಲವಾದ್ದರಿಂದ ಆಗ ಪ್ರಾಣವು ಅವ್ಯಾಕೃತವೇ ಆಗಿರುತ್ತದೆಯೆಂಬುದು ಸಮಾಧಾನ. ಅವ್ಯಾಕೃತ ಬ್ರಹ್ಮವೇ ಪ್ರಾಣ. ಪ್ರಕೃತದಲ್ಲಿ ಅದೇ ಪ್ರಾಜ್ಞ ಎಂದು ಭಾಷ್ಯದಲ್ಲಿ ವಿಸ್ತಾರವಾಗಿ ವಿವೇಚಿಸಿ ನಿರ್ಣಯಿಸಿದ್ದಾರೆ. ಆದ್ದರಿಂದ ಅಸಂಗ, ತೀರದ ಲೇಪ ವಿಲ್ಲದ್ದರಿಂದ ಶುದ್ಧ. ಹಾಗೆಯೇ ಪುರುಷನು ಸ್ವಪ್ನಜಾಗರಿತಗಳಿಗೆ ಹೋದರೂ ಅವುಗಳ ಸಂಬಂಧವಿಲ್ಲದವನು. ಹೀಗೆಯೇ ಬೃಹದಾರಣ್ಯಕವು ಗಿಡಗ, ಗರುಡ ಪಕ್ಷಿಗಳ ದೃಷ್ಟಾಂತವನ್ನು ಕೊಟ್ಟಿದೆ. ''ಸ್ವತಂತ್ರವಾದ ಗಿಡಗ

ಪಕ್ಷಿಯು ಆಕಾಶದಲ್ಲಿ ಇಷ್ಟ ಬಂದಂತೆ ಹಾರಾಡಿ ಬಳಲಿ ತನ್ನ ರೆಕ್ಕೆಗಳನ್ನು ಮುದುಡಿಕೊಂಡು ತನ್ನ ಗೂಡನ್ನು ಸೇರಿ ಅಲ್ಲಿ ವಿಶ್ರಾಂತಿಯನ್ನು ಪಡೆಯುತ್ತದೆ. ಅಲ್ಲಿ ಬೇರೆ ಏನನ್ನೂ ಬಯಸುವುದಿಲ್ಲ. ಯಾವ ಸ್ವಪ್ನವನ್ನೂ ಕಾಣುವುದಿಲ್ಲ'' (೪–೩–೧೯). ಹೀಗೆಯೇ ಜೀವಾತ್ಮನೂ ಸಹ ಜಾಗ್ರತ್ ಸ್ವಪ್ನಗಳಲ್ಲಿ ತನ್ನ ಕ್ರಿಯಾಫಲಗಳನ್ನು ಅನುಭವಿಸಿ ಸರ್ವಸಂಸಾರ ಧರ್ಮಗಳಿಂದ ಶೂನ್ಯವಾದ ಪರಮಾತ್ಮ ಸ್ವರೂಪವಾದ ತನ್ನ ಗೂಡನ್ನು ಪ್ರವೇಶಿಸಿ ವಿಶ್ರಮಿಸುತ್ತಾನೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದದ್ದು ವಿಶ್ವ, ತೈಜಸ, ಪ್ರಾಜ್ಞ ಎಂಬ ಹೆಸರುಗಳನ್ನು ಪಡೆದವನು ಒಬ್ಬನೇ ಆತ್ಮನೆಂಬುದು. ಕ್ರಮವಾಗಿ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಉಪಾಧಿಗಳಿಂದ ಬಂದ ಹೆಸರುಗಳಿವು. ನಿಜವಾಗಿ ಇವು ಮೂರೂ ಈತನಿಗೆ ಸಂಬಂಧಿಸಿದವುಗಳಲ್ಲ. 'ಏಕ ಏವ' ಎಂದು ಅವಧಾರಣ ವಿರುವುದನ್ನೂ ಗಮನಿಸಬೇಕು.

**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ ।**
**ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ ॥೨॥**

ಜಾಗರಿತಾವಸ್ಥೆಯಲ್ಲಿಯೇ ವಿಶ್ವಾದಿಗಳ ಅನುಭವವಾಗುತ್ತದೆಯೆಂದೂ ಆ ಮೂರು ಹೆಸರಿನವರೂ ಒಬ್ಬ ವ್ಯಕ್ತಿಯೇ ಎಂದೂ ಈ ಶ್ಲೋಕವು ಪ್ರತಿಪಾದಿಸು ತ್ತದೆ. ಬಲಗಣ್ಣು ಎಂಬ ಮುಖದಲ್ಲಿ ಸ್ಥೂಲವಸ್ತುಗಳನ್ನು ನೋಡುವ ವಿಶ್ವನ ಅನುಭವವಾಗುತ್ತದೆ. ಮನುಷ್ಯನು ಶ್ರೋತ್ರಾದಿಗಳಿಂದಲೂ ಶಬ್ದಾದಿ ಸ್ಥೂಲವಸ್ತು ಗಳನ್ನು ಅನುಭವಿಸಿದರೂ **'ದಕ್ಷಿಣಾಕ್ಷಿ'** ಎಂದಿರುವುದು ಶ್ರೋತ್ರಾದಿಗಳಿಗೂ ಉಪಲಕ್ಷಣವೆಂದು ತಿಳಿಯಬೇಕು. ಸಾಮಾನ್ಯವಾಗಿ ಬಲಗಣ್ಣಿಗೆ ನೋಡಿ ತಿಳಿಯುವ ಶಕ್ತಿ ತೀವ್ರವಾಗಿರುತ್ತದೆ. ಇದನ್ನೇ ಶ್ರುತಿಯು ಬೃಹದಾರಣ್ಯಕದಲ್ಲಿಯೂ ಹೇಳಿದೆ – **''ಇಂಧೋ ಹ ವೈ ನಾಮೈಷಃ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ''** (ಬೃಹ. ೪–೨–೨) ಪೂರ್ವೋಕ್ತ ರೀತಿಯಲ್ಲಿ ಯಾವಾತನು ಬಲಗಣ್ಣಿನಲ್ಲಿ ಅನುಭವಕ್ಕೆ ಬರುತ್ತಾನೋ ಆತನ ಹೆಸರು ಇಂಧ ಎಂದಾಗಿದೆ'' ಇದುವರೆಗೆ ಹೇಳಿದ ವಿಶ್ವನೇ ಇಂಧ; ಇವನೇ ವೈಶ್ವಾನರ. **ಇಂಧೇ ದೀಪ್ಯತೇ ಇತಿ ಇಂಧಃ** – ಸದಾ ಪ್ರಕಾಶಿಸತಕ್ಕವನು. ಬುದ್ಧಿ ಮುಂತಾದ ಉಪಾಧಿಗಳ ಮೂಲಕ ಈತನ ಪ್ರಕಾಶ. ಬೃಹದಾರಣ್ಯಕವು (೫–೫–೨) ಆದಿತ್ಯ ಮಂಡಲ ದಲ್ಲಿ ಇರುವ ಪುರುಷನೂ ದಕ್ಷಿಣಾಕ್ಷಿಯಲ್ಲಿ ಇರುವ ಇಂಧನೂ ಸತ್ಯವೆಂಬ ಪರಬ್ರಹ್ಮದ ಸ್ಥಾನವಿಶೇಷವೆಂದು ವರ್ಣಿಸಿದೆ.

**ವಿಶ್ವೋ ಹಿ ಸ್ಥೂಲಭುಜ್ ನಿತ್ಯಂ ತೈಜಸಃ ಪ್ರವಿವಿಕ್ತಭುಕ್ ।**
**ಆನಂದಭುಕ್ ತಥಾ ಪ್ರಾಜ್ಞಃ ತ್ರಿಧಾ ಭೋಗಂ ನಿಬೋಧತ ॥೩॥**

ಜಾಗ್ರದವಸ್ಥೆಯಲ್ಲಿ ವಿಶ್ವನು ಇಂದ್ರಿಯ ಸ್ಪರ್ಶಸಹಿತವಾದ ಸ್ಥೂಲವಸ್ತುವನ್ನು ಭೋಗಿಸುತ್ತಾನೆ. ಸ್ವಪ್ನಾವಸ್ಥೆಯಲ್ಲಿ ತೈಜಸನೆನಿಸಿಕೊಂಡು ಆತನೇ ಇಂದ್ರಿಯಸ್ಪರ್ಶ ರಹಿತವಾದ ಭೋಗವನ್ನನುಭವಿಸುತ್ತಾನೆ. ಹಾಗೆಯೇ ಸುಷುಪ್ತಿಯಲ್ಲಿ ಪ್ರಾಜ್ಞನೆನಿಸಿ ಕೊಂಡು ಆನಂದವನ್ನು ಮಾತ್ರ ಭೋಗಿಸುತ್ತಾನೆ. ಹೀಗೆ ಭೋಗವು ಮೂರು ವಿಧವಾಗಿರುತ್ತದೆಯೆಂಬುದನ್ನು ತಿಳಿಯಿರಿ.

**ಸ್ಥೂಲಂ ತರ್ಪಯತೇ ವಿಶ್ವಂ ಪ್ರವಿವಿಕ್ತಂ ತು ತೈಜಸಮ್ ।**
**ಆನಂದಶ್ಚ ತಥಾ ಪ್ರಾಜ್ಞಂ ತ್ರಿಧಾ ತೃಪ್ತಿಂ ನಿಬೋಧತ ॥೪॥**

ಸ್ಥೂಲವಾದ ಬಾಹ್ಯವಿಷಯವು ವಿಶ್ವನನ್ನೂ ಬಾಹ್ಯವಿಷಯವಿಲ್ಲದಿದ್ದರೂ ವಾಸನಾಮಯವಾದ ವಿಷಯವು ತೈಜಸನನ್ನೂ ಆನಂದವು ಪ್ರಾಜ್ಞನನ್ನೂ ತೃಪ್ತಿ ಗೊಳಿಸುತ್ತದೆ. ಹೀಗೆ ತೃಪ್ತಿಯೂ ಮೂರು ವಿಧವೆಂದು ತಿಳಿಯಿರಿ.

ಜಾಗ್ರತ್ ಸ್ವಪ್ನಗಳಲ್ಲಿ ದುಃಖಕರವಾದ ವಿಷಯವು ಪ್ರಾಪ್ತವಾಗಿ ದುಃಖವೂ ಇರುತ್ತದೆ. ಆದ್ದರಿಂದ ತೃಪ್ತಿಯೆಂದರೆ ಭೋಗಜನ್ಯವಾದ ಫಲವೆಂದು ಮಾತ್ರ ತಿಳಿಯಬೇಕು. ಯಾವ ಆಯಾಸವೂ ಇಲ್ಲದಿರುವುದೇ ಸುಷುಪ್ತಿಯಲ್ಲಿ ಪ್ರಾಜ್ಞನ ಆನಂದ.

**ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಯಶ್ಚ ಪ್ರಕೀರ್ತಿತಃ ।**
**ವೇದೈತದುಭಯಂ ಯಸ್ತು ಸ ಭುಂಜಾನೋ ನ ಲಿಪ್ಯತೇ ॥೫॥**

ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಸ್ಥಾನಗಳಲ್ಲಿ ಒಂದು ಭೋಜ್ಯವೇ ಸ್ಥೂಲ. ಪ್ರವಿವಿಕ್ತ, ಆನಂದ ಎಂಬುದಾಗಿ ಮೂರು ಬಗೆಯಲ್ಲಿ ಕೀರ್ತಿತ ವಾಗಿದೆಯೋ, ಹಾಗೆಯೇ ಒಬ್ಬ ಭೋಕ್ತನೇ ವಿಶ್ವ ಮುಂತಾದ ಮೂರು ಹೆಸರು ಗಳಿಂದ ಪ್ರಸಿದ್ಧನಾಗಿದ್ದಾನೋ, ಈ ವಿಷಯಗಳಲ್ಲಿ ಒಬ್ಬನೇ ಭೋಕ್ತ ಒಂದೇ ಭೋಜ್ಯ ಎಂದು ತಿಳಿದು ಭೋಗಿಸತಕ್ಕವನು ಸಂಸಾರದಿಂದ ಬದ್ಧನಾಗುವುದಿಲ್ಲ.

ಲೋಕದೃಷ್ಟಿಯಿಂದ ಜ್ಞಾನಿಯು ವಿಷಯಗಳನ್ನು ಭೋಗಿಸುವಂತೆ ಕಂಡರೂ ಆತನ ದೃಷ್ಟಿಯಲ್ಲಿ ವಿಷಯಗಳೂ ಪರಬ್ರಹ್ಮವೇ ಆಗಿರುತ್ತವೆ. ಈ ಅದ್ವೈತ ದೃಷ್ಟಿಯು ಬಂದ ಮೇಲೆ ಅವನು ಜೀವನ್ಮುಕ್ತನೆಂದೇ ತಿಳಿಯಬೇಕು. ತೈತ್ತಿರೀಯದಲ್ಲಿ ಹೇಳಿದಂತೆ "**ಅಹಮನ್ನಂ ಅಹಮನ್ನಾದಃ**" ಎಂಬ ದೃಷ್ಟಿ ಇದು.

ಮುಂದೆ ಕೆಲವು ಕಾರಿಕೆಗಳ ಅರ್ಥ ತುಂಬ ಕ್ಲಿಷ್ಟವಾಗಿದೆ. ಅಂತಹವುಗಳಿಗೆ ಅನ್ವಯನುಸಾರ ಪ್ರತಿಪದಾರ್ಥವನ್ನು ಬರೆದು ವಿವರಿಸಲಾಗುವುದು.

**ಪ್ರಭವಃ ಸರ್ವಭಾವಾನಾಂ ಸತಾಮಿತಿ ವಿನಿಶ್ಚಯಃ ।**
**ಸರ್ವಂ ಜನಯತಿ ಪ್ರಾಣಶ್ಚೇತೋಽಂಶೂನ್ ಪುರುಷಃ ಪೃಥಕ್॥೬॥**

**ಸತಾಂ** = ಮೊದಲೇ ಇದ್ದಿರುವ, **ಸರ್ವಭಾವಾನಾಂ** = ಸಕಲಪದಾರ್ಥ ಗಳಿಗೂ, **ಪ್ರಭವಃ** = ಉತ್ಪತ್ತಿಯೆಂದು, **ವಿನಿಶ್ಚಯಃ** = ವೇದಜ್ಞರ ನಿರ್ಣಯ ವಾಗಿರುತ್ತದೆ. **ಪ್ರಾಣಃ** = ಸರ್ವಕಾರಣನೂ ಸರ್ವೇಶ್ವರನೂ ಆದ ಪ್ರಾಜ್ಞನೆಂಬ ಈ ಪ್ರಾಣನು, **ಸರ್ವಂ** = ಚೇತನಾಚೇತನಾತ್ಮಕವಾದ ಸಕಲ ಪದಾರ್ಥವನ್ನೂ, **ಜನಯತಿ** = ತನ್ನ ಮಾಯೆಯಿಂದ ಉತ್ಪಾದಿಸುತ್ತಾನೆ. **ಪುರುಷಃ** = ಚಿದಾತ್ಮಕ ನಾದ ಈ ಪುರುಷನೇ, **ಚೇತೋಽಂಶೂನ್** = ಚೈತನ್ಯದ ವಿಚಿತ್ರರೂಪ ಕಿರಣ ಗಳಾದ ವಿಶ್ವತೈಜಸಪ್ರಾಜ್ಞರೆಂಬ ಸಕಲ ಜೀವಗಳನ್ನು **ಪೃಥಕ್** = ವಿಷಯಭೇದ ದಿಂದ ಬೇರೆ ಬೇರೆಯಾಗಿ **ಜನಯತಿ** = ಸೃಷ್ಟಿಸುತ್ತಾನೆ.

ಮಾಂಡೂಕ್ಯದ ಆರನೆಯ ಮಂತ್ರದಲ್ಲಿ **''ಏಷ ಸರ್ವೇಶ್ವರಃ ಏಷಯೋನಿಃ ಸರ್ವಸ್ಯ''** ಎಂದು ಹೇಳಿದೆಯಷ್ಟೆ. ಅದರ ವಿವರಣೆ ಈ ಶ್ಲೋಕದಲ್ಲಿದೆ. ಪ್ರಾಣ, ಪ್ರಾಜ್ಞ, ಶಬಲಬ್ರಹ್ಮ, ಈಶ್ವರ – ಇವು ಇಲ್ಲಿ ಒಂದೇ ಅರ್ಥದಲ್ಲಿಯೆಂದು ತಿಳಿಯಬೇಕು. ಜಗತ್ತಿನ ಸೃಷ್ಟಿಯೆಂದರೆ ನೂತನವಾದ ಹೊಸವಸ್ತುವಿನ ಸೃಷ್ಟಿ ಯಲ್ಲ. ಇರುವ ವಸ್ತುವೇ ಅವಿದ್ಯೆಯಿಂದ ಇನ್ನೊಂದು ರೂಪದಲ್ಲಿ ಕಾಣಿಸಿಕೊಳ್ಳು ವುದೇ ಸೃಷ್ಟಿ. ವೇದಾಂತಿಗಳು ಸತ್ಕಾರ್ಯವಾದಿಗಳು. ಅದರಲ್ಲಿಯೂ ವಿವರ್ತವಾದಿ ಗಳು. ಪ್ರಪಂಚದಲ್ಲಿ ಯಾವುದೂ ಹೊಸದಾಗಿ ಹುಟ್ಟುವುದಿಲ್ಲ. ಹಾಗೆ ಹುಟ್ಟುವು ದಾದರೆ ಅದಕ್ಕೆ ಕಾರಣವಾಗಿ, ಗಡಿಗೆಗೆ ಮಣ್ಣು ಇದ್ದಂತೆ, ಬ್ರಹ್ಮಾತಿರಿಕ್ತವಾದ ಇನ್ನೊಂದು ಪದಾರ್ಥವಿರಬೇಕಾಗುತ್ತದೆ. ಆಗ ಬ್ರಹ್ಮವು ಅದ್ವಿತೀಯವೆಂದು ಸಿದ್ಧವಾಗದೇ ಹೋದೀತು. ಆದ್ದರಿಂದ ಹಗ್ಗವು ಹಾವಾಗಿ ಕಾಣುವಂತೆ ಬ್ರಹ್ಮವೇ ತನ್ನ ಮಾಯಾಶಕ್ತಿಯಿಂದ ನಾಮರೂಪಗಳಿಂದ ಜಗದ್ರೂಪವಾಗಿ ಕಾಣುತ್ತದೆ – ಎಂದು ತಿಳಿಯಬೇಕು. ಇದೇ ವಿವರ್ತವಾದ. ಸಾಂಖ್ಯರು ಪ್ರಕೃತಿಯೆಂಬ ಎರಡನೆಯ ವಸ್ತುವನ್ನು ಅಂಗೀಕರಿಸುತ್ತಾರೆ. ಆ ಪ್ರಕೃತಿಯೇ ಜಗತ್ತಿನ ರೂಪದಲ್ಲಿ ಪರಿಣಮಿಸುತ್ತದೆ ಎಂದು ಅವರ ಸಿದ್ಧಾಂತವಿದೆ. ಪ್ರಕೃತಿಯು ಅನಾದಿಯಾದ್ದರಿಂದ ಸಾಂಖ್ಯರೂ ಸದ್ವಾದಿಗಳು; ಪರಿಣಾಮವಾದಿಗಳು. ಜೀವರು ಪ್ರಕೃತಿಗಿಂತ ಅನ್ಯರು. ಆದ್ದರಿಂದ ಸಾಂಖ್ಯರು ದ್ವೈತಿಗಳು. ಅಸದ್ವಾದಿಗಳಾದ ನೈಯಾಯಿಕರೇ ಮೊದಲಾದವರೂ ದ್ವೈತಿಗಳು. ಅಸತ್ **ಆದ** = ಮೊದಲು ಇಲ್ಲದ ಹೊಸ ಪದಾರ್ಥವು ಹುಟ್ಟುವುದೆಂದು ಅವರ ಮತ. ಅದ್ವೈತವಾದವು ವಿವರ್ತ ವಾದವನ್ನು ಅಂಗೀಕರಿಸಿದೆ. ಒಂದೇ ವಸ್ತು ಅವಿದ್ಯೆಯಿಂದ ನಾನಾರೂಪಗಳನ್ನು ಧರಿಸಿದಂತೆ ತೋರುತ್ತದೆ ಎಂದು ಅದ್ವೈತ ವೇದಾಂತದ ಸಿದ್ಧಾಂತ.

ಕಾರಿಕೆಯಲ್ಲಿ ಸರ್ವಯೋನಿಯಾದ ಈಶ್ವರನನ್ನು ಎಂದರೆ ಪ್ರಾಜ್ಞನನ್ನು 'ಪ್ರಾಣ' ಎಂದು ಕರೆದಿದೆ. ಪ್ರಾಣ ಶಬ್ದಕ್ಕೆ ಈ ಅರ್ಥ ಹೇಗೆ ಬರುತ್ತದೆ? ನಿಜ;

**''ಪ್ರಾಣ ಬಂಧನಂ ಹಿ ಸೋಮ್ಯಮನಃ''** ಎಂದು ಛಾಂದೋಗ್ಯ ಶ್ರುತಿಯು (ಛಾಂ. ೬-೮-೨) ಈಶ್ವರನನ್ನು ಪ್ರಾಣನೆಂದು ಹೇಳಿದೆ. ಈಶ್ವರನಿಗೆ ಪ್ರಾಣ ಎಂಬುದು ವೇದೋಕ್ತವಾದ ಹೆಸರು. ಛಾಂದೋಗ್ಯದಲ್ಲಿ ಸತ್ ಎಂಬ ಶುದ್ಧಬ್ರಹ್ಮವು ಪ್ರಕೃತವಾಗಿದ್ದರೂ ಮನಸ್ಸು ಮುಂತಾದವುಗಳ ಸೃಷ್ಟಿಯನ್ನು ಅದಕ್ಕೆ ಹೇಳಿರುವುದರಿಂದ ಶಬಲ ಬ್ರಹ್ಮವಾದ ಈಶ್ವರನನ್ನು ಪ್ರಾಣ ಶಬ್ದದಿಂದ ಗ್ರಹಿಸಬೇಕು. ಶ್ರುತಿಯಲ್ಲಿ ಹೇಳಿದ ಪ್ರಾಣನು ಅವ್ಯಾಕೃತನಾದವನು. ಅವನೇ ವಿರಾಟ್. ಪ್ರಾಜ್ಞನಾದರೋ ಶರೀರಾವಚ್ಛಿನ್ನನಾಗಿ ಸುಷುಪ್ತಿಯಲ್ಲಿದ್ದವನಾದ್ದರಿಂದ ವ್ಯಾಕೃತನಾಗುತ್ತಾನೆ. ಆದರೂ ಸುಷುಪ್ತಿಯಲ್ಲಿ ಮನಸ್ಸಿನ ಸಂಬಂಧವಿಲ್ಲವಾದ್ದರಿಂದ ಅವ್ಯಾಕೃತನಿಗೂ ಪ್ರಾಜ್ಞನಿಗೂ ಭೇದವಿಲ್ಲ. ಪ್ರಾಜ್ಞನು ಪ್ರಕೃತದಲ್ಲಿ ಅವ್ಯಾಕೃತನೆಂದೇ ತಿಳಿಯಬೇಕು. ಆದ್ದರಿಂದಲೇ ಪ್ರಾಜ್ಞನನ್ನು ಸರ್ವಯೋನಿಯೆಂದು ಮಾಂಡೂಕ್ಯ ಶ್ರುತಿಯೇ ಹೇಳಿದೆ.

ಈಶ್ವರನಿಗೆ ಅವ್ಯಾಕೃತವಾದ ಮನಸ್ಸು ಉಂಟು. ಆತನ ಚಿತ್ತದ ಕಿರಣಗಳಂತೆ ವಿಶ್ವ, ತೈಜಸ, ಪ್ರಾಜ್ಞರು ಇದ್ದಾರೆ. ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನ ಕಿರಣಗಳಂತೆ – ಎಂದರೆ – ಸೂರ್ಯನ ಪ್ರತಿಬಿಂಬಗಳಂತೆ ಜೀವರು ಜನಿಸಿದ್ದಾರೆ ಎಂದು ಅಭಿಪ್ರಾಯ. ಕಾರಿಕೆ ಯಲ್ಲಿರುವ ಚೇತೋಂಶೂನ್ ಎಂಬುದರ ತಾತ್ಪರ್ಯವಿದು.

**ವಿಭೂತಿಂ ಪ್ರಸವಂತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ।**
**ಸ್ವಪ್ನಮಾಯಾಸ್ವರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥೭॥**

ಸೃಷ್ಟಿಯು ಹೇಗಾಯಿತೆಂದು ಚಿಂತಿಸತಕ್ಕ ಕೆಲವರು ಸೃಷ್ಟಿಯನ್ನು ಈಶ್ವರನ ಅಣಿಮಾದಿವಿಭೂತಿಗಳ ಪ್ರಕಾಶನವೆಂದು ಹೇಳುತ್ತಾರೆ. ಇನ್ನು ಕೆಲವರು ಸ್ವಪ್ನಮಾಯೆ ಗಳಿಗೆ ಸಮವಾದದ್ದು ಈ ಸೃಷ್ಟಿ ಎಂದು ಕಲ್ಪಿಸಿಕೊಂಡಿದ್ದಾರೆ. **ಪ್ರಸವ** = ಉತ್ಪತ್ತಿ ಸೃಷ್ಟಿ.

**ವಿವರಣೆ :** ಪ್ರಾಜ್ಞನಾದ ಈಶ್ವರನಿಂದ ಜಗತ್ತಿನ ಸೃಷ್ಟಿಯಾಗಿದೆ– ಎಂದು ಹೇಳಿದ್ದಾಯಿತು. ಅದು ಯಾವ ರೀತಿಯಲ್ಲಾಯಿತು–ಎಂಬ ವಿಷಯದಲ್ಲಿ ಮತಭೇದ ಗಳುಂಟು. ಅವೆಲ್ಲವೂ ಸೃಷ್ಟಿಚಿಂತಕರ ಕಲ್ಪನೆಗಳೆಂದು ನಿರಾಕರಿಸಿ ವೇದಾಂತ ಸಿದ್ಧಾಂತ ವನ್ನು ಸ್ಥಾಪಿಸಬೇಕಾಗಿದೆ. ಆ ವಿಕಲ್ಪಗಳು ಯಾವುವೆಂದರೆ –

ಈ ಸೃಷ್ಟಿಯು ಈಶ್ವರನ ವಿಭೂತಿ–ವಿಸ್ತೃತವಾದ ಮಹಿಮೆ. ಅಣಿಮಾ, ಮಹಿಮಾ–ಮುಂತಾದ ಅಷ್ಟಸಿದ್ಧಿಗಳು ಯೋಗಿಗೆ ವಶವಾಗಿರುತ್ತವೆ. ಪರಮಾತ್ಮನು ಮಹಾಯೋಗಿ. ತನ್ನ ವಶವಾಗಿರುವ ಅಣಿಮಾದಿ ಸಿದ್ಧಿಗಳ ಪ್ರದರ್ಶನವೇ ಜಗತ್ತಿನ ಸೃಷ್ಟಿ– ಎಂದು ಕೆಲವರ ಅಭಿಪ್ರಾಯ. ಇದು ಯುಕ್ತವಲ್ಲ.

ಈ ಪಕ್ಷದಲ್ಲಿ ಈಶ್ವರನು ಕೇವಲ ನಿಮಿತ್ತ ಕಾರಣನಾಗುತ್ತಾನೆ. ಅವನು ಉಪಾದಾನ ಕಾರಣನೂ ಆಗಿದ್ದಾನೆಂದು ಶ್ರುತಿ ಸಿದ್ಧವಾಗಿದೆ. ಅಲ್ಲದೆ ಅವನು ತನ್ನ ಈ ವಿಭೂತಿಯನ್ನು ಯಾರಿಗಾಗಿ ಪ್ರದರ್ಶಿಸಬೇಕು? ನೋಡತಕ್ಕ ಚೈತನ್ಯ ಇನ್ನೊಂದಿಲ್ಲ. ಈ ಪ್ರದರ್ಶನದ ಅವಶ್ಯಕತೆಯಾದರೂ ಏನಿದೆ? ಆದ್ದರಿಂದ ಈ ಪಕ್ಷವು ಯುಕ್ತವಲ್ಲ. ಮತ್ತು ಮುಮುಕ್ಷುಗಳಿಗೆ ಈ ವಿಭೂತಿಯ ಚಿಂತನದಲ್ಲಿ ಆದರ ವಿಲ್ಲ. ಆ ವಿಭೂತಿಯನ್ನು ಪ್ರದರ್ಶಿಸಿದ ಪರಮಾತ್ಮನ ಚಿಂತನದಲ್ಲಿ ಮಾತ್ರ ಆದರ ವಿರುತ್ತದೆ.

ಮತ್ತೆ ಕೆಲವು ಸೃಷ್ಟಿ ಚಿಂತಕರು ಈ ಸೃಷ್ಟಿಯು ಸ್ವಪ್ನಕ್ಕೆ ಸಮವೆನ್ನುತ್ತಾರೆ. ಇದೂ ಸರಿಯಲ್ಲ. ಸ್ವಪ್ನವು ಜಗತ್ತಿನಲ್ಲಿ ಕಂಡ ವಸ್ತುವಿನ ಸ್ಮರಣೆಯಾಗಿರುತ್ತದೆ. ಜಗತ್ತಿನಲ್ಲಿ ಕಂಡ ವಸ್ತುಗಳ ಸೃಷ್ಟಿ ಹೇಗೆಂದು ಪ್ರಶ್ನೆ ಹುಟ್ಟಿದೆ. ಈ ವಸ್ತುಗಳನ್ನೇ ಮೊದಲು ಯಾರು ಎಲ್ಲಿ ಕಂಡಿದ್ದಾರೆ? ಆದ್ದರಿಂದ ಸೃಷ್ಟಿಯು ಸ್ವಪ್ನದಂತೆ ಎನ್ನುವುದು ಯುಕ್ತ ವಲ್ಲ. ಶಾಸ್ತ್ರಕಾರರು ಈ ಜಗತ್ತನ್ನು ಸ್ವಪ್ನತುಲ್ಯ ಎಂದು ಕೆಲವು ಕಡೆ ಬರೆದ ದ್ದುಂಟು. ಅದರ ಅಭಿಪ್ರಾಯವೇನೆಂದರೆ, ಇದು ಕನಸಿನಂತೆ ಮಿಥ್ಯೆ ಎಂದಿಷ್ಟೇ. ಮಿಥ್ಯೆ ಎನ್ನುವುದಕ್ಕೆ ಅದು ದೃಷ್ಟಾಂತ. ಸೃಷ್ಟಿಯೇ ಸ್ವಪ್ನ ಎಂದು ಅದರ ಅರ್ಥವಲ್ಲ.

ಮತ್ತೆ ಕೆಲವರು ಈ ಸೃಷ್ಟಿಯು ಮಾಯಾವಿಯ ಮಾಯೆ (ಇಂದ್ರಜಾಲ) ಎನ್ನುತ್ತಾರೆ. ನೆಲದ ಮೇಲೆ ನಿಂತಿರುವ ಮಾಯಾವಿಯು (ಐಂದ್ರಜಾಲಿಕನು) ಒಂದು ಹಗ್ಗವನ್ನು ಬೀಸುತ್ತಾನೆ. ಅದು ಕಂಭದಂತೆ ಸೆಟೆದು ನೆಟ್ಟಗೆ ನಿಲ್ಲುತ್ತದೆ. ಆಗ ಈ ಮಾಯಾವಿಯು ಸರಸರನೆ ಆ ಕಂಭವನ್ನು ಹತ್ತಿಹೋಗಿ ಅದೃಶ್ಯನಾಗು ತ್ತಾನೆ. ಮೇಲ್ಗಡೆ ಘೋರ ಯುದ್ಧವಾದಂತಹ ಕೋಲಾಹಲ ಕೇಳಿಸುತ್ತದೆ. ಮಾಯಾವಿಯ ತಲೆ ಕತ್ತರಿಸಿ ಹೋಗಿ ರುಂಡಮುಂಡಗಳು ಕೆಳಗೆ ಬೀಳುತ್ತವೆ. ಪ್ರೇಕ್ಷಕರು ಅಚ್ಚರಿಗೊಳ್ಳುತ್ತಿದ್ದಾಗ ಮಾಯಾವಿಯು ನಗುತ್ತ ಎದುರಿಗೆ ನಿಂತಿರು ತ್ತಾನೆ! ಹಾಗೆ ವಿಶ್ವ ತೈಜಸ, ಪ್ರಾಜ್ಞರು ಹಗ್ಗವನ್ನೇರಿ ಅದೃಶ್ಯನಾದ ಮಾಯಾವಿ ಯಂತೆ ಅದೃಶ್ಯರಾಗಿಯೇ ಇದ್ದಾರೆ. ಇದೂ ಸರಿಯಲ್ಲ. ಆ ಮೂರು ಅವಸ್ಥೆಗಳೂ ಇಲ್ಲದೆ ಅವಸ್ಥಾತ್ರಯಕ್ಕೆ ಅತೀತವಾದ ಪರಮಾರ್ಥತತ್ತ್ವವನ್ನು ತಿಳಿಯುವುದ ರಲ್ಲಿಯೇ ಮುಮುಕ್ಷುಗಳಿಗೆ ಆದರವಿರುತ್ತದೆಯಾದ್ದರಿಂದ ಈ ಬಗೆಯ ಸೃಷ್ಟಿ ಚಿಂತನೆಯಿಂದ ಪ್ರಯೋಜನವಿಲ್ಲ ಎಂದು ಅಭಿಪ್ರಾಯ. **''ಇಂದ್ರೋ ಮಾಯಾಭಿಃ ಪುರುರೂಪ ಈಯತೇ''** (ಬೃಹ ೨-೫-೧೯) ಎಂಬ ವಚನವು ಈ ಮಾಯಾವಾದಕ್ಕೆ ಮೂಲ. **''ಪರಮೇಶ್ವರನು ತನ್ನ ಮಾಯಾ ಶಕ್ತಿಗಳಿಂದ ಬಹುರೂಪವುಳ್ಳವನಾಗಿ ಗೋಚರಿಸುತ್ತಾನೆ''** ಎಂದು ಆ ಶ್ರುತಿ ವಚನದ ಆಶಯ. **ಇಂದ್ರ** = ಪರಮೇಶ್ವರ. ನಮಗೆ ಬೇಕಾದವನು ಇಂದ್ರ, ಅವನ ಪುರುರೂಪವಲ್ಲ.

**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।**
**ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ॥೮॥**

ಇಚ್ಛೆಯೆಂದರೆ ಇಲ್ಲಿ ಸಂಕಲ್ಪವೆಂದರ್ಥ. ಜಗತ್ತಿನ ಸೃಷ್ಟಿಯಾಗಿದೆ ಎಂದು ನಿಶ್ಚಯಿಸಿಕೊಂಡ ಕೆಲವರು ಈಶ್ವರನ ಸಂಕಲ್ಪಮಾತ್ರದಿಂದ ಸೃಷ್ಟಿಯಾಗಿದೆ ಯೆನ್ನುತ್ತಾರೆ. ಕಾಲವನ್ನು ಪರದೇವತೆಯೆಂದು ಹೇಳುವ ಕೆಲವರು ಕಾಲದಿಂದ ಈ ಭೂತವಸ್ತುಗಳ ಸೃಷ್ಟಿಯಾಗಿದೆ ಎಂದು ಹೇಳುತ್ತಾರೆ.

**'ಸತ್ಯಕಾಮಃ ಸತ್ಯಸಂಕಲ್ಪಃ'** ಎಂದು ಛಾಂದೋಗ್ಯಶ್ರುತಿ ಇದೆ (ಛಾಂ. ೮-೩-೧) ಈಶ್ವರನ ಸಂಕಲ್ಪವು ಸತ್ಯವಾಗಲೇ ಬೇಕು. ಆದ್ದರಿಂದ ಈಶ್ವರನು ಸಂಕಲ್ಪಿಸಿದರೆ ಸಾಕು, ಜಗತ್ತಿನ ಸೃಷ್ಟಿಯಾಗಿಬಿಡುತ್ತದೆ ಎಂದು ಕೆಲವರ ಹೇಳಿಕೆ. ಇನ್ನು ಕಾಲ ಚಿಂತಕರು ಕಾಲದಿಂದ ಸೃಷ್ಟಿಯಾಗುತ್ತದೆ ಎನ್ನುತ್ತಾರೆ. ಇದೆಲ್ಲವೂ ವಿಕಲ್ಪ ಮಾತ್ರ. ಈ ವಿಷಯದಲ್ಲಿ ನಾನಾ ಪಕ್ಷಗಳಿವೆಯೆಂದು ಪ್ರದರ್ಶಿಸುವುದು ಉದ್ದಿಷ್ಟವೇ ಹೊರತು ಇದರಲ್ಲಿ ತಾತ್ಪರ್ಯವಿಲ್ಲ. ಹೇಗೆಂದರೆ, **'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'** ಎಂಬ ಪದ್ಯದಲ್ಲಿ ಮನಸ್ಸಿಲ್ಲದೆ ಸಂಕಲ್ಪವು ಸಂಭವಿಸುವುದೇ ಇಲ್ಲ. ಆಗ ಉಪಾಧಿವಿಶಿಷ್ಟನಾದ ಈಶ್ವರನನ್ನು ಹೇಳಿದಂತಾಗುತ್ತದೆ. ನಮಗೆ ಉದ್ದಿಷ್ಟವಾದದ್ದು ನಿರುಪಾಧಿಕ ಬ್ರಹ್ಮ. ಕಾಲವು ಸೃಷ್ಟಿಸುತ್ತದೆ ಎನ್ನುವುದು ಶ್ರುತಿವಿರುದ್ಧವಾದದ್ದು.

**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈವ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ॥೯॥**

ತಾನು ಭೋಗಿಸುವುದಕ್ಕಾಗಿ ಈ ಜಗತ್ತನ್ನು ಸೃಜಿಸಿಕೊಂಡಿದ್ದಾನೆಂದು ಕೆಲವರೂ ಕ್ರೀಡಿಸುವುದಕ್ಕಾಗಿ ಈ ಸೃಷ್ಟಿಯೆಂದು ಮತ್ತೆ ಕೆಲವರೂ ಹೇಳುತ್ತಾರೆ. ವಸ್ತುತಃ ಈ ಸೃಷ್ಟಿಯೆನ್ನುವುದು ಪರಮಾತ್ಮನ ಸ್ವಭಾವವಾಗಿದೆ. ಆತನು ಆಪ್ತಕಾಮನಾದ್ದರಿಂದ ಯಾವ ಆಸೆ ಇದ್ದೀತು?

**ವಿವರಣೆ :** ಮನುಷ್ಯನು ತನ್ನ ಉಪಯೋಗಕ್ಕಾಗಿ ನಾನಾ ವಸ್ತುಗಳನ್ನು ತಂದುಕೊಂಡು ಅವುಗಳಿಂದ ಸುಖವನ್ನು ಅನುಭವಿಸುತ್ತಾನೆ. ಹಾಗೆಯೇ ಈಶ್ವರನು ತನ್ನ ಭೋಗಕ್ಕಾಗಿ ಈ ಜಗತ್ತನ್ನು ನಿರ್ಮಿಸಿಕೊಂಡಿದ್ದಾನೆ ಎಂದು ಕೆಲವರ ಆಶಯ. ಇನ್ನೂ ಕೆಲವರು ಹಾಗೆ ಹೇಳಿದರೆ ಈಶ್ವರನಿಗೆ ಸುಖದ ಅಭಿಲಾಷೆ ಇದೆಯೆಂದಾಗುತ್ತದೆ. ಆದ್ದರಿಂದ ಸೃಷ್ಟಿಯು ಆತನ ಒಂದು ಆಟ, ಲೀಲೆ, ಎಲ್ಲ ಸುಖಗಳನ್ನೂ ಅನುಭವಿಸುತ್ತಿರುವ ಮಹಾರಾಜನಿಗೆ ಯಾವ ಅಭಿಲಾಷೆಯೂ ಇಲ್ಲದಿದ್ದರೂ ಚದುರಂಗ ಮುಂತಾದ ಆಟಗಳನ್ನು ಆಡುತ್ತಾನೆ. ಅದರಂತೆ ಜಗತ್ತನ್ನು ನಿರ್ಮಿಸುವುದು ಈಶ್ವರನ ಒಂದು ಲೀಲೆ. ಇವಿಷ್ಟು ವಿವಿಧ ಪಂಡಿತರ ಅಭಿಪ್ರಾಯ ಭೇದಗಳು.

ಒಳ್ಳೆಯದು. ಪರಮಾತ್ಮನು ನಿತ್ಯತೃಪ್ತನಾದ್ದರಿಂದ ಭೋಗಾರ್ಥವಾಗಿ ಸೃಷ್ಟಿಯೆನ್ನುವುದು ಸರಿಯಲ್ಲವೆಂದು ಒಪ್ಪಬಹುದು. ಕ್ರೀಡಾರ್ಥವೂ ಅಲ್ಲ ಎನ್ನುವುದು ಸರಿಯಾಗದು. ಕ್ರೀಡೆ ಎಂದರೆ ಲೀಲೆ. ಆದ್ದರಿಂದಲೇ **''ಲೋಕವತ್ತು ಲೀಲಾ ಕೈವಲ್ಯಮ್''** (ಬ್ರ.ಸೂ.೨-೧-೩೩) ಎಂದು ಬ್ರಹ್ಮಸೂತ್ರದಲ್ಲಿ ಲೀಲಾರ್ಥವಾಗಿ ಈ ಸೃಷ್ಟಿಯೆಂದು ಹೇಳಿದೆ. ಬ್ರಹ್ಮಸೂತ್ರಕ್ಕೆ ಈ ಹೇಳಿಕೆ ವಿರುದ್ಧವಾಗುತ್ತದೆಯಲ್ಲವೆ? ಆಗುವುದಿಲ್ಲ. ಅಲ್ಲಿ ಲೀಲೆಯೆಂದರೆ ಸ್ವಭಾವವೆಂದರ್ಥ. ಆದ್ದರಿಂದ ಶ್ರೀ ಶಾಂಕರ ಭಾಷ್ಯದಲ್ಲಿ **ಈಶ್ವರಸ್ಯಾಪಿ ಅನಪೇಕ್ಷ್ಯ ಕಿಂಚಿತ್ ಪ್ರಯೋಜನಾಂತರಂ ಸ್ವಭಾವಾದೇವ ಕೇವಲಂ ಲೀಲಾ ರೂಪಾ ಪ್ರವೃತ್ತಿರ್ಭವಿಷ್ಯತಿ** ಎಂದು ಹೇಳಿದೆ. ಸ್ವಭಾವದಿಂದ ಲೀಲೆ ಎಂದರೆ ಲೀಲೆಯೇ ಅವನ ಸ್ವಭಾವ ಎಂದು ತಾತ್ಪರ್ಯ. ಉಸಿರಾಡುವುದು ಮನುಷ್ಯನ ಸ್ವಭಾವ. ಫಲಾಪೇಕ್ಷೆಯಿಂದ ಮನುಷ್ಯನು ಉಸಿರಾಡುವುದಿಲ್ಲ. ಅದೊಂದು ದೇಹ ಧರ್ಮವೇ ಆಗಿಬಿಟ್ಟಿದೆ. ಉಸಿರಾಟದಿಂದ ವೈದ್ಯಶಾಸ್ತ್ರದ ಪ್ರಕಾರ ಫಲವಿದೆ ಎನ್ನುವುದಾದರೆ, ಜಗತ್ತಿನ ಸೃಷ್ಟಿಯಿಂದ ಪ್ರಾಣಿಗಳಿಗೆ ಕರ್ಮಫಲದ ಅನುಭವ ವಾಗುತ್ತದೆ ಎಂಬುದೇ ಸೃಷ್ಟಿಯ ಫಲವೆನ್ನಬಹುದು. ಅದು ಈಶ್ವರನಿಗೆ ಫಲವಲ್ಲ. ಪ್ರಾಣಿಗಳ ಕರ್ಮವು ಫಲೋನ್ಮುಖವಾದಾಗ ಸೃಷ್ಟಿಯು ಅನಿವಾರ್ಯವಾಗಿ ನಡೆದು ಹೋಗುತ್ತದೆ. ಅಲ್ಲದೆ ಅನಾದಿಯಾದ ಅವಿದ್ಯೆಯಿಂದ ಕಾಣುವ ಸೃಷ್ಟಿಗೆ ಫಲ ವೇನೆಂಬ ಪ್ರಶ್ನೆಯೇ ಹುಟ್ಟುವುದಿಲ್ಲ. ಹಗ್ಗವು ಭ್ರಾಂತಿಯಿಂದ ನಮಗೆ ಹಾವಾಗಿ ತೋರುತ್ತದೆ. ಏಕೆ ಹಾವಾಗಿ ತೋರುತ್ತದೆ? ಅದರಿಂದ ಹಗ್ಗಕ್ಕೆ ಪ್ರಯೋಜನವೇನು? ಎಂಬ ಪ್ರಶ್ನೆಯೇ ಹುಟ್ಟುವುದಿಲ್ಲ. ಆದ್ದರಿಂದ ಜಗತ್ತಿನ ಸೃಷ್ಟಿಯು ಈಶ್ವರನ ಸ್ವಭಾವ ಎನ್ನುವುದೇ ಸಿದ್ಧಾಂತವಾಗಿ ಉಳಿಯುತ್ತದೆ.

**'ಆಪ್ತಕಾಮಸ್ಯ ಕಾ ಸ್ಪೃಹಾ'** ಎನ್ನುವುದು ಸರಿಯಾಗಿ ತೋರುವುದಿಲ್ಲವಲ್ಲ! **''ಸೋಽಕಾಮಯತ, ಬಹು ಸ್ಯಾಂ ಪ್ರಜಾಯೇಯೇತಿ''** (ತೈತ್ತಿ.ಬ್ರಹ್ಮ) ಎಂಬ ಶ್ರುತಿಯಲ್ಲಿ ಈಶ್ವರನ ಕಾಮನೆಯನ್ನು ಹೇಳಿದೆಯಲ್ಲವೆ? ಹಾಗಲ್ಲ. ಶ್ರುತಿಯೇ ಈಶ್ವರನು ಆಪ್ತಕಾಮನೆಂದು ಹೇಳಿರುವುದರಿಂದ ಅವನಿಗೆ ಯಾವ ಸ್ಪೃಹೆಯೂ ಇರುವುದಿಲ್ಲ. **''ಸೋಽಕಾಮಯತ''** ಎಂಬಲ್ಲಿ ಕಾಮನೆ ಎಂದರೆ ಪ್ರಾಣಿಕರ್ಮಗಳಿಗೆ ಫಲವನ್ನು ನೀಡಬೇಕಾದ್ದರಿಂದ ಸೃಷ್ಟಿಗಾಗಿ ಬ್ರಹ್ಮನಿಗೆ ಅನುಜ್ಞೆಯನ್ನು ನೀಡುವುದು ಎಂದಿಷ್ಟೇ ಅರ್ಥ. 'ಕಾ ಸ್ಪೃಹಾ' ಎಂಬುದು ಪೂರ್ವ ಸಂಸ್ಕಾರ ದಿಂದ ಜನರಿಗೆ ಹುಟ್ಟುವ ಕಾಮನೆಯಂತಹ ಕಾಮನೆಯು ಪರಮಾತ್ಮನಿಗಿಲ್ಲ ಎಂಬ ನಿಷೇಧವನ್ನು ಬೋಧಿಸುತ್ತದೆ. ಇಲ್ಲಿಗೆ ಜಗತ್ತಿನ ಸೃಷ್ಟಿಯ ವಿಷಯದಲ್ಲಿ ಸಹಜವಾಗಿ ಬಂದ ಕೆಲವು ಕಾರಿಕೆಗಳ ಸರಳವಾದ ಅರ್ಥವನ್ನು ನಿರೂಪಿಸಿ

ದ್ದಾಯಿತು. ಇವೆಲ್ಲವೂ ಅದ್ವೈತ ವೇದಾಂತದಲ್ಲಿಯೂ ಬರಬಹುದಾದ ಕೆಲವು ಏಕದೇಶೀಯಮತಗಳು. ಶ್ರೀ ಗೌಡಪಾದರು ಈ ಮತಗಳನ್ನು ಮಾತ್ರ ಪ್ರಸ್ತುತಗೊಳಿಸಿ ನಿರಾಕರಿಸಿದ್ದಾರೆ. ಸಾಂಖ್ಯ, ನೈಯಾಯಿಕಾದಿ ದ್ವೈತಿಗಳ ಮತವನ್ನು ಇಲ್ಲಿ ಪ್ರಸ್ತಾಪಿಸಲಿಲ್ಲ.

**ನಿವೃತ್ತೇಃ ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ ।**
**ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ ॥೧೦॥**

**ಸರ್ವ ದುಃಖಾನಾಂ** = ಸಮಸ್ತ ದುಃಖಗಳ ಆಧಾರರಾದ ವಿಶ್ವ,ತೈಜಸ, ಪ್ರಾಜ್ಞರ ಅವಸ್ಥಾ ಭೇದಗಳ, **ನಿವೃತ್ತೇಃ** = ನಿವೃತ್ತಿಗೆ, **ಈಶಾನಃ** = ಸಮರ್ಥನೂ **ಪ್ರಭುಃ** = ಪ್ರಭುವೂ, **ಅವ್ಯಯಃ** = ವ್ಯಯರಹಿತನೂ, **ಸರ್ವಭಾವಾನಾಂ** = ಸರ್ವ ಪದಾರ್ಥಗಳಿಗೆ, **ಅದ್ವೈತಃ** = ಅದ್ವೈತಸ್ವರೂಪನೂ ಆಗಿ, **ವಿಭುಃ**= ಸರ್ವವ್ಯಾಪಿಯೂ ಆದವನೇ, **ತುರ್ಯಃ** = ಚತುರ್ಥನಾದ, **ದೇವಃ** = ದೇವನೆಂದು, **ಸ್ಮೃತಃ** = ತತ್ತ್ವಜ್ಞಾನಿಗಳಿಂದ ಸ್ಮೃತನಾಗಿದ್ದಾನೆ.

ವಿಶ್ವ, ತೈಜಸ, ಪ್ರಾಜ್ಞ ಎಂಬ ಅವಸ್ಥಾತ್ರಯವೂ ಆರೋಪಿತವಾದದ್ದು. ಈ ಅವಸ್ಥೆಗಳಲ್ಲಿ ಆಧ್ಯಾತ್ಮಿಕ (ಶರೀರ ಸಂಬಂಧಿ), ಆಧಿಭೌತಿಕ, ಆಧಿದೈವಿಕಗಳೆಂಬ ದುಃಖಗಳು ಪ್ರಾಪ್ತವಾಗುತ್ತವೆ. ಪ್ರಾಜ್ಞನಿಗೆ ದುಃಖವಿಲ್ಲವಾದರೂ ಸಂಸಾರ ಬೀಜವಾದ ಅವಿದ್ಯೆ ಇರುವುದರಿಂದ ಪ್ರಾಜ್ಞಸ್ಥಿತಿಯು ಅಲ್ಪಕಾಲದ್ದು ಮತ್ತು ದುಃಖಾಭಿಮುಖವಾದದ್ದು. ಆದ್ದರಿಂದ ಅದೂ ದುಃಖಾಧಾರವೆಂದು ತಿಳಿಯಬೇಕು. ಈ ಅವಸ್ಥಾತ್ರಯದ ನಿವೃತ್ತಿಗೆ (ಮೋಕ್ಷಕ್ಕೆ) ಸಮರ್ಥನಾದವನೇ ಚತುರ್ಥನಾದ ಪರಮಾತ್ಮ. ಈಶಾನ ಶಬ್ದದ ವ್ಯಾಖ್ಯಾನವೇ ಪ್ರಭು ಎಂಬುದು. ಕಲ್ಪಿತವಾದ ಎಲ್ಲ ಪದಾರ್ಥಗಳಿಗೂ ಏಕ ಸ್ವರೂಪನಾದ್ದರಿಂದ ಈತನಿಗೆ ವ್ಯಯ ಎಂಬುದಿಲ್ಲ. **ದೇವ** = ಪ್ರಕಾಶ ಸ್ವರೂಪ.

**ವಿವರಣೆ : "ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ"** ಎಂಬ ಮಂತ್ರಭಾಗದ ವ್ಯಾಖ್ಯಾನವಿದು. ಸರ್ವಾಣಿ ದುಃಖಾನಿ ಯೇಷಾಂತೇ ಸರ್ವದುಃಖಾಃ–ಎಂದು ಬಹುವ್ರೀಹಿಸಮಾಸ ಅಥವಾ ಸರ್ವ ದುಃಖಗಳಿಗೂ ಆಧಾರರು ಎಂಬ ಅರ್ಥದಲ್ಲಿ ಸರ್ವದುಃಖ ಶಬ್ದಕ್ಕೆ ಲಕ್ಷಣಾ. ಇದು ವಿಶ್ವತೈಜಸ ಪ್ರಾಜ್ಞರಿಗೆ ವಿಶೇಷಣ. ಪರಮಾತ್ಮನಿಗೆ ಯಾವ ದುಃಖದ ಪ್ರಾಪ್ತಿಯೂ ಇಲ್ಲವಾದ್ದರಿಂದ ವಿಶ್ವಾದಿಗಳನ್ನಿಲ್ಲಿ ಗ್ರಹಿಸಬೇಕಾಗಿದೆ. ಪ್ರಾಪ್ತಿ ಇದ್ದರಲ್ಲವೆ ನಿವೃತ್ತಿ? ಹಾಗಿಲ್ಲದಿದ್ದರೆ **'ಅಭಾವಾತ್ ಸರ್ವದುಃಖಾನಾಂ'** ಎಂದು ಹೇಳಬಹುದಾಗಿತ್ತು ಮತ್ತು ಪರಮಾತ್ಮನು ಚತುರ್ಥ ಪಾದನೆಂಬುದನ್ನು ಇಲ್ಲಿ ಉಪಪಾದಿಸಬೇಕಾಗಿದೆ.

ಆದ್ದರಿಂದಲೂ ವಿಶ್ವಾದಿತ್ರಯರನ್ನು ಗ್ರಹಿಸುವುದು ಯುಕ್ತವಾಗಿದೆ. ಈ ಅವಸ್ಥಾತ್ರಯದ ದುಃಖವನ್ನು ನಿವೃತ್ತಿಗೊಳಿಸಲು ಪರಮಾತ್ಮನೇ ಸಮರ್ಥ. ಅವನೇ ಪ್ರಭು. ಸರ್ವದುಃಖಗಳನ್ನು ನಿವೃತ್ತಿಗೊಳಿಸಲು ಸಮರ್ಥ. **'ಸರ್ವಂ ಖಲ್ವಿದಂ ಬ್ರಹ್ಮ'** ಎಂದು ಶ್ರುತಿವಾಕ್ಯವಿರುವುದರಿಂದ ಆತನು ಜಗದ್ರೂಪದಿಂದ ವಿಕಾರ ಹೊಂದುತ್ತಾನೆಯೆಂಬ ಶಂಕೆಯನ್ನು ಹೋಗಲಾಡಿಸುವುದ ಕ್ಕಾಗಿ ಅವ್ಯಯ ಎಂಬ ವಿಶೇಷಣವಿದೆ. ವ್ಯಯವೆಂದರೆ ಒಂದು ಅಂಶವು ರೂಪಾಂತರ ಗೊಳ್ಳುವುದು. ಅದೇ ವಿಕಾರ. ಆತನು ವಿಕಾರರಹಿತ. ಹಾಲು, ಮೊಸರಾದಂತೆ, ಬೆಣ್ಣೆ ತುಪ್ಪವಾದಂತೆ ಪರಿಣಾಮ ಹೊಂದಿದರೆ ವಿಕಾರವಾಗುತ್ತದೆ. ವೇದಾಂತವು ವಿವರ್ತವಾದವನ್ನು ಅಂಗೀಕರಿಸಿದೆ. ಹಗ್ಗವು ಹಾವು ಆಗಿ ತೋರುವಂತೆ, ಹಿತ್ತಾಳೆಯು ಚಿನ್ನವಾಗಿ ತೋರುವಂತೆ, ಭ್ರಮೆಯಿಂದ ರೂಪಾಂತರವು ತೋರಿದರೆ ವಿವರ್ತವಾದವಾಗುತ್ತದೆ. ಪರಮಾತ್ಮನಲ್ಲಿ ಜಗತ್ತು ಭ್ರಮೆಯಿಂದ ತೋರುವುದರಿದ ಆತನು ಅವ್ಯಯನೇ ಆಗಿರುತ್ತಾನೆ. ಹೀಗೆ ಸರ್ವಭಾವಗಳು ತೋರಿದರೂ ಆತನು ಅದ್ವೈತ – ಏಕಸ್ವರೂಪದಲ್ಲಿಯೇ ಇರುತ್ತಾನೆಂದು ಅಭಿಪ್ರಾಯ. ದೇವಶಬ್ದವು ದಿವ್ ಧಾತುವಿನಿಂದ ಹುಟ್ಟಿದೆ. ದ್ಯುತಿ ಎಂದು ಅದರ ಅರ್ಥ. ದೀವ್ಯತಿ ದ್ಯೋತತೇ ಇತಿ ದೇವಃ. ಜ್ಯೋತಿಃ ಸ್ವರೂಪನೆಂದರ್ಥ. ಸರ್ವವ್ಯಾಪಿಯಾದ್ದರಿಂದ ವಿಭು. ವಸ್ತುತಃ ಪರಮಾತ್ಮನೇ ಸರ್ವವೂ ಆದ್ದರಿಂದ ವಿಭುವೆನಿಸುತ್ತಾನೆ. ಇನ್ನೊಂದು ವಸ್ತುವಿದ್ದರೆ ಅದು ಒಂದು ಸ್ಥಳವನ್ನು ಆಕ್ರಮಿಸುವುದರಿಂದ ಪರಮಾತ್ಮನು ವಿಭುವೆನ್ನುವುದು ಆಗ ಯುಕ್ತವಾಗುವುದಿಲ್ಲ.

**ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।**
**ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತೌ ತುರ್ಯೇ ನ ಸಿದ್ಧ್ಯತಃ ॥೧೧॥**

**ತೌ** = ಹಿಂದೆ ಹೇಳಿದ, **ವಿಶ್ವತೈಜಸೌ** = ವಿಶ್ವತೈಜಸರು, **ಕಾರ್ಯಕಾರಣ ಬದ್ಧೌ** = ಕಾರ್ಯವೆಂದರೆ ಫಲ, ಕಾರಣವೆಂದರೆ ತತ್ತ್ವದ ಅಜ್ಞಾನವೆಂಬ ಬೀಜರೂಪವಾದ ಅವಿದ್ಯೆ– ಇವುಗಳಿಂದ **ಬದ್ಧೌ** = ಸಂಗೃಹೀತರೆಂದು, **ಇಷ್ಯೇತೇ** = ಇಚ್ಛಿಸಲ್ಪಡುತ್ತಾರೆ. **ತು** = ಆದರೆ, **ಪ್ರಾಜ್ಞಃ** = ಪ್ರಾಜ್ಞನು, **ಕಾರಣ ಬದ್ಧಃ** = ತತ್ತ್ವದ ಅಪ್ರತಿಬೋಧವೆಂಬ ಅವಿದ್ಯೆಯಿಂದ ಮಾತ್ರ ಗೃಹೀತನಾಗಿರುತ್ತಾನೆ. **ತುರ್ಯೇ** = ಚತುರ್ಥನಾದ ಪರಮಾತ್ಮನಲ್ಲಿ, **ದ್ವೌ ತೌ** = ಈ ಕಾರ್ಯಕಾರಣಗಳೆರಡೂ, **ನ ಸಿಧ್ಯತಃ** = ಸಿದ್ಧಿಸುವುದಿಲ್ಲ (ಅವೆರಡೂ ಇಲ್ಲ).

ಕಾರಣವೆಂದರೆ ಸಂಸಾರಕ್ಕೆ ಬೀಜಸ್ವರೂಪವಾದ ಅವಿದ್ಯೆ. ಇದರ ಕಾರ್ಯವು ತತ್ತ್ವದ ಅಗ್ರಹಣ ಮತ್ತು ಅನ್ಯಥಾಗ್ರಹಣ 'ಭ್ರಮೆ'. ವಿಶ್ವತೈಜಸರಲ್ಲಿ

ಇವೆರಡೂ ಇವೆ. ಪ್ರಾಜ್ಞನಲ್ಲಿ ಸಂಸಾರ ಕಾರಣವಾದ ಅವಿದ್ಯೆ ಮಾತ್ರ ಇರುತ್ತದೆ. ಅನ್ಯಥಾ ಗ್ರಹಣ ಇಲ್ಲ. ತುರೀಯನಾದ ಪರಮಾತ್ಮನಲ್ಲಿ ಈ ಎರಡು ಕಾರ್ಯಕಾರಣಗಳೂ ಇಲ್ಲ.

**ವಿವರಣೆ : ''ಕರೋತೀತಿ ಕಾರಣಂ ಬೀಜ ಭಾವಃ''** ಎಂದು ಭಾಷ್ಯದಲ್ಲಿ ಕಾರಣ ಶಬ್ದದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಇಲ್ಲಿ 'ಣ್ಯುಟ್‌ಚ' ಎಂಬ ಪಾಣಿನಿ ಸೂತ್ರದಿಂದ ಬಾಹುಲಕಾತ್ ಕೃಞಧಾತುವಿನ ಮೇಲೆ ಕರ್ತ್ರರ್ಥದಲ್ಲಿ ಣ್ಯುಟ್ ಬಂದಿದೆಯೆಂದೂ ಪ್ರತ್ಯಯವು ಣಿತ್ ಆದ್ದರಿಂದ ಧಾತುವಿಗೆ ವೃದ್ಧಿಯೆಂದೂ ಹೇಳಬೇಕಾಗುತ್ತದೆ. ಭಾಷ್ಯದಲ್ಲಿ ಬರೆದಿದ್ದು ತಾತ್ಪರ್ಯ ಕಥನ ಅಥವಾ **'ಕಾರ್ಯತೇ ಅನೇನೇತಿ ಕಾರಣಂ'** । ಣಿಜಂತ ಕೃಞ ಧಾತುವಿನ ಮೇಲೆ **'ಕರಣಾಧಿ ಕರಣಯೋಶ್ಚ'** ಎಂಬ ಪಾಣಿನಿ ಸೂತ್ರದಿಂದ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ವೆನ್ನಬೇಕು. ಹೇತುರ್ನಾ ಕಾರಣಂ ಬೀಜಂ – ಎಂದು ಅಮರಕೋಶ. ಬೀಜ ವೆಂದರೂ ಕಾರಣವೇ. ಅದು ಪ್ರಕೃತದಲ್ಲಿ ಅವಿದ್ಯೆ. ಅದು ತತ್ತ್ವದ ಅಗ್ರಹಣಕ್ಕೂ ಅನ್ಯಥಾ ಗ್ರಹಣಕ್ಕೂ ಕಾರಣವಾಗಿದೆ. ಜಾಗ್ರತ್ತಿನಲ್ಲಿ ಹೇಗೋ ಹಾಗೆ ಕನಸಿನಲ್ಲಿಯೂ ಇವೆರಡೂ ಇರುವುದರಿಂದ ವಿಶ್ವತೈಜಸರು ಕಾರ್ಯಕಾರಣಗಳಿಂದ ಬದ್ಧರಾಗಿದ್ದಾರೆ. ಸುಷುಪ್ತಿಯಲ್ಲಿ ಮನೋ ವ್ಯಾಪಾರವಿಲ್ಲದ್ದರಿಂದ ಅನ್ಯಥಾ ಗ್ರಹಣವೆಂಬ ಭ್ರಮೆ ಇಲ್ಲ. ಆದ್ದರಿಂದ ಪ್ರಾಜ್ಞನು ತತ್ತ್ವಾಗ್ರಹಣಕ್ಕೆ ಕಾರಣವಾದ ಅವಿದ್ಯೆಯಿಂದ ಮಾತ್ರ ಬದ್ಧನಾಗಿದ್ದಾನೆ.

ತತ್ತ್ವದ ಅಗ್ರಹಣವು ತುರೀಯನಲ್ಲಿಲ್ಲವೆಂದರೆ ತತ್ತ್ವದ ಗ್ರಹಣವಿದೆ ಯೆಂದು ಸ್ಪಷ್ಟವಾಗಿ ಹೇಳಿದಂತಾಯಿತು. ಆಗ ತತ್ತ್ವ ಯಾವುದು? ಸ್ವಯಂ ಪರಮಾತ್ಮನೇ ತತ್ತ್ವ. ಸ್ವಸ್ವರೂಪ ಜ್ಞಾನವು ಪರಮಾತ್ಮನಲ್ಲಿದೆ ಎಂದು ಒಪ್ಪಬೇಕು. ತಾನೇ ವಿಷಯ, ತಾನೇ ವಿಷಯಿ. ಪರಮಾತ್ಮನು **''ಸತ್ಯಂ ಜ್ಞಾನಮನಂತಂ ಬ್ರಹ್ಮ''** ಇತ್ಯಾದಿ ಶ್ರುತಿಗಳಿಂದ ಜ್ಞಾನ ಸ್ವರೂಪನೆಂದು ನಿಶ್ಚಿತವಾಗಿದೆ. ಈ ಜ್ಞಾನವು ವೃತ್ತಿಜ್ಞಾನವಲ್ಲ. ಅದು ವೃತ್ತಿಜ್ಞಾನಕ್ಕೂ ಕಾರಣವಾದ ಚೈತನ್ಯ, ಪ್ರಜ್ಞಪ್ತಿ. ವೃತ್ತಿ ಜ್ಞಾನದಲ್ಲಿ ವಿಷಯ ಬೇರೆ. ವಿಷಯಿ ಬೇರೆ. ಪ್ರಜ್ಞಪ್ತಿ ರೂಪ ಚೈತನ್ಯದಲ್ಲಿ ವಿಷಯ ವಿಷಯಿಗಳಿಗೆ ಐಕ್ಯವೆಂದು ಸಿದ್ಧವಾಗುತ್ತದೆ. ಪ್ರಾಜ್ಞನ ತತ್ತ್ವಾಗ್ರಹಣಕ್ಕೆ ಕಾರಣವಾದ ಬೀಜವು ಅವಿದ್ಯೆ. ಅದೇ ಮೂಲಾವಿದ್ಯೆಯೆಂದು ತಿಳಿಯಬೇಕು. ಮುಂದಿನ ಶ್ಲೋಕದಲ್ಲಿ ಇದು ಸ್ಫುಟವಾಗಿದೆ.

**ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಮ್ ।**
**ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ ಸರ್ವದೃಕ್ ಸದಾ ॥೧೨॥**

**ಪ್ರಾಜ್ಞಃ** = ಪ್ರಾಜ್ಞನು, **ಆತ್ಮಾನಂ** = ತನ್ನನ್ನು, **ನ ಸಂವೇತ್ತಿ** = ತಿಳಿದಿರುವುದಿಲ್ಲ. **ಪರಾಂಶ್ಚ** = ಪರರಾದ ನೀವು ಯಾರೆಂಬುದನ್ನು **ನ** = ತಿಳಿದಿರುವುದಿಲ್ಲ. **ಸತ್ಯಂ** = ತತ್ತ್ವವು ಯಾವುದೆಂಬುದನ್ನೂ **ನ**= ತಿಳಿಯಲಾರನು. **ಅನೃತಂ** = ಜಗತ್ತು ಮಿಥ್ಯೆಯೆಂಬುದನ್ನೂ **ನ** = ತಿಳಿದಿರುವುದಿಲ್ಲ. **ಕಿಂಚನ** = ಹೀಗೆ ಯಾವುದನ್ನೂ **ನ ಸಂವೇತ್ತಿ**= ತಿಳಿಯುವುದಿಲ್ಲ. **ತತ್** = ಆದ್ದರಿಂದ, **ತುರ್ಯಂ**= ತುರೀಯನಾದ ಪರಮಾತ್ಮನಾದರೋ, **ಸದಾ** = ಯಾವಾಗಲೂ, **ಸರ್ವದೃಕ್**= ಸರ್ವ ಸ್ವರೂಪನೂ **ದೃಕ್**= ದೃಕ್ ಸ್ವರೂಪನೂ ಆಗಿರುತ್ತಾನೆ.

**ವಿವರಣೆ :** ಈ ಕಾರಿಕೆಯ ತಾತ್ಪರ್ಯವು ಸರಳವಾಗಿದೆ. ತುರೀಯನಲ್ಲಿ ತತ್ತ್ವದ ಅಗ್ರಹಣವಾಗಲಿ ಅನ್ಯಥಾ ಗ್ರಹಣವಾಗಲಿ ಇಲ್ಲ. ತತ್ತ್ವದ ಅಗ್ರಹಣಕ್ಕೆ ಅವಿದ್ಯೆಯು ಬೀಜ. ಪ್ರಾಜ್ಞನು ಈ ಬೀಜಪ್ರಭಾವದಿಂದ ಮಾತ್ರ ಬದ್ಧನಾಗಿದ್ದಾನೆ. ಈ ಬೀಜದ ಫಲವು ತತ್ತ್ವಾಗ್ರಹಣದಿಂದ ಹುಟ್ಟಿದ ಅನ್ಯಥಾಗ್ರಹಣ. ಬೀಜಫಲಗಳೆರಡರಿಂದಲೂ ವಿಶ್ವತೈಜಸರು ಬದ್ಧರಾಗಿರುವುದರಿಂದ ಅವರಿಬ್ಬರಿಗೆ ತತ್ತ್ವದ ಅಗ್ರಹಣ, ಅನ್ಯಥಾ ಗ್ರಹಣಗಳೆರಡೂ ಉಂಟು. ತುರೀಯನು ಮಾತ್ರ ಸದಾ ಸರ್ವದೃಕ್ ಆಗಿರುತ್ತಾನೆ.

**ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುರ್ಯಯೋಃ ।**
**ಬೀಜನಿದ್ರಾಯುತಃ ಪ್ರಾಜ್ಞಃ ಸಾ ಚ ತುರ್ಯೇ ನ ವಿದ್ಯತೇ ॥೧೩॥**

**ಉಭಯೋಃ ಪ್ರಾಜ್ಞತುರ್ಯಯೋಃ** = ಪ್ರಾಜ್ಞ ಮತ್ತು ತುರೀಯ ಎಂಬ ಈರ್ವರಲ್ಲಿಯೂ, **ದ್ವೈತಸ್ಯ** = ದ್ವಿತೀಯ ವಸ್ತುವಿನ, **ಅಗ್ರಹಣಂ** = ಜ್ಞಾನವಿಲ್ಲದಿರುವುದು, **ತುಲ್ಯಂ**= ಸಮಾನವಾಗಿದೆ. ಆದರೆ **ಪ್ರಾಜ್ಞಃ** = ಪ್ರಾಜ್ಞನು, **ಬೀಜ ನಿದ್ರಾಯುತಃ** = ಅವಿದ್ಯಾಜನ್ಯವಾದ ಅಗ್ರಹಣವೆಂಬ ನಿದ್ರೆಯಿಂದ ಕೂಡಿರುತ್ತಾನೆ. **ಸಾ** = ಅವಿದ್ಯೆಯೆಂಬ ಬೀಜವು **ತುರ್ಯೇ**= ತುರೀಯನಲ್ಲಿ, **ನ ವಿದ್ಯತೇ** = ಇಲ್ಲ.

**ವಿವರಣೆ :** ಸುಷುಪ್ತಿಯಲ್ಲಿ ಪ್ರಾಜ್ಞನಿಗೆ ದ್ವಿತೀಯ ವಸ್ತುವಿನ ಅಗ್ರಹಣವಿರುತ್ತದೆ. ಅದಕ್ಕೆ ಕಾರಣಬದ್ಧತ್ವ ಕಾರಣವಾದರೆ, ತುರೀಯನಿಗೂ ದ್ವಿತೀಯ ವಸ್ತುವಿನ ಜ್ಞಾನವಿಲ್ಲವಾದ್ದರಿಂದ ಅವನು ಕಾರಣಬದ್ಧನಾಗಲಿ ಎಂದರೆ ತುರೀಯನೂ ಅವಿದ್ಯಾಯುಕ್ತನಾಗಬೇಕಾಗುತ್ತದೆ ಎಂಬ ಶಂಕೆ ಹುಟ್ಟುತ್ತದೆ. ಅದಕ್ಕೆ ಸಮಾಧಾನ ಹೇಳಲು ಈ ಕಾರಿಕೆ ಬಂದಿದೆ. ಅಗ್ರಹಣವೇ ಅಪ್ರತಿಬೋಧ. ಇದೇ ಅಜ್ಞಾನ ಅಥವಾ ಅವಿದ್ಯೆ. ಇದು ಅನ್ಯಥಾ ಗ್ರಹಣಕ್ಕೆ ಕಾರಣ. ಕಾರಣವೇ ಬೀಜ. ಬೀಜನಿದ್ರಾ = ಅನ್ಯಥಾ ಗ್ರಹಣಕ್ಕೆ ಕಾರಣವಾದ ಅಜ್ಞಾನ. ಇದೇ ಸಂಸಾರಕ್ಕೆ ಬೀಜವಾದ ಅವಿದ್ಯೆ.

ಈ ಅನ್ಯಥಾ ಗ್ರಹಣಕ್ಕೆ ಕಾರಣವಾದ ಅವಿದ್ಯೆಯಿರುವುದರಿಂದ ಪ್ರಾಜ್ಞನು ಮತ್ತೆ ಜಾಗ್ರತ್ತಿಗೆ ಬಂದು ದ್ವೈತವನ್ನು ಸತ್ಯವೆಂದು ಭ್ರಮಿಸಿ ಅನ್ಯಥಾಗ್ರಹಣಕ್ಕೆ ಒಳಗಾಗುತ್ತಾನೆ. ತುರೀಯನಿಗೆ ಯಾವ ಅವಿದ್ಯೆಯ ಸೋಂಕೂ ಇಲ್ಲ. ಅವನು ಸದಾ ಶುದ್ಧವಾದ ದೃಕ್ ಸ್ವರೂಪನಾಗಿರುತ್ತಾನೆ. ಅವನಿಗೆ ದ್ವಿತೀಯ ವಸ್ತುವೇ ಇಲ್ಲವಾದ್ದರಿಂದ ಅಗ್ರಹಣವು ಸಹಜವಾದದ್ದು. ಅನ್ಯಥಾ ಗ್ರಹಣದ ಪ್ರಶ್ನೆಯಂತೂ ಹುಟ್ಟುವುದೇ ಇಲ್ಲ.

ಸುಷುಪ್ತಿಯಲ್ಲಿ ಪ್ರಾಜ್ಞನಿಗೆ ಬೀಜನಿದ್ರೆಯಿರುವುದರಿಂದ ದ್ವೈತವಿದ್ದರೂ ಅಪ್ರತಿಬೋಧವಿರುತ್ತದೆ. ತುರೀಯನಿಗೆ ದ್ವೈತವೇ ಇಲ್ಲದ್ದರಿಂದ ಅದರ ಪ್ರಶ್ನೆಯೇ ಇರುವುದಿಲ್ಲ. ಸುಷುಪ್ತಿಯಿಂದ ಮತ್ತೆ ಜಾಗ್ರತ್ತಿಗೆ ತಳ್ಳಿ ಸಂಸಾರದ ಭ್ರಾಂತಿಗೆ ಬೀಜವಾದ ನಿದ್ರೆ ಬೀಜನಿದ್ರೆ. ನಿದ್ರೆಯೆಂದರೆ ಅಪ್ರತಿಬೋಧ – ಅಜ್ಞಾನ– ಅವಿದ್ಯೆ. ಈ ಬೀಜಾ ವಿದ್ಯೆಯೇ ವ್ಯಾಖ್ಯಾನಕಾರರು ಹೇಳುವ ಮೂಲಾವಿದ್ಯೆ ಯೆಂದು ತಿಳಿಯಬೇಕು.

ಹಿಂದಿನ ಕಾರಿಕೆಯಲ್ಲಿ ಸರ್ವದೃಕ್ ಶಬ್ದಕ್ಕೆ ತುರೀಯನಾದ ಪರಮಾತ್ಮನು ಸರ್ವನೂ ದೃಕ್‌ಸ್ವರೂಪನೂ ಆದವನೆಂದು ಅರ್ಥವನ್ನು ಹೇಳಲಾಗಿತ್ತು. ಆದರೆ **''ಯಃ ಸರ್ವಜ್ಞಃ ಸ ಸರ್ವವಿತ್''** (ಮುಂ.1–1–೯) ಇತ್ಯಾದಿ ಶ್ರುತಿವಚನ ಸ್ವಾರಸ್ಯದಿಂದ ಸರ್ವದ ದೃಕ್ ಸರ್ವದೃಕ್ – ಸರ್ವವನ್ನೂ ನೋಡುವವನು ಎಂದೂ ಅರ್ಥವನ್ನು ಹೇಳಬಹುದು. ಆತನು ನೋಡುವ ಸರ್ವವು ಯಾವುದು? ಜೀವನು ನೋಡುವ ದ್ವೈತಾಭಾಸವೇ ಸರ್ವ. ತುರೀಯನು ಸರ್ವಾಭಾಸದೃಕ್ ಆಗಬಹುದು. ಅವನು ಅವಸ್ಥಾತ್ರಯ ಸಾಕ್ಷಿಯಾದ್ದರಿಂದ ಸರ್ವದೃಕ್.

**ಸ್ವಪ್ನನಿದ್ರಾಯುತಾವಾದ್ಯೌ ಪ್ರಾಜ್ಞಸ್ತ್ವಸ್ವಪ್ನನಿದ್ರಯಾ ।**
**ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ ॥೧೪॥**

**ಆದ್ಯೌ** = ಜಾಗ್ರತ್ತಿನ ವಿಶ್ವ, ಕನಸಿನ ತೈಜಸ – ಇವರಿಬ್ಬರು ಅನ್ಯಥಾಗ್ರಹಣ ವೆಂಬ ಸ್ವಪ್ನ , ಅಗ್ರಹಣವೆಂಬ ನಿದ್ರೆ – ಇವುಗಳಿಂದ ಕೂಡಿರುತ್ತಾರೆ. **ಪ್ರಾಜ್ಞಸ್ತು** = ಸುಷುಪ್ತಿಯಲ್ಲಿರುವ ಪ್ರಾಜ್ಞನು, **ಅಸ್ವಪ್ನನಿದ್ರಯಾ** = ಅನ್ಯಥಾಗ್ರಹಣವೆಂಬ ಸ್ವಪ್ನವಿಲ್ಲದ **ನಿದ್ರಯಾ** = ಅಗ್ರಹಣವೆಂಬ ನಿದ್ರೆಯಿಂದ ಮಾತ್ರ ಕೂಡಿರುತ್ತಾನೆ.

**ನಿಶ್ಚಿತಾಃ** = ತತ್ತ್ವನಿಶ್ಚಯವಿರುವ ಬ್ರಹ್ಮವಿದರು, **ತುರ್ಯೇ** = ತುರೀಯಾತ್ಮ ನಲ್ಲಿ, **ನಿದ್ರಾ** = ಅಗ್ರಹಣವನ್ನು,**ನ ಪಶ್ಯಂತಿ** = ಕಾಣುವುದಿಲ್ಲ, ಚ ಮತ್ತು **ಸ್ವಪ್ನಂ = ಅನ್ಯಥಾಗ್ರಹಣ**ವೆಂಬ ಸ್ವಪ್ನವನ್ನು , **ನೈವ ಪಶ್ಯಂತಿ** = ಕಾಣುವುದೇ ಇಲ್ಲ

ಇದುವರೆಗೆ ಹೇಳಿದುದರ ಉಪಸಂಹಾರವಿದು. ವಿಶ್ವ,ತೈಜಸರು ಕಾರ್ಯಕಾರಣ ಬದ್ಧರು. ಕಾರಣವೆಂದರೆ ಅವಿದ್ಯೆ. ತತ್ತ್ವದ ಅಗ್ರಹಣ. ಇದರಿಂದ ಹುಟ್ಟುವ ಅನ್ಯಥಾಗ್ರಹಣವೆಂಬ ಭ್ರಾಂತಿಯ ಕಾರ್ಯ. ಇವೆರಡೂ ವಿಶ್ವ, ತೈಜಸರಲ್ಲಿದೆ. ಪ್ರಾಜ್ಞನು ಕಾರಣವಾದ ಅಗ್ರಹಣದಿಂದ ಮಾತ್ರ ಬದ್ಧನಾಗಿದ್ದಾನೆ. ಅವನಲ್ಲಿ ಕೇವಲ ಅಜ್ಞಾನವಿದೆ. ಅನ್ಯಥಾಗ್ರಹಣವೆಂಬ ಭ್ರಾಂತಿ ಇಲ್ಲ. ಸದಾ ಪ್ರಜ್ಞವೇ ಸ್ವರೂಪನಾದ ತುರೀಯಾತ್ಮನು ಯಾವುದರಿಂದಲೂ ಬದ್ಧನಲ್ಲ. ಅವನು ಸದಾ ದೃಕ್ ಸ್ವರೂಪನಾಗಿ ಸೂರ್ಯನಂತೆ ಬೆಳಗುತ್ತಲೇ ಇರುತ್ತಾನೆ ಇದು ಬ್ರಹ್ಮಜ್ಞಾನಿಗಳ ನಿಶ್ಚಯವಾಗಿರುತ್ತದೆ.

**ಅನ್ಯಥಾ ಗೃಹ್ಣತಃ ಸ್ವಪ್ನೋ ನಿದ್ರಾ ತತ್ತ್ವಮಜಾನತಃ ।**
**ವಿಪರ್ಯಾಸೇ ತಯೋಃ ಕ್ಷೀಣೇ ತುರೀಯಂ ಪದಮಶ್ನುತೇ ॥೧೫॥**

**ತತ್ತ್ವಂ** = ಪರಮಾರ್ಥವಾದ ಆತ್ಮಸ್ವರೂಪವನ್ನು, **ಅನ್ಯಥಾ** = ತಪ್ಪಾಗಿ, **ಗೃಹ್ಣತಃ** = ತಿಳಿದುಕೊಳ್ಳತಕ್ಕವನಿಗೆ, **ಸ್ವಪ್ನಃ** = ಪೂರ್ವೋಕ್ತವಾದ ಭ್ರಾಂತಿಯೆಂಬ ಸ್ವಪ್ನವು ಕಾಣುತ್ತಿರುವುದು. ಆ ತತ್ತ್ವವನ್ನು, **ಅಜಾನತಃ** = ತಿಳಿಯದೆ ಇರತಕ್ಕವನಿಗೇ **ನಿದ್ರಾ** = ಪೂರ್ವೋಕ್ತವಾದ ನಿದ್ರೆ ಬಂದಿರುತ್ತದೆ. **ತಯೋಃ** = ಕಾರ್ಯ ಕಾರಣಗಳಾದ ಆ ಬಗೆಯ ಸ್ವಪ್ನನಿದ್ರೆಗಳ, **ವಿಪರ್ಯಾಸೇ** = ಅನ್ಯಥಾಗ್ರಹಣ, ಅಗ್ರಹಣಗಳೆಂಬ ವೈಪರೀತ್ಯವು, **ಕ್ಷೀಣೇ** = ಕ್ಷಯಿಸಿ ನಷ್ಟವಾದಾಗ, **ತುರೀಯಂ ಪದಂ** = ತುರೀಯವಾದ ಬ್ರಹ್ಮಪದವನ್ನು, **ಅಶ್ನುತೇ** = ಪಡೆಯುತ್ತಾನೆ.

ಪಂಚಜ್ಞಾನೇಂದ್ರಿಯಗಳೂ ಮನಸ್ಸೂ ಕಾರ್ಯೋನ್ಮುಖವಾದಸ್ಥಿತಿ ಜಾಗ್ರತ್ತು. ಪಂಚಜ್ಞಾನೇಂದ್ರಿಯಗಳೂ ಸುಪ್ತವಾಗಿ ಮನಸ್ಸು ಮಾತ್ರ ಕಾರ್ಯೋನ್ಮುಖವಾದ ಸ್ಥಿತಿ. ಸ್ವಪ್ನ (ಕನಸು). ಎಲ್ಲ ಇಂದ್ರಿಯಗಳೂ ಮನಸ್ಸೂ ಸಹ ಸುಪ್ತವಾಗಿರುವ ಸ್ಥಿತಿ ಸುಷುಪ್ತಿ. ಜಾಗ್ರತ್, ಸ್ವಪ್ನಗಳಲ್ಲಿ ಅನ್ಯಥಾಗ್ರಹಣವು ಪ್ರಧಾನ. ಸುಷುಪ್ತಿಯಲ್ಲಿ ಅಗ್ರಹಣವು (ಏನೂ ತಿಳಿಯದಿರುವುದು) ಮಾತ್ರ ಇರುತ್ತದೆ.ಮೂರು ಅವಸ್ಥೆಗಳಲ್ಲಿಯೂ ತತ್ತ್ವದ ಅಗ್ರಹಣವು ಇದ್ದೇ ಇರುತ್ತದೆ. ಇಂದ್ರಿಯಗಳೂ ಮನಸ್ಸು ಸುಪ್ತವಾಗಿರುವುದರಿಂದ ಸುಷುಪ್ತಿಯಲ್ಲಿ ಅನ್ಯಥಾಗ್ರಹಣ (ದ್ವೈತಜ್ಞಾನ) ಇರುವುದಿಲ್ಲ. ಹೀಗೆ ತತ್ತ್ವದ ಅಜ್ಞಾನ, ಅದರಿಂದಾದ ಭ್ರಮೆ ಇವೆರಡೂ ಮಾನವನಲ್ಲಿರುವ ವಿಪರ್ಯಾಸಗಳು. ತತ್ತ್ವದ ಜ್ಞಾನವಾದಾಗ ಅನ್ಯಥಾಗ್ರಹಣವೆಂಬ ಭ್ರಮೆಯೂ ಹೋಗಿಬಿಡುತ್ತದೆ. ಆಗ ಮಾನವನು ಅವಸ್ಥಾತ್ರಯವನ್ನು ದಾಟಿ **ತುರೀಯ ಸ್ಥಿತಿಯನ್ನು** ಎಂದರೆ ಮೋಕ್ಷವನ್ನು ಪಡೆಯುತ್ತಾನೆ.

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥೧೬॥**

**ಅನಾದಿಮಾಯಯಾ** = ಅನಾದಿ ಕಾಲದಿಂದ ಪ್ರವೃತ್ತವಾದ ಅಗ್ರಹಣ ಅನ್ಯಥಾಗ್ರಹಣವೆಂಬ ಮಾಯೆಯಿಂದ, **ಸುಪ್ತಃ** = ನಿದ್ರಿಸುತ್ತಿರುವ, **ಜೀವಃ** = ಸಂಸಾರಿಯಾದ ಜೀವನು, **ಯದಾ** = ಯಾವಾಗ, **ಪ್ರಬುಧ್ಯತೇ** = ಎಚ್ಚರಗೊಳ್ಳುತ್ತಾನೋ, **ತದಾ** = ಆಗ, ತನ್ನನ್ನು **ಅಜಂ** = ಜನ್ಮರಹಿತನೂ, **ಅನಿದ್ರಂ** = ನಿದ್ರೆಯಿಲ್ಲದವನೂ, **ಅಸ್ವಪ್ನಂ** = ಕನಸು ಕಾಣದವನೂ ಆದ, **ಅದ್ವೈತಂ** = ಅದ್ವಯನಾದ ಆತ್ಮನೆಂಬುದನ್ನು, **ಬುಧ್ಯತೇ** = ತಿಳಿದುಕೊಳ್ಳುತ್ತಾನೆ.

ಸಂಸಾರಿಯಾದ ಜೀವನು ಅನಾದಿಮಾಯೆಗೆ ಒಳಗಾಗಿ ನಿದ್ರಿಸುತ್ತ ದೊಡ್ಡ ಕನಸನ್ನು ಕಾಣುತ್ತಲೇ ಇದ್ದಾನೆ. ಇವನು ನನ್ನ ತಂದೆ, ಇವಳು ತಾಯಿ,ಇವಳು ಮಡದಿ, ಇವನು ನನ್ನ ಮಗ, ಇದು ನನ್ನ ಆಸ್ತಿ, ನನ್ನ ಮನೆ, ನಾನು ಸುಖವಾಗಿ ಇದ್ದೆ ಈಗ ರೋಗದಿಂದ ಕಷ್ಟಪಡುತ್ತಿದ್ದೇನೆ. ಈ ಪ್ರಕಾರವಾದ ಹಲವಾರು ಕನಸುಗಳನ್ನು ಕಾಣುತ್ತಲೇ ಇದ್ದಾನೆ. ಇವನ ಪುಣ್ಯಬಲದಿಂದ ವೇದಾಂತ ತತ್ತ್ವವನ್ನು ಬಲ್ಲ ಪರಮಕಾರುಣಿಕನಾದ ಒಬ್ಬ ಸದ್ಗುರು ದೊರಕುತ್ತಾನೆ. ಆತನು ಈ ಸಂಸಾರಿಯನ್ನು ಉದ್ಧರಿಸುವುದಕ್ಕಾಗಿ ''ಅಯ್ಯಾ, ನೀನು ಹೀಗೆ ಅಜ್ಞಾನದಿಂದ ಪರಿತಪಿಸಬೇಡ, ಪರಮಾರ್ಥವಾಗಿ ನಿನ್ನ ಸ್ವರೂಪವನ್ನೇ ಅರಿತುಕೊಳ್ಳದೇ ನೀನು ಕಷ್ಟಕ್ಕೆ ಒಳಗಾಗಿದ್ದೀಯೆ. **ತತ್ ತ್ವಮಸಿ** = ಆ ಪರಬ್ರಹ್ಮವೇ ನೀನು. ನಿನಗೆ ಹುಟ್ಟು, ಸಾವು, ಸಂಸಾರ–ಯಾವುದೂ ಇಲ್ಲ, ಸರ್ವದಾ ಪ್ರಕಾಶಮಾನವಾದ ಪರಂಜ್ಯೋತಿ ನೀನು'' ಎಂದು ಹಲವು ವಿಧದಲ್ಲಿ ಬೋಧಿಸಿ ಎಚ್ಚರಿಸುತ್ತಾನೆ. ಆಗ ಈ ಜೀವಾತ್ಮನು ತನ್ನ ಅಗ್ರಹಣ, ಅನ್ಯಥಾಗ್ರಹಣಗಳೆರಡನ್ನೂ ಕಳಚಿಕೊಂಡು ಪ್ರಬುದ್ಧನಾಗಿ ತಾನು ಯಾರೆಂಬುದನ್ನು ಅರಿತುಕೊಂಡು ಪರಮಶಾಂತಿಯನ್ನು ಪಡೆಯುತ್ತಾನೆ.

**ಅಜ** = ಜನ್ಮಾದಿ ಷಡ್ ಭಾವವಿಕಾರಗಳಿಲ್ಲದವನು. **ಜಾಯತೇ, ಅಸ್ತಿ, ವರ್ಧತೇ, ಪರಿಣಮತೇ, ಅಪಕ್ಷೀಯತೇ, ನಶ್ಯತಿ**–ಇವು ಆರು ಭಾವ ವಿಕಾರಗಳು.

**ಅನಿದ್ರ** = ಅವಿದ್ಯೆಯೆಂಬ ತಮೋಬೀಜವಿಲ್ಲದವನು.

**ಅಸ್ವಪ್ನಂ** = ಅವಿದ್ಯೆಯೆಂಬ ಅಜ್ಞಾನವಿಲ್ಲದ್ದರಿಂದ ಅನ್ಯಥಾಗ್ರಹಣವೂ ಇಲ್ಲದವನು.

**ಅದ್ವೈತ** = ಅದ್ವೈತನಾದ ತುರೀಯಾತ್ಮ, ಮಾಯಾ ಪ್ರಪಂಚವು ಇಲ್ಲದ್ದರಿಂದ ಅದ್ವೈತ.

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥೧೭॥**

**ಪ್ರಪಂಚಃ** = ಈ ಜಗತ್ತು, **ಯದಿ ವಿದ್ಯೇತ** = ಸತ್ಯವಾಗಿ ಇರುವುದಾದರೆ, **ನಿವರ್ತೇತ** = ನಿವೃತ್ತವಾಗಬೇಕಾದೀತು, **ನ ಸಂಶಯಃ** = ಇದರಲ್ಲಿ ಸಂಶಯ ವಿಲ್ಲ. ಆದರೆ, **ಇದಂ ದ್ವೈತಂ** = ದ್ವೈತಾತ್ಮಕವಾದ ಜಗತ್ತು, **ಮಾಯಾಮಾತ್ರಂ** = ಮಾಯೆಯಿಂದ ಕಲ್ಪಿತವಾದದ್ದು. **ಪರಮಾರ್ಥತಃ** = ಪರಮಾರ್ಥವಾಗಿ ಇರ ತಕ್ಕದ್ದು ಅದ್ವೈತ ಒಂದೇ .

ಅಗ್ರಹಣ, ಅನ್ಯಥಾಗ್ರಹಣಗಳು ಹೋದಮಾತ್ರದಿಂದ ಅದ್ವೈತವು ಹೇಗೆ ಸಿದ್ಧಿಸುತ್ತದೆ? ಎದುರಿಗೆ ಕಾಣುಸುವ ಪ್ರಪಂಚವು ಇರುತ್ತದೆಯಲ್ಲ? ಎಂಬ ಪ್ರಶ್ನೆಗೆ ಈಗ ಸಮಾಧಾನವನ್ನು ಹೇಳುತ್ತಾರೆ. ನಿಜವಾಗಿ ಪ್ರಪಂಚವು ಇದ್ದಿದ್ದರೆ ಅದರ ನಿವೃತ್ತಿ ಹೇಗೆ ಎಂಬ ಪ್ರಶ್ನೆ ಹುಟ್ಟುತ್ತದೆ. ಅದ್ವೈತವು ಸಿದ್ಧಿಸಬೇಕಾದರೆ ಅದು ನಿವೃತ್ತ ವಾಗಲೇಬೇಕು. ಸಂದೇಹವಿಲ್ಲ. ಆದರೆ ವಸ್ತುತಃ ಪ್ರಪಂಚವೇ ಇಲ್ಲ. ಕೇವಲ ಮಾಯೆಯಿಂದ ಈ ಪ್ರಪಂಚವು, ಹಗ್ಗದಲ್ಲಿ ಹಾವು ಕಂಡಂತೆ ಕಾಣಿಸುತ್ತದೆ. ಅದ್ವಯಾತ್ಮನಲ್ಲಿ ಈ ಜಗತ್ತು ಅನ್ಯಥಾಗ್ರಹಣದಿಂದ ಕಾಣಿಸುತ್ತದೆ. ಅದ್ವಯಾತ್ಮನ ಜ್ಞಾನವಾದೊಡನೆ, ಭ್ರಾಂತಿಯಿಂದ ಮೊದಲು ಕಾಣುತ್ತಿದ್ದ ಈ ಜಗತ್ತು ಇರುವುದೇ ಇಲ್ಲ–ಎಂದು ಅಭಿಪ್ರಾಯ.

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥೧೮॥**

**ವಿಕಲ್ಪಃ** = ಗುರು, ಶಿಷ್ಯ, ವೇದಾಂತ ಶಾಸ್ತ್ರ–ಎಂಬ ವಿಭಾಗವೂ **ಕೇನಚಿತ್** = ಯಾರಿಂದಾದರೂ, **ಯದಿ ಕಲ್ಪಿತಃ** = ಕಲ್ಪಿತವಾಗಿದ್ದರೆ **ವಿನಿವ ರ್ತೇತ** = ನಿವೃತ್ತವಾಗಬೇಕಾಗುತ್ತಿತ್ತು. ಆದರೆ, **ಉಪದೇಶಾತ್**= ಗುರೂಪದೇ ಶದ ನಿಮಿತ್ತವಾಗಿ, **ಅಯಂವಾದಃ** = ಗುರು, ಶಿಷ್ಯ, ಶಾಸ್ತ್ರ ಎಂಬ ವಿಭಾಗವು ಕಲ್ಪಿತವಾದದ್ದು. **ಜ್ಞಾತೇ** = (ಉಪದೇಶಕಾರ್ಯವಾದ ಜ್ಞಾನದಿಂದ) ತತ್ತ್ವವು ತಿಳಿ ದ ಮೇಲೆ, **ದ್ವೈತಂ**= ಗುರು, ಶಿಷ್ಯ, ಶಾಸ್ತ್ರ ಎಂಬ ವಿಭಾಗ ಕಲ್ಪನೆಯೂ, **ನ ವಿ ದ್ಯತೇ** = ಇರುವುದಿಲ್ಲ.

ಹಿಂದಿನ ಕಾರಿಕೆಯಲ್ಲಿ ಹೇಳಿದುದನ್ನೇ ಇನ್ನೊಂದು ಬಗೆಯಲ್ಲಿ ದೃಢತೆಗಾಗಿ ಶಂಕಿಸಿ ಸಮಾಧಾನವನ್ನು ಹೇಳಲಾಗುವುದು. ಪ್ರಪಂಚವು ಇಲ್ಲದಿದ್ದರೆ ಹೋಗಲಿ. ಗುರು, ಶಾಸ್ತ್ರ, ಶಿಷ್ಯೋಪದೇಶ – ಎಂಬುದಾದರೂ ಇರಲೇಬೇಕಷ್ಟೆ ಇಲ್ಲದಿದ್ದರೆ ತತ್ತ್ವೋಪದೇಶ ಹೇಗಾಗುತ್ತದೆ. ಈ ವಿಭಾಗವಿದ್ದಾಗ ಅದ್ವೈತವು ಹೇಗೆ ಸಿದ್ಧಿಸುತ್ತದೆ–ಎಂದು ಶಂಕೆ. ಇದಕ್ಕೆ ಸಮಾಧಾನ. ಈ ವಿಕಲ್ಪಗಳನ್ನು ಯಾರಾದ ರೂ ನಿರ್ಮಿಸಿದ್ದರೆ ಅವುಗಳ ನಿವೃತ್ತಿ ಹೇಗೆ ಎಂಬ ಪ್ರಶ್ನೆ ಹುಟ್ಟುತ್ತಿತ್ತು. ಯಾರೂ

ಇವನ್ನು ನಿರ್ಮಿಸಿಲ್ಲ. ಮಾಯಾಮಾತ್ರನಾದ ಪ್ರಪಂಚದಲ್ಲಿ ಗುರು, ಶಿಷ್ಯ, ಶಾಸ್ತ್ರ–ಮುಂತಾದವೂ ಸೇರಿವೆ. ಲೋಕವ್ಯವಹಾರ ವಿರುವವರೆಗೆ ಇವು ಇರುತ್ತವೆ. ತತ್ತ್ವಜ್ಞಾನವಾದ ಮೇಲೆ ಇವೂ ಇರುವುದಿಲ್ಲ. ತತ್ತ್ವೋಪದೇಶವೆಂಬ ಪ್ರಯೋಜನಕ್ಕಾಗಿ ಈ ವಿಭಾಗವಿರುತ್ತದೆ. ಈ ವಿಭಾಗವಿಲ್ಲದಿದ್ದರೆ ತತ್ತ್ವಜ್ಞಾನವೇ ಹುಟ್ಟುವುದಿಲ್ಲ. ಆಗ ಅದ್ವೈತಜ್ಞಾನವಿಲ್ಲದಿರುವುದರಿಂದ ಪ್ರಪಂಚದಂತೆ ಈ ವಿಕಲ್ಪವೂ ಇರುತ್ತದೆ. ಜ್ಞಾನೋದಯವಾದ ಮೇಲೆ ಈ ದ್ವೈತವೇ ಇರುವುದಿಲ್ಲ.

**ಟಿಪ್ಪಣಿ :–** ಕಾರಿಕೆಯಲ್ಲಿರುವ **'ಉಪದೇಶಾತ್'** ಎಂಬ ಶಬ್ದಕ್ಕೆ 'ಉಪದೇಶವೆಂಬ ಫಲಕ್ಕಾಗಿ' ಎಂದು ಅರ್ಥ. ಹಿಂದೆ ಹೇಳಿದ ಮೂರು ವಿಕಲ್ಪಗಳಿಗೆ ಉಪದೇಶವು ಪ್ರಯೋಜನ. ಪ್ರಯೋಜನವೂ ಹೇತು (ಕಾರಣ, ನಿಮಿತ್ತ) ವಾಗಬಹುದು. ಹೇತುವೆನಿಸಿದಾಗ **''ವಿಭಾಷಾ ಗುಣೇಽಸ್ತ್ರಿಯಾಮ್''** ಎಂಬ ಪಾಣಿನಿ ಸೂತ್ರದಿಂದ ಪಂಚಮೀ ವಿಭಕ್ತಿ ಬಂದಿದೆ. ಹೇತು ಪ್ರಯೋಜನವಾಗುವುದಕ್ಕೆ ಉದಾಹರಣೆ ''ಅಧ್ಯಯನಕ್ಕಾಗಿ ಗುರುಕುಲದಲ್ಲಿ ವಾಸಮಾಡುತ್ತಾನೆ''. ಗುರುಕುಲವಾಸಕ್ಕೆ ಹೇತುವೇನು? ಅಧ್ಯಯನ. ಗುರು ಕುಲವಾಸಕ್ಕೆ ಪ್ರಯೋಜನವೇನು? ಅಧ್ಯಯನ.

ಇನ್ನು ಮುಂದಿನವು ಮಾಂಡೂಕ್ಯದ ೮,೯,೧೦,೧೧ನೇ ಮಂತ್ರಗಳಿಗೆ ವ್ಯಾಖ್ಯಾನವಾದ ಕಾರಿಕೆಗಳು.

**ವಿಶ್ವಸ್ಯಾತ್ವವಿವಕ್ಷಾಯಾಮಾದಿಸಾಮಾನ್ಯಮುತ್ಕಟಮ್ ।**
**ಮಾತ್ರಾಸಂಪ್ರತಿಪತ್ತೌ ಸ್ಯಾದಾಪ್ತಿ ಸಾಮಾನ್ಯಮೇವ ಚ ॥೧೯॥**

**ವಿಶ್ವಸ್ಯ**= ವೈಶ್ವಾನರನಿಗೆ **ಅತ್ವವಿವಕ್ಷಾಯಾಂ** = ಆಕಾರತ್ವವನ್ನು ವಿವಕ್ಷೆ ಮಾಡಿದಾಗ, **ಆದಿಸಾಮಾನ್ಯ** = ವೈಶ್ವಾನರ ಮತ್ತು ಆ ಕಾರಗಳಿಗೆ ಆದಿತ್ವವು ಸಮಾನಧರ್ಮವೆಂಬುದು. **ಉತ್ಕಟಂ** = ಉತ್ಕರ್ಷದಿಂದ ಎದ್ದು ಕಾಣುತ್ತದೆ. **ಮಾತ್ರಾ ಸಂಪ್ರತಿಪತ್ತೌ** = ವಿಶ್ವನು ಓಂಕಾರದ ಆದಿಮಾತ್ರೆಯೆಂದು ತಿಳಿದಾಗ, **ಅಪ್ತಿಸಾಮಾನ್ಯಮೇವ ಚ** = ಸರ್ವವ್ಯಾಪ್ತಿಯೆಂಬ ಸಾಮಾನ್ಯ ಧರ್ಮವು ಉತ್ಕರ್ಷದಿಂದ ಎದ್ದು ಕಾಣುತ್ತದೆ.

ವಿಶ್ವನು ಅವಸ್ಥಾತ್ರಯದಲ್ಲಿ ಹೇಗೆ ಮೊದಲನೆಯವನೋ ಹಾಗೆ ಅಕಾರವು ಓಂಕಾರದಲ್ಲಿರುವ ಅಕ್ಷರಗಳಲ್ಲಿ ಮೊದಲನೆಯದು, ವಿಶ್ವನು ವಸ್ತುತಃ ಈಶ್ವರನೇ ಆದ್ದರಿಂದ ವಿಭುವೆಂದು ಸರ್ವವ್ಯಾಪಿಯೆಂದೂ ಛಾಂದೋಗ್ಯದ ವೈಶ್ವಾನರ ವಿದ್ಯೆಯಲ್ಲಿ ಹೇಳಿದೆ (ಛಾಂ.೫–೧೮–೧ಮತ್ತು ೨). ಹಾಗೆಯೇ ಅಕಾರವೂ ಸಮಸ್ತ ವಾಙ್ಮಯವ್ಯಾಪಿಯೆಂದು **'ಅಕಾರೋ ವೈ ಸರ್ವಾವಾಕ್'** (ಐತಾ. ಆರ್. ೨–೩–೧೯) ಎಂದು ಶ್ರುತಿ ಹೇಳುತ್ತದೆ.

ಈ ಜಗತ್ತೆಲ್ಲವೂ ವಾಚ್ಯವಾಚಕರೂಪವಾದದ್ದು. ವಾಚ್ಯವೆಂದರೆ ಅರ್ಥ–ವಸ್ತು. ವಾಚಕವೆಂದರೆ ಶಬ್ದ. ಶಬ್ದವಿಲ್ಲದೆ ಅರ್ಥಪ್ರತೀತಿಯಾಗುವುದಿಲ್ಲ ವಾದ್ದರಿಂದ ಶಬ್ದವು ವ್ಯಾಪಕ. ಅರ್ಥವು ವಾಚ್ಯ. **'ಓಂಕಾರ ಏವ ಸರ್ವಾ ವಾಕ್'** ಇತ್ಯಾದಿ ಶ್ರುತಿವಾಕ್ಯಗಳಿಂದ ಎಲ್ಲ ಶಬ್ದಗಳಿಗೂ ಓಂಕಾರವು ಮೂಲವೆಂದು ಗೊತ್ತಾಗುತ್ತದೆ. **'ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ'** (ಪ್ರಶ್ನ ೫–೨) ಇತ್ಯಾದಿ ಶ್ರುತಿಯು ಪರಾಪರ ಬ್ರಹ್ಮವೇ ಓಂಕಾರವೆಂದು ಹೇಳುತ್ತದೆ. ವಾಚ್ಯವಾಚಕಗಳಿಗೆ ಅಭೇದವನ್ನೂ ಶ್ರುತಿಯೇ ತಿಳಿಸಿದೆ. ಓಂಕಾರವು ಅ, ಉ, ಮ್ ಎಂಬ ವರ್ಣಗಳ ಜೋಡಣೆಯಿಂದ ಆಗಿದೆ. ಆತ್ಮನಿಗೆ ಉಪಾಧಿ ಭೇದದಿಂದ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ಹೆಸರುಗಳಿವೆ. ಓಂಕಾರದ ಮೂರು ಅಕ್ಷರಗಳೂ ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞರೆಂದು ಶ್ರುತಿಯೇ ತಿಳಿಸಿದೆ. ಅಭಿಧಾನಾಭಿಧೇಯಗಳಿಗೆ ಅಭೇದವಿರುವುದರಿಂದ ಇದು ಉಪಪನ್ನವಾಗುತ್ತದೆ. ಈ ಮಾಂಡೂಕ್ಯ ಉಪನಿಷತ್ತಿನಲ್ಲಿ ಒಂದು ಸಲ ಅಭಿಧಾನವನ್ನು ಪ್ರಧಾನ ವಾಗಿಟ್ಟು , ಇನ್ನೊಂದು ಸಲ ಅಭಿಧೇಯವನ್ನು ಪ್ರಧಾನವಾಗಿಟ್ಟು ವರ್ಣಿಸ ಲಾಗಿದೆ. ಇದನ್ನು ಗಮನದಲ್ಲಿಟ್ಟಿರಬೇಕು.

**ತೈಜಸಸ್ಯೋತ್ವವಿಜ್ಞಾನೇ ಉತ್ಕರ್ಷೋ ದೃಶ್ಯತೇ ಸ್ಫುಟಮ್ ।**
**ಮಾತ್ರಾಸಂಪ್ರತಿಪತ್ತೌ ಸ್ಯಾದುಭಯತ್ವಂ ತಥಾವಿಧಮ್ ॥೨೦॥**

**ತೈಜಸಸ್ಯ** = ಸ್ವಪ್ನಸ್ಥಾನದಲ್ಲಿರುವ ತೈಜಸನಿಗೆ, **ಉತ್ವವಿಜ್ಞಾನೇ** = ಉಕಾರತ್ವವನ್ನು ವಿವಕ್ಷೆ ಮಾಡಿದಾಗ, **ಉತ್ಕರ್ಷಃ** = ಅಕಾರಕ್ಕಿಂತ ಮುಂದಿರುವ ಉತ್ಕರ್ಷವು, **ಸ್ಫುಟಂ** = ಸ್ಪಷ್ಟವಾಗಿ, **ದೃಶ್ಯತೇ** = ಕಂಡು ಬರುತ್ತದೆ. **ಮಾತ್ರಾ ಸಂಪ್ರತಿಪತ್ತೌ** = ತೈಜಸನು ಓಂಕಾರದ ದ್ವಿತೀಯ ಮಾತ್ರೆಯೆಂದು ನಿಶ್ಚಯವಾದ ಮೇಲೆ ತೈಜಸ ಮತ್ತು ಉಕಾರಗಳೆರಡರಲ್ಲಿಯೂ ಇರುವ ಒಂದು ವಿಶೇಷವು **ತಥಾವಿಧಂ** = ಸ್ಫುಟವಾಗಿ ಕಾಣುತ್ತದೆ.

ತೈಜಸನು ವಿಶ್ವದ ಮುಂದೆಯೂ ಉಕಾರವು ಅಕಾರದ ಮುಂದೆಯೂ ಇರುವುದರಿಂದ ಇವೆರಡರ ಮಾಧ್ಯಸ್ಥ್ಯವೆಂಬ ಉತ್ಕರ್ಷವು ಸಮಾನವಾಗಿದೆ. ಓಂ ಎಂಬ ರೂಪವಾದಾಗ ಗುಣಸಂಧಿ ಬಂದಿರುವುದರಿಂದ ಉಕಾರದಲ್ಲಿ ಅಕಾರ ಉಕಾರಗಳೆರಡರ ಧರ್ಮವೂ ಇರುತ್ತದೆ. ಹಾಗೆಯೇ ತೈಜಸನಲ್ಲಿ ತತ್ತ್ವದ ಅಗ್ರಹಣ, ಅನ್ಯಥಾಗ್ರಹಣವೆಂಬ ವಿಶ್ವನ ಎರಡು ಧರ್ಮಗಳೂ ಇರುತ್ತವೆ. ಆದ್ದರಿಂದ ಉಕಾರಕ್ಕೂ ತೈಜಸನಿಗೂ ಅಭೇದವೆಂದು ತಿಳಿಯಬೇಕು.

**ಟಿಪ್ಪಣಿ :** ಗುಣಸಂಧಿಯು ಅಕಾರ ಉಕಾರಗಳೆರಡರ ಸ್ಥಾನದಲ್ಲಿ ಬಂದಿರು

ವುದರಿಂದ ಉಭಯ ಧರ್ಮಗಳೂ ಓಕಾರದಲ್ಲಿ ಇರುತ್ತವೆ. ಓಕಾರದ ದ್ವಿತೀಯ ಭಾಗ ಉಕಾರ. ಅವಯವಾವಯವಿಗಳಿಗೆ ಅಭೇದ.

**ಮಕಾರಭಾವೇ ಪ್ರಾಜ್ಞಸ್ಯ ಮಾನಸಾಮಾನ್ಯಮುತ್ಕಟಮ್ ।**
**ಮಾತ್ರಾಸಂಪ್ರತಿಪತ್ತೌ ತು ಲಯಸಾಮಾನ್ಯಮೇವ ಚ ॥೨೧॥**

**ಪ್ರಾಜ್ಞಸ್ಯ** = ಪ್ರಾಜ್ಞನಿಗೆ, **ಮಕಾರಭಾವೇ** = ಮಕಾರತ್ವವನ್ನು ವಿವಕ್ಷೆ ಮಾಡಿದಾಗ, **ಮಾನಸಾಮಾನ್ಯಂ** = ಅವೆರಡಕ್ಕೂ ಇರುವ ಸಾಧಾರಣ ಧರ್ಮವಾದ, ಮಾನವು (ಅಳತೆಯು), **ಉತ್ಕಟಂ** = ಎದ್ದು ಕಾಣುತ್ತದೆ. **ಮಾತ್ರಾಸಂಪ್ರತಿಪತ್ತೌ ತು** = ಪ್ರಾಜ್ಞನು ಓಂಕಾರದ ತೃತೀಯ ಮಾತ್ರೆಯೆಂದು ನಿಶ್ಚಯವಾದಾಗ, **ಲಯಸಾಮಾನ್ಯಮೇವ ಚ** = ಮಾನಲಯಗಳೆರಡರಲ್ಲಿಯೂ ಇರುವ ಸಾಧಾರಣ ಧರ್ಮವು, ಸ್ಪಷ್ಟವಾಗಿ ಕಾಣುತ್ತದೆ.

ಪ್ರಾಜ್ಞನಿಗೂ ಮಕಾರಕ್ಕೂ ಮಾನಲಯಗಳು ಸಾಧಾರಣ ಧರ್ಮಗಳು. ಮಾನವೆಂದರೆ ಮಿತಿ–ಅಳತೆ. ಸುಷುಪ್ತಿಯಲ್ಲಿ ವಿಶ್ವ, ತೈಜಸರು ಪ್ರಾಜ್ಞನಲ್ಲಿ ಸೇರಿ ಹೋದಂತೆಯೂ ಜಾಗ್ರತ್ತಿನಲ್ಲಿ ವಿಶ್ವನೂ ಸ್ವಪ್ನದಲ್ಲಿ ತೈಜಸನು ಪ್ರಾಜ್ಞನಿಂದ ಹೊರಗೆ ಬಂದಂತೆಯೂ ಕಾಣುತ್ತಾರೆ. ಅಕ್ಕಿಯನ್ನು ಅಳೆಯುವಾಗ ಪಕ್ಕಾ ಸೇರಿನಲ್ಲಿ ಅಕ್ಕಿಯು ಸೇರಿಕೊಂಡು ಅನಂತರ ಹೊರಗೆ ಹಾಕಿದಾಗ ಅಕ್ಕಿಯು ಹೊರ ಬರುತ್ತದೆ. ಹಾಗೆ ಪ್ರಾಜ್ಞನು ವಿಶ್ವತೈಜಸರನ್ನು ಅಳತೆ ಮಾಡುತ್ತಾನೋ ಎಂಬಂತೆ ತೋರುತ್ತದೆ. ಅಂತೆಯೇ ಮಕಾರವನ್ನು ಉಚ್ಚರಿಸುವಾಗ ಹಿಂದಿನ ಅಕಾರ ಉಕಾರಗಳು ಮಕಾರದಲ್ಲಿ ಸೇರಿಹೋದಂತೆಯೂ ಆಮೇಲೆ ಹೊರ ಬಂದಂತೆಯೂ ಕಾಣಿಸುತ್ತದೆ. ಲಯ ವೆಂದರೆ ಲೀನವಾಗುವುದು. ಓಂ ಎಂದು ಉಚ್ಚರಿಸಿದಾಗ ವಿಶ್ವತೈಜಸರು ಮಕಾರ ದಲ್ಲಿಯೂ ಸುಷುಪ್ತಿಯಲ್ಲಿ ವಿಶ್ವತೈಜಸರು ಪ್ರಾಜ್ಞನಲ್ಲಿಯೂ ಲಯ ಹೊಂದಿದಂತೆ ತೋರುವುದು. ಆದ್ದರಿಂದ ಮಕಾರ ಪ್ರಾಜ್ಞರಿಗೆ ಹೋಲಿಕೆ.

ಈಗ ಅಕಾರ, ಉಕಾರ, ಮಕಾರಗಳಿಗೂ ವಿಶ್ವ, ತೈಜಸ, ಪ್ರಾಜ್ಞರಿಗೂ ಏಕತ್ವವನ್ನು ತಿಳಿಯುವುದರಿಂದ ಆಗುವ ಫಲವೇನು ಎಂಬುದನ್ನು ಮಾಂಡೂಕ್ಯೋಪನಿಷತ್ತಿನ ೯–೧೦–೧೧ನೆಯ ಮಂತ್ರಗಳಲ್ಲಿ ತಿಳಿಸಲಾಗಿದೆ. ಅದನ್ನೀಗ ಸಂಕ್ಷೇಪವಾಗಿ ಬರೆಯಲಾಗುವುದು.

೧. ವಿಶ್ವ ಮತ್ತು ಅಕಾರಗಳ ಐಕ್ಯಜ್ಞಾನವನ್ನು ಪಡೆದವನು ಮಾನವರಲ್ಲಿ ಅಗ್ರಗಣ್ಯನಾಗಿ ಪ್ರಥಮನೆನಿಸುತ್ತಾನೆ. ತನ್ನ ಎಲ್ಲ ಇಷ್ಟಾರ್ಥಗಳನ್ನೂ ಗಳಿಸುತ್ತಾನೆ.

೨. ತೈಜಸ ಮತ್ತು ಉಕಾರಗಳ ಐಕ್ಯಜ್ಞಾನವನ್ನು ಪಡೆದವನು ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಾನೆ. ದೊಡ್ಡ ವಿದ್ವಾಂಸನಾಗುತ್ತಾನೆ. ಸರ್ವರಿಗೂ – ಶತ್ರುಗಳಿಗೂ

ಸಹ ಪ್ರಿಯನಾಗುತ್ತಾನೆ. ಈತನ ವಂಶದಲ್ಲಿ ತತ್ತ್ವಜ್ಞಾನಿಯಲ್ಲದವನು ಜನಿಸುವುದಿಲ್ಲ.

೩. ಪ್ರಾಜ್ಞ ಮತ್ತು ಮಕಾರಗಳ ಐಕ್ಯಜ್ಞಾನವನ್ನು ಪಡೆದವನು ಜಗತ್ತಿನ ಸರ್ವಸ್ವರೂಪವನ್ನೂ ಅರಿತವನಾಗಿ, ಈ ಜಗತ್ತಿನ ಕಾರಣಾತ್ಮನೂ ಆಗಿಬಿಡುತ್ತಾನೆ.

ಇವೆಲ್ಲವೂ ಓಂಕಾರದ ಮಹಿಮೆಯನ್ನು ಸ್ತುತಿಸುವುದಕ್ಕಾಗಿ ಹೇಳಿದ ಅರ್ಥವಾದಗಳು. ಓಂಕಾರಕ್ಕೆ ಅಭಿನ್ನವಾದ ಪರಬ್ರಹ್ಮವನ್ನು ತಿಳಿದವನು ತತ್ತ್ವಜ್ಞಾನಿ ಯೆನಿಸಿಕೊಳ್ಳುತ್ತಾನೆ ಮತ್ತು ಅವನು ಮುಕ್ತನಾಗುತ್ತಾನೆ ಎಂಬುದು ಮುಖ್ಯ ತಾತ್ಪರ್ಯವಾಗಿದೆ.

**ತ್ರಿಷು ಧಾಮಸು ಯಸ್ತುಲ್ಯಂ ಸಾಮಾನ್ಯಂ ವೇತ್ತಿ ನಿಶ್ಚಿತಃ ।**
**ಸ ಪೂಜ್ಯಃ ಸರ್ವಭೂತಾನಾಂ ವಂದ್ಯಶ್ಚೈವ ಮಹಾಮುನಿಃ ॥೨೨॥**

ಯಾವಾತನು ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಸ್ಥಾನಗಳಲ್ಲಿಯೂ, ವಿಶ್ವ ತೈಜಸ ಪ್ರಾಜ್ಞರಿಗೂ ಅ ಉ ಮ್ ಎಂಬ ಮಾತ್ರೆಗಳಿಗೂ ಸಮಾನವಾದ ಸಾಮಾನ್ಯಧರ್ಮವನ್ನು ಇದು ಹೀಗೆಯೇ ಎಂದು ನಿಶ್ಚಯಿಸಿ ತಿಳಿದಿರುತ್ತಾನೋ ಆತನು ಸಮಸ್ತ ಜನರಿಗೂ ವಂದನೀಯನೂ ಪೂಜಾರ್ಹನೂ ಆದ ಬ್ರಹ್ಮಜ್ಞನೇ ಆಗುತ್ತಾನೆ.

ಇದು ಫಲಶ್ರುತಿ. ಒಬ್ಬ ಆತ್ಮನೇ ಅವಸ್ಥಾಭೇದಗಳಿಗೆ ಸಾಕ್ಷಿಯಾಗಿ ವಿಶ್ವ, ತೈಜಸ, ಪ್ರಾಜ್ಞರೆಂಬ ಹೆಸರುಗಳನ್ನು ಪಡೆದಿದ್ದಾನೆ. ಈತನೇ ಜೀವಸಂಬಂಧಿ ದೇಹಾದ್ಯುಪಾಧಿಗಳಿಲ್ಲದೆ, ಸ್ವರೂಪಾವಸ್ಥೆಯಲ್ಲಿದ್ದು ಮಾಯಾವಿಶಿಷ್ಟನಾಗಿ ಚೈತನ್ಯ ಪ್ರಧಾನನಾದಾಗ ಈಶ್ವರ ಎನಿಸಿಕೊಳ್ಳುತ್ತಾನೆ.

ಈತನು ಸರ್ವೇಶ್ವರ, ಜಗದ್ಯೋನಿ, ಸರ್ವಜ್ಞ, ಅಂತರ್ಯಾಮಿ, ಸರ್ವಪ್ರಾಣಿಗಳನ್ನೂ ಸೃಜಿಸತಕ್ಕವನು ಮತ್ತು ಅವುಗಳ ಲಯಕರ್ತ.

**ಅಕಾರೋ ನಯತೇ ವಿಶ್ವಮುಕಾರಶ್ಚಾಪಿ ತೈಜಸಮ್ ।**
**ಮಕಾರಶ್ಚ ಪುನಃ ಪ್ರಾಜ್ಞಂ ನಾಮಾತ್ರೇ ವಿದ್ಯತೇ ಗತಿಃ ॥೨೩॥**

**ಅಕಾರಃ** = ಓಂಕಾರದ ಮೊದಲನೆಯ ಮಾತ್ರೆಯಾದ ಅಕಾರವು, ಧ್ಯಾತೃವನ್ನು, **ವಿಶ್ವಂ** = ವಿಶ್ವನೊಡನೆ, **ನಯತೇ** = ಸೇರಿಸುತ್ತದೆ. **ಉಕಾರಃ** = ಉಕಾರವು, **ತೈಜಸಂ** = ತೈಜಸನೊಡನೆ, **ನಯತೇ** = ಸೇರಿಸುತ್ತದೆ. **ಮಕಾರಃ** = ಮಕಾರವು, **ಪ್ರಾಜ್ಞಂ** = ಪ್ರಾಜ್ಞನೊಡನೆ ಸೇರಿಸುತ್ತದೆ. **ಅಮಾತ್ರೇ** = ಯಾವ ಮಾತ್ರೆಯೂ ಇಲ್ಲದ ಓಂಕಾರಾತ್ಮಕ ಪರಬ್ರಹ್ಮದಲ್ಲಿ ವ್ಯವಸ್ಥಿತನಾದವನಿಗೆ, **ಗತಿಃ** = ಮುಂದೆ ಗಮನವು, **ನ** = ಇರುವುದಿಲ್ಲ.

'ನಯತೇ' ಎಂಬಲ್ಲಿರುವ 'ನೀ' ಧಾತು ದ್ವಿಕರ್ಮಕವಾದ್ದರಿಂದ 'ಧ್ಯಾತೃ' ಎಂಬ ಇನ್ನೊಂದು ಕರ್ಮಪದವನ್ನು ಪ್ರಕೃತೋಚಿತವಾಗಿ ಅಧ್ಯಾಹಾರ ಮಾಡಿಕೊಳ್ಳಬೇಕು. ಇದುವರೆಗೆ ಹೇಳಿದ ಹಾಗೆ ವಿಶ್ವಾದಿ ಪಾದಗಳೂ ಅಕಾರಾದಿ ಮಾತ್ರೆಗಳೂ ಉಭಯದಲ್ಲಿರುವ ಸಾಮಾನ್ಯ ಧರ್ಮಗಳಿಂದ ಒಂದೇ ಆಗಿವೆಯೆಂದು ನಿಶ್ಚಯಿಸಿ ಯಾವನು ಓಂಕಾರವನ್ನು ಧ್ಯಾನಿಸುತ್ತಾನೋ ಅವನಿಗಾಗುವ ಫಲವನ್ನಿಲ್ಲಿ ಹೇಳಲಾಗಿದೆ. ಅಕಾರವೇ ವಿಶ್ವವೆಂದು ಧ್ಯಾನಿಸತಕ್ಕವನು ವೈಶ್ವಾನರನನ್ನು ಸೇರಿಕೊಳ್ಳುತ್ತಾನೆ. ಉಕಾರವನ್ನು ತೈಜಸನೆಂದು ಧ್ಯಾನಿಸತಕ್ಕವನು ತೈಜಸನಾದ ಹಿರಣ್ಯಗರ್ಭನಾಗುತ್ತಾನೆ. ಮಕಾರವನ್ನು ಧ್ಯಾನಿಸತಕ್ಕವನು ಪ್ರಾಜ್ಞನೆಂಬ ಅವ್ಯಾಕೃತ ಬ್ರಹ್ಮನಾಗುತ್ತಾನೆ. ಮಾತ್ರಾರಹಿತವಾದ ಓಂಕಾರವೇ ಪರಬ್ರಹ್ಮವೆಂದು ಧ್ಯಾನಿಸತಕ್ಕವನು ಸ್ವತಃ ಪರಬ್ರಹ್ಮವೇ ಆಗಿಬಿಡುವುದರಿಂದ ಇನ್ನೂ ಮೇಲೆ ಹೋಗಬೇಕಾದ್ದಿಲ್ಲ ಎಂದು ಅಭಿಪ್ರಾಯ.

ಈ ಶ್ಲೋಕದಲ್ಲಿ ಪ್ರಣವೋಪಾಸನೆಯ ಫಲವನ್ನು ಸೋಪಾನಕ್ರಮದಲ್ಲಿ ತಿಳಿಸಿದೆ. ಕ್ರಮವಾಗಿ ಅಜ್ಞಾನವು ಕ್ಷೀಣಿಸುತ್ತ ಹೋಗುವುದು. ಮಕಾರವು ವಸ್ತುತಃ ಅರ್ಧಮಾತ್ರೆ. ಅಜ್ಞಾನದ ಲೇಶವನ್ನು ಅದು ಸೂಚಿಸುತ್ತದೆ. ಮೂರನೆಯ ಅವಸ್ಥೆ ಸುಷುಪ್ತಿಯಲ್ಲಿ ಆತ್ಮನು ಆನಂದಮಯನಾಗಿ ತತ್ತ್ವಜ್ಞಾನಿಯಾದರೂ ಬೀಜವಾದ ಅವಿದ್ಯೆಯನ್ನು ಸುಟ್ಟುಹಾಕಿ ಬ್ರಹ್ಮಭಾವವನ್ನು ಪಡೆದಿರುತ್ತಾನೆ. ಆದ್ದರಿಂದ ಮುಕ್ತನಿಗೆ ಪುನರ್ಜನ್ಮವಿಲ್ಲ.

ಇನ್ನು ಇಲ್ಲಿರುವ ಕಾರಿಕೆಗಳು –

**ಓಂಕಾರಂ ಪಾದಶೋ ವಿದ್ಯಾತ್ ಪಾದಾ ಮಾತ್ರಾ ನ ಸಂಶಯಃ ।**
**ಓಂಕಾರಂ ಪಾದಶೋ ಜ್ಞಾತ್ವಾ ನ ಕಿಂಚಿದಪಿ ಚಿಂತಯೇತ್ ॥೨೪॥**

**ಓಂಕಾರಂ** = ಓಂಕಾರವನ್ನು, **ಪಾದಶಃ** = ಒಂದೊಂದು ಮಾತ್ರೆಯೂ ಆತ್ಮನ ಯಾವ ಪಾದವೆಂಬುದನ್ನು ವಿಂಗಡಿಸಿ, **ವಿದ್ಯಾತ್** = ತಿಳಿದುಕೊಳ್ಳಬೇಕು. ಏಕೆಂದರೆ, **ಪಾದಾಃ** = ಆತ್ಮವಿಶ್ವಾದಿ ಪಾದಗಳೇ **ಮಾತ್ರಾಃ** = ಓಂಕಾರದ ಅಕಾರಾದಿ ಮಾತ್ರೆಗಳು. ಈ ಮಾತ್ರೆಗಳೇ ವಿಶ್ವಾದಿ ಪಾದಗಳು. **ನ ಸಂಶಯಃ** = ಇದರಲ್ಲಿ ಸಂಶಯವಿಲ್ಲ. **ಓಂಕಾರಂ** = ಓಂಕಾರವನ್ನು, **ಪಾದಶಃ** = ಯಾವ ಪಾದವು ಯಾವ ಮಾತ್ರೆಯೆಂಬುದನ್ನು ವಿಂಗಡಿಸಿ ಕ್ರಮವಾಗಿ ಓಂಕಾರಸ್ವರೂಪವನ್ನು, **ಜ್ಞಾತ್ವಾ** = ತಿಳಿದ ಮೇಲೆ, **ನ ಕಿಂಚಿದಪಿ ಚಿಂತಯೇತ್** = ಯಾವ ಇಹಪರ ವಿಷಯವನ್ನೂ ಚಿಂತಿಸಬೇಕಾದ್ದಿಲ್ಲ.

ಓಂಕಾರದ ಮಾತ್ರಾವಿಭಾಗವು ಜನಸಾಮಾನ್ಯರಿಗೆ ಸ್ಪಷ್ಟವಾಗಿ ತಿಳಿಯುತ್ತದೆ.

ಅಷ್ಟು ಸುಲಭವಾಗಿ ಆತ್ಮನ ಪಾದವಿಭಾಗವು ತಿಳಿಯುವುದಿಲ್ಲ. ಆದ್ದರಿಂದ ಅಭಿಧಾನಾಭಿಧೇಯಗಳನ್ನು ಜೊತೆ ಜೊತೆಯಾಗಿ ಸೇರಿ ಆತ್ಮನ ಸತ್ಯಸ್ವರೂಪವನ್ನು ಬೋಧಿಸಿ, ಜೀವಾತ್ಮ–ಪರಮಾತ್ಮರ ಐಕ್ಯದ ಕಡೆಗೆ ಉಪನಿಷತ್ತು ಬೆರಳು ಮಾಡಿ ತೋರಿಸಿದೆ. ವಿಶ್ವನೇ ತೈಜಸ, ತೈಜಸನೇ ಪ್ರಾಜ್ಞ, ಪ್ರಾಜ್ಞನೇ ತುರೀಯ. ಆ ತುರೀಯನೇ ನಾನು ಎಂಬುದನ್ನು ಅರಿತಾಗ ಮನುಷ್ಯನು ಕೃತಾರ್ಥನಾಗುತ್ತಾನೆ. ಸ್ವತಃ ಸಚ್ಚಿದಾನಂದಸ್ವರೂಪನಾದಾಗ ಇಹಪರಗಳಿಂದ ಆಗಬೇಕಾದ್ದು ಇಲ್ಲ. ಅವನ ದೃಷ್ಟಿಯಲ್ಲಿ ಇಹಪರಗಳೇ ಇಲ್ಲ. ಅವನು ಯಾವುದಕ್ಕಾಗಿ ಚಿಂತಿಸ ಬೇಕಾಗಿದೆ?

**ಯುಂಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಮ್ ।**
**ಪ್ರಣವೇ ನಿತ್ಯಯುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥೨೫॥**

**ಪ್ರಣವೇ** = ಪ್ರಣವಸ್ವರೂಪನಾದ ಆತ್ಮನಲ್ಲಿ, **ಚೇತಃ** = ಮನಸ್ಸನ್ನು, **ಯುಂಜೀತ** = ತೊಡಗಿಸಿರಬೇಕು. **ಪ್ರಣವಃ** = ಪ್ರಣವವು, ನಿರ್ಭಯಂ **ಬ್ರಹ್ಮ** = ಭಯದ ಸುಳಿವಿಲ್ಲದ **ಪ್ರಣವೇ ನಿತ್ಯಯುಕ್ತಸ್ಯ** = ಪ್ರಣವದಲ್ಲಿ ಸದಾ ಆತ್ಮಭಾವನೆಯಿಂದ ಯುಕ್ತನಾದವನಿಗೆ, **ಕ್ವಚಿತ್** = ಎಲ್ಲಿಯೂ ಯಾವುದ ರಿಂದಲೂ, **ಭಯಂ** = ಭಯವು, **ನ ವಿದ್ಯತೇ** = ಇರುವುದಿಲ್ಲ.

ಓಂಕಾರವು ಪೂರ್ವೋಕ್ತ ರೀತಿಯಂತೆ, ತುರೀಯ ಬ್ರಹ್ಮವೇ ಆಗಿದೆ. ಅದನ್ನು ಸದಾ ಧ್ಯಾನಿಸುತ್ತಿರಬೇಕು. "**ಓಮಿತ್ಯಾತ್ಮಾನಂ ಯುಂಜೀತ**" (ತೈ.ನಾ.೭೯) ಎಂದು ಶ್ರುತಿ ಇದೆ. ಯುಂಜೀತ ಎಂಬುದು ವಿಧಿಯಲ್ಲ. ಬ್ರಹ್ಮವೇ ಆಗಿರತಕ್ಕವನಿಗೆ ಯಾವ ವಿಧಿಯೂ ಇಲ್ಲ ಎಂದು ಕೆಲವರ ಅಭಿಪ್ರಾಯವಿದೆ. ಆತ್ಮಧ್ಯಾನದಲ್ಲಿ ತೊಡಗಿರುತ್ತಾನೆ ಎಂದು ಯುಂಜೀತ ಶಬ್ದದ ಅರ್ಥವನ್ನು ಆಗ ಹೇಳಬೇಕು. '**ದ್ವಿತೀಯಾದ್ವೈ ಭಯಂ ಭವತಿ**' ಎಂಬ ಶ್ರುತಿವಚನದಂತೆ ಎರಡನೆಯ ವಸ್ತುವಿದ್ದರೆ ಭಯ ಬಂದೀತು. ಬ್ರಹ್ಮವು ಅದ್ವಿತೀಯವಾದ್ದರಿಂದ ಅದಕ್ಕೆ ಭಯ ಬರುವುದಿಲ್ಲ. '**ಅಭಯಂ ವೈ ಬ್ರಹ್ಮ**' (ಬೃಹ. ೪–೪–೨೫) ಎಂದು ಶ್ರುತಿಯೂ ಇದೆ.

**ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಃ ಸ್ಮೃತಃ ।**
**ಅಪೂರ್ವೋಽನಂತರೋಽಬಾಹ್ಯೋಽನಪರಃ ಪ್ರಣವೋಽವ್ಯಯಃ॥೨೬॥**

**ಪ್ರಣವಃ** = ಪ್ರಣವವು, **ಅಪರಂ ಬ್ರಹ್ಮ** = ಅಪರಬ್ರಹ್ಮವಾಗಿದೆ. **ಪ್ರಣವಶ್ಚ ಪರಃ ಸ್ಮೃತಃ** = ಪ್ರಣವವು ಪರಬ್ರಹ್ಮವಾದ ಪರಮಾತ್ಮನೆಂದೂ ಸ್ಮೃತವಾಗಿದೆ. **ಅಪೂರ್ವಃ** = ಈ ಪರಮಾತ್ಮನಿಗೆ ಪೂರ್ವದಲ್ಲಿರುವ ಕಾರಣವಿಲ್ಲವಾದ್ದರಿಂದ ಅಪೂರ್ವನು. **ಅನಂತರಃ** = ಅಂತರವೆಂದರೆ ಭಿನ್ನ

ಜಾತೀಯವಾದ ವಸ್ತು. ಅಂತರವಿಲ್ಲದವನು. **ಅಬಾಹ್ಯಃ** = ಬಾಹ್ಯವಾದ ಯಾವ ವಸ್ತುವೂ ಇಲ್ಲದವನು. **ಅನಪರಃ** = ಈತನಿಂದ ಹುಟ್ಟುವ ಇನ್ನೊಂದು ಕಾರ್ಯವಸ್ತು ವಿಲ್ಲದವನು. **ಅವ್ಯಯಃ** = ನಾಶವಿಲ್ಲವಾದ್ದರಿಂದ ಶಾಶ್ವತನು.

ಪ್ರಣವದಿಂದ ಲಕ್ಷ್ಯನಾದ ಪರಮಾತ್ಮನು ಪರಾಪರಬ್ರಹ್ಮವೆರಡೂ ಆಗಿದ್ದಾನೆ. ಪರಬ್ರಹ್ಮವೆಂದರೆ ಶುದ್ಧಬ್ರಹ್ಮ. ಯಾವ ಉಪಾಧಿಯೂ ಇಲ್ಲದವನು. ಅಪರಬ್ರಹ್ಮವೆಂದರೆ ಮಾಯಾವಿಶಿಷ್ಟನಾದವನು. ಈತನು ಮಂದಾಧಿಕಾರಿಗಳಿಗೂ ಮಧ್ಯಮಾಧಿಕಾರಿಗಳಿಗೂ ಉಪಾಸ್ಯನಾದವನು. ಶಿವ, ವಿಷ್ಣು ಮುಂತಾದ ಹೆಸರು ಗಳನ್ನೂ ವಿವಿಧ ರೂಪಾಕೃತಿಗಳನ್ನೂ ಧರಿಸತಕ್ಕವನು. **''ಏತದ್ವೈ ಸತ್ಯಕಾಮ ಪರಂ ಚ ಅಪರಂ ಚ ಬ್ರಹ್ಮ ಯದೋಂಕಾರಃ''** (ಪ್ರಶ್ನ ೫–೨) ಎಂದು ಶ್ರುತಿ ಇದೆ. ಬಾಹ್ಯಾಭ್ಯಂತರಗಳಿಲ್ಲದವನೆಂದರೆ ಸೈಂಧವಘನದಂತೆ ಅಖಂಡೈಕರಸ ನೆಂದರ್ಥ. **''ಸೈಂಧವಘನ''** ಎಂದು ಬೃಹದಾರಣ್ಯಕದಲ್ಲಿದೆ (೪–೫–೧೩).

**ಸರ್ವಸ್ಯ ಪ್ರಣವೋ ಹ್ಯಾದಿರ್ಮಧ್ಯಮಂತಸ್ತಥೈವ ಚ ।**
**ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನಂತರಮ್** ॥೨೭॥

ಪ್ರಣವಸ್ವರೂಪನಾದ ಆತ್ಮನು ಆಕಾಶವೇ ಮೊದಲಾದ ಸಮಸ್ತ ಪ್ರಪಂಚಕ್ಕೆ ಆದಿಯೂ ಮಧ್ಯವೂ ಅಂತವೂ ಆಗಿದ್ದಾನೆ. ಈ ರೀತಿಯಾಗಿ ಪ್ರಣವಾತ್ಮನನ್ನು ತಿಳಿದು, ಒಡನೆಯೇ ಪರಮಾರ್ಥ ಬ್ರಹ್ಮಸ್ವರೂಪವನ್ನು ಪಡೆಯುತ್ತಾನೆ.

ಆತ್ಮನು ಪ್ರಜ್ಞಾನಘನನೆಂದರೆ ಆತ್ಮನ ಒಳಗೂ ಹೊರಗೂ ಇನ್ನೊಂದು ವಸ್ತುವೇ ಇಲ್ಲವೆಂದರ್ಥ. ಆಗ ಗಗನಾದಿ ಪ್ರಪಂಚಕ್ಕೆ ಅವಕಾಶವೇ ಇಲ್ಲ. ಆದರೆ ಪ್ರಪಂಚವು ಕಾಣುತ್ತಿರುವುದಲ್ಲವೆ? ಹೌದು; ಆದ್ದರಿಂದಲೇ ಇದು ಮಾಯಾ ಕಲ್ಪಿತ ವೆಂದೂ ಸತ್ಯವಾದ ಇನ್ನೊಂದು ವಸ್ತುವಿರಲು ಸಾಧ್ಯವೇ ಇಲ್ಲವೆಂದೂ ಸಿದ್ಧ ವಾಗುತ್ತದೆ. ಈ ಬಗೆಯ ಮಾಯೆಯನ್ನು ಪರಮಾತ್ಮನು ತನ್ನಲ್ಲಿಯೇ ಬೀಸಿ ಈ ಪ್ರಪಂಚಕ್ಕೆ ತಾನೇ ಆದಿಮಧ್ಯಾಂತವಾಗಿದ್ದಾನೆ. ಮಾಯಾವಿಯು ಕಲ್ಪಿಸಿದ ಆನೆ, ರಜ್ಜುಸರ್ಪ, ಮರಳುಗಾಡಿನಲ್ಲಿ ದೂರದಿಂದ ಕಾಣುವ ಮೃಗತೃಷ್ಣಿಕೆ, ಸ್ವಪ್ನ ಪ್ರಪಂಚ –ಮೊದಲಾದವುಗಳಂತೆ ಅವಿದ್ಯೆಯಿಂದ ಕಾಣತಕ್ಕ ವಸ್ತುಗಳಿವು ಎಂದು ಅದ್ವೈತದ ಸಿದ್ಧಾಂತವಿದೆ. ಇದನ್ನು ಸಂಶಯಲೇಶವೂ ಇಲ್ಲದಂತೆ ತಿಳಿದು ಪ್ರಣವಾತ್ಮನ ಸ್ವರೂಪವನ್ನರಿತವನು ಕೂಡಲೇ ಮುಕ್ತನಾಗುತ್ತಾನೆ. ತಿಳಿದವನ ಸಕಲ ಕರ್ಮಗಳನ್ನೂ ಜ್ಞಾನಾಗ್ನಿಯು ಸುಟ್ಟು ಭಸ್ಮ ಮಾಡಿದರೂ ಪ್ರಾರಬ್ಧ ಕರ್ಮ ವೊಂದು ಉಳಿದೇ ಇರುತ್ತದೆ. ಆದರೂ ಬ್ರಹ್ಮವನ್ನರಿತೊಡನೆ ಅವನು ಮುಕ್ತ ನೆನ್ನಲು ಬಾಧೆಯೇನೂ ಇಲ್ಲ. ಶರೀರವಿದ್ದರೂ ಆತನು ಜೀವನ್ಮುಕ್ತನೇ ಎಂದು ತಿಳಿಯಬೇಕು.

**ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯ ಹೃದಿ ಸಂಸ್ಥಿತಮ್ ।**
**ಸರ್ವವ್ಯಾಪಿನಮೋಂಕಾರಂ ಮತ್ವಾ ಧೀರೋ ನ ಶೋಚತಿ ॥೨೮॥**

**ಸರ್ವಸ್ಯ** = ಸರ್ವಪ್ರಾಣಿಗಳ, **ಹೃದಿ** = ಹೃದಯದಲ್ಲಿ, **ಸ್ಥಿತಂ** = ಇರತಕ್ಕ **ಈಶ್ವರಂ** = ಈಶ್ವರನನ್ನು, **ಪ್ರಣವಂ** = ಪ್ರಣವವೆಂದು, **ವಿದ್ಯಾತ್** = ತಿಳಿಯಬೇಕು. **ಸರ್ವವ್ಯಾಪಿನಂ** = ಸರ್ವವ್ಯಾಪಿಯಾದ, **ಓಕಾರಂ** = ಓಂಕಾರವನ್ನು, ಸಂಸಾರಿಯಲ್ಲವೆಂದೂ ಆತನು ನಾನೇ ಆಗಿದ್ದೇನೆಂದೂ **ಧೀರಃ** = ಬುದ್ಧಿಶಾಲಿಯು **ಮತ್ವಾ** = ತಿಳಿದ ಮೇಲೆ **ನ ಶೋಚತಿ** = ಎಂದೂ ಶೋಕಿಸುವುದಿಲ್ಲ.

ಪ್ರಣವವೇ ಈಶ್ವರ. ಆತನು ಆಕಾಶದಂತೆ ಸರ್ವವ್ಯಾಪಿಯಾಗಿರುವುದರಿಂದ ಸಕಲ ಪ್ರಾಣಿವರ್ಗದ ಹೃದಯದಲ್ಲಿ ಸ್ಥಿತನಾಗಿದ್ದಾನೆ. **"ಏಷದೇವೋ ವಿಶ್ವಕರ್ಮಾ ಮಹಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ"** (ಶ್ವೇತಾ. ೪-೧೭). ತಾನು ಈಶ್ವರನೆಂದು ಅಸಂಸಾರಿ ಎಂದೂ ನಿಶ್ಚಯಿಸಿ ತಿಳಿದವನು ಎಂದೂ ಶೋಕಿಸುವುದಿಲ್ಲ. ಏಕೆಂದರೆ ಶೋಕಕ್ಕೆ ಕಾರಣವಾದ ಇನ್ನೊಂದು ವಸ್ತುವೇ ಇರುವುದಿಲ್ಲ.

**ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।**
**ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥೨೯॥**

**ಓಂಕಾರಃ** = ತುರೀಯಾತ್ಮನಾದ ಓಂಕಾರವು, **ಅಮಾತ್ರಃ** = ಪರಿಚ್ಛೇದ (ಅಳತೆ)ವಿಲ್ಲದ್ದು. **ಅನಂತಮಾತ್ರಃ** = ಅಸಂಖ್ಯಾತವಾದ ಎಣಿಕೆಗೆ ಸಿಗದಷ್ಟು ಅಳತೆಯುಳ್ಳದ್ದು. **ದ್ವೈತಸ್ಯ** = ಪ್ರಪಂಚರೂಪವಾದ ದ್ವೈತದ, **ಉಪಶಮಃ** = ಅಭಾವವುಳ್ಳದ್ದು. ಆದ್ದರಿಂದಲೇ, **ಶಿವಃ** = ಪರಮಾನಂದಸ್ವರೂಪವಾದದ್ದು. ಈ ಓಂಕಾರವು **ಯೇನ** = ಯಾರಿಂದ, **ವಿದಿತಃ** = ಜ್ಞಾತವಾಗಿದೆಯೋ, **ಸಃ** = ಆತನು, **ಮುನಿಃ** = ಪರಮಾರ್ಥ ತತ್ತ್ವಜ್ಞಾನಿ. **ಇತರೋ ಜನಃ** = ಓಂಕಾರ ಸ್ವರೂಪವನ್ನರಿಯದವನು, **ನ** = ಮುನಿಯಲ್ಲ.

ಓಂಕಾರವೇ ತುರೀಯನಾದ ಪರಮಾತ್ಮ. ಅವನಿಗೆ **ಇಯತ್ತಾ** = ಪರಿಚ್ಛೇದವೇ ಇಲ್ಲ, ಯಾವ ಉಪಾಧಿಯೂ ಇಲ್ಲದವನು ವಿಭು. ಅವನಲ್ಲಿ ಎಲ್ಲ ದ್ವೈತವೂ ಅಳಿದು ಹೋಗಿರುತ್ತದೆ. ಅಂತಹ ಪರಮಾತ್ಮನನ್ನು ತಿಳಿದವನೇ ಮುನಿ, ಇನ್ನು ಯಾವನೂ ಮುನಿಯಲ್ಲ.

ಇಲ್ಲಿಗೆ ಶ್ರೀಗೌಡಪಾದಾಚಾರ್ಯರ ಮಾಂಡೂಕ್ಯಕಾರಿಕೆಗಳಲ್ಲಿ ಮೊದಲನೆಯದಾದ ಆಗಮಪ್ರಕರಣವು ಸಮಾಪ್ತವಾಯಿತು.

# ವೈತಥ್ಯ ಪ್ರಕರಣ – ೨

ಹಿಂದಿನ ಪ್ರಕರಣದಲ್ಲಿ ಅದ್ವೈತವೇ ಪರಮಾರ್ಥವೆಂದು ಉಪನಿಷತ್ತಿನ ಆಧಾರದಿಂದ ಸ್ಥಾಪಿಸಿದ್ದಾಗಿದೆ. **"ಜ್ಞಾತೇ ದ್ವೈತಂ ನ ವಿದ್ಯತೇ"** ಎಂದೂ ಹೇಳಿದ್ದಾಗಿದೆ. ಉತ್ತಮಾಧಿಕಾರಿಗೆ ಕೃತಾರ್ಥನಾಗಲು ಅಷ್ಟು ಸಾಕಾಗುತ್ತದೆ. ಮಂದಮಧ್ಯಮಾಧಿಕಾರಿಗಳಿಗೆ ಸಂದೇಹವು ಪೂರ್ತಿಯಾಗಿ ಹೋಗುವುದಿಲ್ಲ. ಕಣ್ಣಿಗೆ ಸ್ಪಷ್ಟವಾಗಿ ಕಾಣುವ ಈ ದ್ವೈತ ಪದಾರ್ಥಗಳೆಲ್ಲವೂ ಮಿಥ್ಯೆಯೆನ್ನಬಹುದೆ? ವೇದವೇ ಸ್ವರ್ಗ ನರಕಗಳನ್ನು ಹೇಳುತ್ತದೆಯಲ್ಲ. ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ–ಇತ್ಯಾದಿ ವಚನಗಳು ದ್ವೈತವಿದ್ದರಲ್ಲವೆ ಸಾರ್ಥಕವಾಗುತ್ತವೆ? ಅದ್ವಯಾತ್ಮನೊಬ್ಬನೇ ಇರುವುದಾದರೆ ವರ್ಣಾಶ್ರಮ ಧರ್ಮಗಳು ಹೇಗೆ ಅರ್ಥವತ್ತಾಗುತ್ತವೆ? ಚೌಲ, ಉಪನಯನಾದಿ ಸಂಸ್ಕಾರಗಳನ್ನು ಮಿಥ್ಯೆ ಎಂದು ತಳ್ಳಿ ಹಾಕಬಹುದೆ? ನಮ್ಮ ಇಂದ್ರಿಯಗಳೆಲ್ಲವೂ ದ್ವೈತವನ್ನೇ ಬೋಧಿಸುತ್ತವೆ. ನಮ್ಮ ಇಂದ್ರಿಯಗಳೇ ಸುಳ್ಳನ್ನು ಬೋಧಿಸುವುದಾದರೆ ನಾವು ಯಾರನ್ನು ನಂಬಬೇಕು?–ಇತ್ಯಾದಿ ಶಂಕೆಗಳು ಹುಟ್ಟಿ ಜನರು ಗೊಂದಲಕ್ಕೆ ಈಡಾಗಬಹುದು. ಆದ್ದರಿಂದ ಯುಕ್ತಿಗಳಿಂದಲೂ ಅದ್ವೈತವನ್ನು ಸ್ಥಾಪಿಸಿ, ದ್ವೈತವನ್ನು ಮಿಥ್ಯೆಯೆಂದು ಈ ಜನರಿಗೆ ತೋರಿಸಿಕೊಡಬೇಕು–ಎಂಬ ಉದ್ದೇಶದಿಂದ ಈ ವೈತಥ್ಯ ಪ್ರಕರಣವು ಪ್ರಸ್ತುತವಾಗಿದೆ. ಇದರಲ್ಲಿ ವೇದವಚನಗಳನ್ನೇ ಅಲ್ಲಲ್ಲಿ ಉದಾಹರಿಸಿದರೂ ಯುಕ್ತಿಗಳೇ ಪ್ರಧಾನವಾಗಿ ಬಂದಿವೆ.

ವಿತಥ ಎಂದರೆ ಅನೃತ, ಸುಳ್ಳು ಎಂದರ್ಥ. **ವಿತಥಸ್ಯ ಭಾವಃ** = ವೈತಥ್ಯಂ. ಮಿಥ್ಯಾತ್ವ. ದ್ವೈತದ ಮಿಥ್ಯಾತ್ವವನ್ನು ಯುಕ್ತಿಗಳಿಂದ ಉಪಪಾದಿಸಲಾಗುವುದು.

**ವೈತಥ್ಯಂ ಸರ್ವಭಾವಾನಾಂ ಸ್ವಪ್ನ ಆಹುರ್ಮನೀಷಿಣಃ ।**
**ಅಂತಃಸ್ಥಾನಾತ್ತು ಭಾವಾನಾಂ ಸಂವೃತತ್ವೇನ ಹೇತುನಾ ॥೧॥**

**ಸ್ವಪ್ನೇ** = ಕನಸಿನಲ್ಲಿ, **ಸರ್ವಭಾವಾನಾಂ** = ಬಾಹ್ಯದಲ್ಲಿರುವ ಘಟ, ಪಟ, ಗೃಹಾದಿಗಳು, ದೇಹದಲ್ಲಿರುವ ಇಂದ್ರಿಯ, ಮನಸ್ಸು ಮುಂತಾದವು ಎಂಬ ಸಮಸ್ತ ಪದಾರ್ಥಗಳಿಗೂ, **ವೈತಥ್ಯಂ** = ಅನೃತತ್ವವನ್ನು, **ಮನೀಷಿಣಃ** = ಪ್ರಾಮಾಣಿಕರಾದ ಬುದ್ಧಿಶಾಲಿಗಳು, **ಆಹುಃ** = ಹೇಳುತ್ತಾರೆ. ಏಕೆಂದರೆ, **ಭಾವಾನಾಂ** = ಆ ಪದಾರ್ಥಗಳಿಗೆ, **ಅಂತಃಸ್ಥಾನಾತ್** = ದೇಹದೊಳಗಿನ ಸ್ಥಳವಾಗುವುದರಿಂದಲೂ, **ಸಂವೃತತ್ವೇನ ಹೇತುನಾ** = ಆ ಸ್ಥಳವು ಸಂಕುಚಿತವಾಗಿ ತುಂಬ ಚಿಕ್ಕದೆಂಬ ಕಾರಣದಿಂದಲೂ ಹಾಗೆ ಹೇಳುತ್ತಾರೆ.

ಜಾಗರದಲ್ಲಿ ನಮ್ಮ ದೇಹದ ಹೊರಗೆ ಎಲ್ಲಿಯೋ ಇರುವ ಆನೆ, ಬೆಟ್ಟ ಮುಂತಾದವು ಕನಸಿನಲ್ಲಿ, ನಮ್ಮ ದೇಹದೊಳಗಡೆ ಅತಿಸೂಕ್ಷ್ಮವಾದ ನಾಡಿಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಈ ನಾಡಿಗಳಲ್ಲಿ ಸ್ವಪ್ನದ ವಸ್ತುಗಳು ಕಾಣುತ್ತವೆಯೆಂದು ಶ್ರುತಿಯು ಹೇಳಿದೆ. **''ತಾ ವಾ ಅಸ್ಯೈತಾ ಹಿತಾ ನಾಮ ನಾಡ್ಯೋ ಯಥಾ ಕೇಶಃ ಸಹಸ್ರಧಾ ಭಿನ್ನಾಸ್ತಾವತಾ ಅಣಿಮ್ನಾ ತಿಷ್ಠಂತಿ''** (ಬೃಹ.೪–೩–೨೦).

ಮನುಷ್ಯನ ದೇಹದೊಳಗೆ ಎಲ್ಲೆಲ್ಲಿಯೂ ಹರಡಿಕೊಂಡಿರುವ ಈ ನಾಡಿಗಳಿಗೆ 'ಹಿತಾ' ಎಂದು ಹೆಸರು. ಕೂದಲಿನ ಸಾವಿರದ ಒಂದು ಭಾಗವು ಎಷ್ಟು ಚಿಕ್ಕದೋ ಅಷ್ಟು ಚಿಕ್ಕದಾಗಿ ಈ ನಾಡಿಗಳಿರುತ್ತವೆ ಎಂದು ಈ ವಾಕ್ಯದ ಅರ್ಥ. ಇವುಗಳಲ್ಲಿ ಜಾಗರದಲ್ಲಿ ನೋಡಿದ ನಾನಾ ವಸ್ತು ಸಂಗತಿಗಳಿಂದಾದ ಸಂಸ್ಕಾರವು ನೆಲೆಸಿರುತ್ತದೆಯೆಂದೂ ಅಲ್ಲಿಯೇ ಕನಸಿನ ದೃಶ್ಯಗಳು ಕಾಣಿಸುತ್ತವೆಯೆಂದೂ ಆ ಶ್ರುತಿಯೇ ಹೇಳಿದೆ. ದೇಹದೊಳಗೆ ಇರುವ ಈ ಸೂಕ್ಷ್ಮಸ್ಥಾನದಲ್ಲಿ ಆನೆ, ಪರ್ವತ ಮುಂತಾದವು ಎಂದಿಗೂ ಇರಲಾರವು. ಆದ್ದರಿಂದ ಸ್ವಪ್ನದಲ್ಲಿ ಕಾಣಿಸುವುದು ಭ್ರಾಂತಿಯೇ ಸರಿ. ಆ ವಸ್ತುಗಳು ಮಿಥ್ಯೆಯೇ ಸರಿ.

**ಅದೀರ್ಘತ್ವಾಚ್ಚ ಕಾಲಸ್ಯ ಗತ್ವಾ ದೇಶಾನ್ನ ಪಶ್ಯತಿ ।**
**ಪ್ರತಿಬುದ್ಧಶ್ಚ ವೈ ಸರ್ವಸ್ತಸ್ಮಿನ್ ದೇಶೇ ನ ವಿದ್ಯತೇ ॥೨॥**

**ಕಾಲಸ್ಯ** = ಕಾಲದ, **ಅದೀರ್ಘತ್ವಾತ್** = ದೀರ್ಘವಲ್ಲದ ಅಲ್ಪತೆಯಾದ್ದರಿಂದಲೂ **ದೇಶಾನ್‌ಗತ್ವಾ** = ಪರ್ವತಾದಿಗಳಿರುವ ಸ್ಥಳಕ್ಕೆ ಹೋಗಿ, **ನ ಪಶ್ಯತಿ** = ಅವುಗಳನ್ನು ನೋಡುವುದಿಲ್ಲ. ಅಲ್ಲದೆ **ಪ್ರತಿಬುದ್ಧಃ** = ಸ್ವಪ್ನವು ಕಳೆದು ಎಚ್ಚರವಾದ, **ಸರ್ವಃ** = ಸಮಸ್ತ ಜನರೂ, **ತಸ್ಮಿನ್ ದೇಶೇ** = ಆ ದೂರ ದೇಶದಲ್ಲಿ, **ನ ವಿದ್ಯತೇ** = ಇರುವುದಿಲ್ಲ.

''ಮನುಷ್ಯನು ತನ್ನ ದೇಹದ ನಾಡಿಗಳಲ್ಲಿ ಕನಸನ್ನು ಕಾಣುತ್ತಾನೆ ಎಂಬುದು ಸರಿಯಲ್ಲ. ಪರ್ವತಾದಿಗಳು ಇರುವ ಸ್ಥಳಕ್ಕೆ ಹೋಗಿ ಅವನ್ನು ಕಾಣುತ್ತಾನೆ. ಆದ್ದರಿಂದ ದೇಹದ ನಾಡಿಗಳಲ್ಲಿ ಗಜಪರ್ವತಾದಿಗಳಿರಲಾರವಾದ ಕಾರಣ ಸ್ವಪ್ನದರ್ಶನದ ವಸ್ತುಗಳು ಮಿಥ್ಯೆ ಎಂದು ಹೇಳಿರುವುದು ಸರಿಯಲ್ಲ'' ಎಂಬ ಶಂಕೆಗೆ ಈ ಶ್ಲೋಕದಲ್ಲಿ ಉತ್ತರವಿದೆ. ಕನಸು ಕಾಣತಕ್ಕವನು ಹಿಮಾಲಯವೇ ಮುಂತಾದ ಸ್ಥಳಕ್ಕೆ ಹೋಗುತ್ತಾನೆ ಎಂಬುದು ಬಾಲಿಶವಾದ ಹೇಳಿಕೆ. ಮಲಗಿದೊಡನೆ ಕನಸು ಬೀಳುತ್ತದೆ. ಅಷ್ಟು ಶೀಘ್ರವಾಗಿ ಹಿಮಾಲಯವೇ ಮೊದಲಾದ ವಸ್ತುಗಳಿರುವ ಸ್ಥಳಕ್ಕೆ ಈತನು ಎಂದಿಗೂ ಹೋಗಲಾರ ಮತ್ತು ಎಚ್ಚರವಾದೊಡನೆ

ತನ್ನ ಹಾಸಿಗೆಯಲ್ಲಿಯೇ ಇರುತ್ತಾನೆ! ಅಷ್ಟು ಬೇಗನೆ ಹಿಂದಕ್ಕೆ ಬಂದು ತನ್ನ ಹಾಸಿಗೆಯಲ್ಲಿ ಮಲಗಲಾರ.

ಸ್ವಪ್ನದಲ್ಲಿ ಅನೇಕ ಜನರೊಡನೆ ಮಾತಾಡುತ್ತಾನೆ. ಅವರು ಎಲ್ಲಿಂದ ಹೇಗೆ ಬಂದಾರು? ಬಂದಿದ್ದರೂ ಸಹ ಅವರು ''ನಿನ್ನೆ ರಾತ್ರಿ ನಿನ್ನನ್ನು ಕಂಡು ಮಾತಾಡಿದೆವು!'' ಎಂದು ಹೇಳಬೇಕಾದೀತು! ಆದಕಾರಣ ಕಾಲದೇಶಾದಿಗಳು ಹೊಂದುವುದೇ ಇಲ್ಲ. ಮನೆಯಲ್ಲಿದ್ದವರೂ ಈ ಕನಸುಗಾರನನ್ನು ಮನೆಯಲ್ಲಿ ನೋಡುತ್ತ ಇರುತ್ತಾರೆ. ಜ್ಞಾನೇಂದ್ರಿಯಗಳೂ ಕಾಲು ಮುಂತಾದ ಕರ್ಮೇಂದ್ರಿಯ ಗಳೂ ಸ್ವಪ್ನದಲ್ಲಿ ಸುಪ್ತವಾಗಿರುವುದರಿಂದ ಈತನು ಹೋಗುವುದು ಹೇಗೆ, ನೋಡಿ ಮಾತಾಡುವುದು ಹೇಗೆ? ಆದ್ದರಿಂದ ಈ ಮೂರ್ಖವಾದವು ಯುಕ್ತವಲ್ಲ. ಕನಸಿನಲ್ಲಿ ಕಾಣುವುದೆಲ್ಲವೂ ಮಿಥ್ಯೆಯೇ ಸರಿ.

**ಅಭಾವಶ್ಚ ರಥಾದೀನಾಂ ಶ್ರೂಯತೇ ನ್ಯಾಯಪೂರ್ವಕಮ್ ।**
**ವೈತಥ್ಯಂ ತೇನ ವೈ ಪ್ರಾಪ್ತಂ ಸ್ವಪ್ನ ಆಹುಃ ಪ್ರಕಾಶಿತಮ್** ॥೩॥

ಸ್ವಪ್ನದಲ್ಲಿ, **ರಥಾದೀನಾಂ** = ರಥ, ಅಶ್ವ ಮೊದಲಾದವುಗಳ, **ಅಭಾವಃ** = ಅಭಾವವು, **ನ್ಯಾಯಪೂರ್ವಕಂ** = ಯುಕ್ತಿಪೂರ್ವಕವಾಗಿ, **ಶ್ರೂಯತೇ** = ಶ್ರುತಿಯಲ್ಲಿ ಹೇಳಲ್ಪಟ್ಟಿದೆ. **ತೇನ** = ಅದರಿಂದ, **ಸ್ವಪ್ನೇ** = ಸ್ವಪ್ನದಲ್ಲಿ, ರಥಾದಿ ಗಳಿಗೆ **ವೈತಥ್ಯಂ** = ಅನೃತತ್ವವು, **ಪ್ರಾಪ್ತಂ** = ಪ್ರಾಪ್ತವಾಗುತ್ತದೆ ಎಂಬುದು, **ಪ್ರಕಾಶಿತಂ** = ಪ್ರಕಾಶಿತವಾಗಿದೆಯೆಂಬುದನ್ನು, **ಆಹುಃ** = ಬ್ರಹ್ಮವಿದರು ಹೇಳುತ್ತಾರೆ.

ಬೃಹದಾರಣ್ಯಕ ಶ್ರುತಿಯಲ್ಲಿ ಹೀಗಿದೆ – **''ನ ತತ್ರ ರಥಾಃ ನ ರಥಯೋಗಾಃ ನ ಪಂಥಾನೋ ಭವಂತಿ, ಅಥ ರಥಾನ್‌ರಥಯೋಗಾನ್ ಪಥಃ ಸೃಜತೇ''** (೪–೩–೧೦). **ಅರ್ಥ** : ಸ್ವಪ್ನದಲ್ಲಿ ರಥಗಳಾಗಲಿ, ರಥಕ್ಕೆ ಸೇರಿದ ಕುದುರೆ, ಸಾರಥಿ ಮೊದಲಾದವುಗಳಾಗಲಿ, **ಪಂಥಾನಃ** = ರಸ್ತೆಗಳಾಗಲಿ ಇರುವುದಿಲ್ಲ. ಅವೆಲ್ಲವನ್ನೂ ಆತ್ಮನು ಸೃಜಿಸಿಕೊಳ್ಳುತ್ತಾನೆ.

ಇಲ್ಲಿ ಸ್ವಯಂಜ್ಯೋತಿಯಾದ ಆತ್ಮನು ಸಾಕ್ಷಾತ್ ಕರ್ತೃವಲ್ಲ. ಚಿತ್ತವೃತ್ತಿಯು ಮಾಡುವ ಕರ್ಮಕ್ಕೆ ಹೇತುವಾದ್ದರಿಂದ ಕರ್ತೃತ್ವವು ಆತ್ಮನಲ್ಲಿ ಆರೋಪಿತವೆಂದು ತಿಳಿಯಬೇಕು. ಈ ಶ್ರುತಿಯು ಆತ್ಮನು ಸ್ವಯಂಜ್ಯೋತಿಯೆಂಬುದನ್ನು ಪ್ರತಿಪಾದಿಸುವುದಕ್ಕಾಗಿ ಹೊರಟಿದೆ. ಆದರೂ ಪ್ರಸಂಗವಶದಿಂದ ಸ್ವಪ್ನದಲ್ಲಿ ರಥಾದಿಗಳಿಲ್ಲವೆಂದೂ ಅವೆಲ್ಲವೂ ಮಿಥ್ಯೆ ಎಂದೂ ತಿಳಿಸುತ್ತದೆ. ಹಿಂದೆ ಪ್ರತಿಪಾದಿಸಿ ದಂತೆ ಸ್ವಪ್ನದಲ್ಲಿ ದೇಶಕಾಲಾದಿಗಳಿಲ್ಲವಾದ್ದರಿಂದ ಸ್ವಪ್ನದಲ್ಲಿ ಕಾಣುವ ಪದಾರ್ಥ

ಗಳು ಅನೃತವೆಂದು ಯುಕ್ತಿಯಿಂದ ಸಿದ್ಧವಾದುದನ್ನೇ ಶ್ರುತಿಯು **''ನ ತತ್ರ ರಥಾ...''** ಇತ್ಯಾದಿಯಾಗಿ ಅನುವಾದಿಸಿದೆ. ಏವಂ ಚ ಸ್ವಪ್ನದಲ್ಲಿ ಕಾಣುವ ಪದಾರ್ಥಗಳು ಮಿಥ್ಯೆಯೆಂಬುದನ್ನು ಶ್ರುತಿಯೂ ಹೇಳಿದೆಯೆಂದು ಸಿದ್ಧವಾಗುತ್ತದೆ.

**ಅಂತಃಸ್ಥಾನಾತ್ತು ಭೇದಾನಾಂ ತಸ್ಮಾಜ್ಜಾಗರಿತೇ ಸ್ಮೃತಮ್ ।**
**ಯಥಾ ತತ್ರ ತಥಾ ಸ್ವಪ್ನೇ ಸಂವೃತತ್ವೇನ ಭಿದ್ಯತೇ ॥೪॥**

**ತಸ್ಮಾತ್** = ಹೊರಗೆ ದೃಶ್ಯಮಾನವಾದ ಭಾವಗಳು ಮಿಥ್ಯೆಯೆಂದು ಸಿದ್ಧವಾದ್ದರಿಂದ, **ಜಾಗರಿತೇ** = ಜಾಗರಾವಸ್ಥೆಯಲ್ಲಿಯೂ, **ಭೇದಾನಾಂ** = ಗಜ ಪರ್ವತಾದಿ ವಿಭಿನ್ನ ವಸ್ತುಗಳಿಗೆ, (ವೈತಥ್ಯಂ) ಅನೃತತ್ವವು **ಸ್ಮೃತಂ** = ವೇದಾಂತಶಾಸ್ತ್ರದಲ್ಲಿ ಉಕ್ತವಾಗಿದೆ. **ತತ್ರ** = ಸ್ವಪ್ನದಲ್ಲಿ, **ಯಥಾ** = ಹೇಗೆ ಪದಾರ್ಥಗಳು ದೃಶ್ಯವಾಗಿವೆಯೋ, **ತಥಾ** = ಹಾಗೆಯೇ ಜಾಗರದಲ್ಲಿಯೂ ದೃಶ್ಯಮಾನವಾಗಿವೆ. ಆದರೆ **ಭೇದಾನಾಂ** = ಬಾಹ್ಯವಸ್ತುಗಳು (ಅಂತಃಸ್ಥಾನಾತ್) ದೇಹದೊಳಗೇ ಸ್ಥಿತವಾದ್ದರಿಂದಲೂ, **ಸಂವೃತತ್ವೇನ (ಹೇತುನಾ)** = ನಾಡಿಗಳಲ್ಲಿ ಸಂಕುಚಿತ ಪ್ರದೇಶದಲ್ಲಿವೆಯೆಂಬ ಕಾರಣದಿಂದಲೂ **ಭಿದ್ಯತೇ** = ಸ್ವಪ್ನಜಾಗರಿತ ಗಳಿಗೆ ಭೇದವಿರುತ್ತದೆ.

**ತಾತ್ಪರ್ಯ :** ಇಲ್ಲಿ ಕೆಲವು ಶಬ್ದಗಳನ್ನು ಅಧ್ಯಾಹಾರ ಮಾಡಿಕೊಂಡು ಅನ್ವಯಿಸ ಬೇಕಾದ್ದರಿಂದ ಅರ್ಥ ಮಾಡಿಕೊಳ್ಳುವುದು ಕ್ಲಿಷ್ಟವಾಗಿದೆ. ಸ್ವಪ್ನದಲ್ಲಿ ದೃಶ್ಯಮಾನ ವಸ್ತುಗಳು ಮಿಥ್ಯೆಯೆಂದು ಸಾಧಿಸಿದ್ದಾಗಿದೆ. ಅದೇ ರೀತಿಯಲ್ಲಿ ಜಾಗರದಲ್ಲಿಯೂ ದೃಶ್ಯಮಾನ ವಸ್ತುಗಳು ಮಿಥ್ಯೆಯೆಂದು ಈ ಶ್ಲೋಕವು ಹೇಳುತ್ತದೆ. ಜಾಗ್ರತ್ತಿಗೂ ಸ್ವಪ್ನಕ್ಕೂ ಸ್ವಲ್ಪ ವ್ಯತ್ಯಾಸ ಉಂಟು. ಜಾಗ್ರತ್ತಿನಲ್ಲಿ ಪರ್ವತಾದಿಗಳು ದೇಶಕಾಲ ಗಳಿಗೆ ಹೊಂದಿಕೊಂಡು ಇರುತ್ತವೆ. ಸ್ಥಳವು ವಸ್ತುಗಳಿಗೆ ಅನುರೂಪವಾಗಿಯೇ ವಿಸ್ತರಿಸಿ ಕೊಂಡಿರುತ್ತದೆ. ಸ್ವಪ್ನದಲ್ಲಿ ಮಾತ್ರ ದೇಹದೊಳಗೇ ಸಂಕುಚಿತ ಸ್ಥಳದಲ್ಲಿರುತ್ತವೆ. ಇಷ್ಟು ವ್ಯತ್ಯಾಸ ಇದೆ. ಆದರೂ ಜಾಗ್ರತ್ತಿನ ವಸ್ತುಗಳೂ ಮಿಥ್ಯೆಯೆಂದು ಈ ಶ್ಲೋಕದಲ್ಲಿ ಅನುಮಾನ ಪ್ರಮಾಣದಿಂದ ಸಾಧಿಸಿದ್ದಾರೆ.

**ವಿವರಣೆ :** ಅನುಮಾನವು ಈ ಪ್ರಕಾರವಿರುತ್ತದೆ. ಇದರಲ್ಲಿ ಪ್ರತಿಜ್ಞಾ, ಹೇತು, ಉದಾಹರಣೆ (ದೃಷ್ಟಾಂತ) ಉಪನಯ, ನಿಗಮನ ಎಂದು ಪಂಚಾವಯವ ಗಳಿರುತ್ತವೆ. ಇವುಗಳಿಂದ ಒಂದು ವಿಷಯವನ್ನು ಸಾಧಿಸಬೇಕು. ಪ್ರಕೃತದಲ್ಲಿ ಹೀಗೆ–

೧. ಜಾಗ್ರತ್ತಿನಲ್ಲಿ ಕಾಣುವ ಪದಾರ್ಥಗಳು ಮಿಥ್ಯೆಯಾದವು – **ಇದು ಪ್ರತಿಜ್ಞೆ**

೨. ಅವು ದೃಶ್ಯವಾದ್ದರಿಂದ – **ಇದು ಹೇತು.**

೩. ಸ್ವಪ್ನದಲ್ಲಿ ದೃಶ್ಯವಾದ ಪದಾರ್ಥಗಳಂತೆ – **ಇದು ದೃಷ್ಟಾಂತ.**

೪. ಹಾಗೆಯೇ ಪದಾರ್ಥಗಳು ಜಾಗ್ರತ್ತಿನಲ್ಲಿಯೂ ದೃಶ್ಯವಾಗಿವೆ – **ಇದು ಉಪನಯ.**

೫. ಆದ್ದರಿಂದ ಜಾಗ್ರತ್ತಿನಲ್ಲಿಯೂ ಹಾಗೆಯೇ ಪದಾರ್ಥಗಳು ಮಿಥ್ಯೆ – **ಇದು ನಿಗಮನ.**

ಯಾವುದು ದೃಶ್ಯವೋ ಅದು ಮಿಥ್ಯೆ ಎಂಬ ವ್ಯಾಪ್ತಿಯನ್ನು ಇಲ್ಲಿ ಇಟ್ಟುಕೊಳ್ಳಲಾಗಿದೆ. ಹೀಗೆ ಪಂಚಾವಯವ ವಾಕ್ಯಗಳನ್ನು ವ್ಯವಸ್ಥಿತವಾಗಿ ಹೇಳಲು ಸಾಧ್ಯವಾದರೆ ಮಾತ್ರ ಅನುಮಾನ ಪ್ರಮಾಣದಿಂದ ವಸ್ತುಸಿದ್ಧಿಯಾಗುತ್ತದೆ.

ಸ್ವಪ್ನದಲ್ಲಿ ದೃಶ್ಯವಾದದ್ದು ದೇಶ ಕಾಲಗಳು ಹೊಂದುವುದಿಲ್ಲವಾದ್ದರಿಂದ ಮಿಥ್ಯೆಯಾಗುತ್ತದೆ. ಜಾಗ್ರತ್ತಿನಲ್ಲಿ ದೇಶಕಾಲಗಳು ಹೊಂದುವುದರಿಂದ ದೃಶ್ಯವು ಹೇಗೆ ಮಿಥ್ಯೆ ಎಂಬ ಸಂದೇಹಕ್ಕೆ ಅವಕಾಶವಿದೆ. **'ಯತ್ರ ಯತ್ರ ದೃಶ್ಯತ್ವಂ ತತ್ರ ತತ್ರ ಮಿಥ್ಯಾತ್ವಂ'** ಎಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿಲ್ಲ. ಶ್ರುತಿಗಳ ಬಲದಿಂದಲೇ ಜಾಗ್ರತ್ತಿನ ದೃಶ್ಯವೂ ಮಿಥ್ಯೆಯೆಂದು ಹೇಳಬೇಕಾಗಿದೆ. ಅದು ಸಿದ್ಧವಾದ್ದರಿಂದ ಇಲ್ಲಿ ಅನುಮಾನವನ್ನೂ ಸಹ ಪ್ರಯೋಗಿಸಲು ಸಾಧ್ಯವೆಂದು ಅಭಿಪ್ರಾಯ.

ಅಲ್ಲದೆ **''ಸಂವೃತತ್ವೇನ ಹೇತುನಾ''** ಎಂಬುದಾಗಿ ಸ್ವಪ್ನದ ದೃಶ್ಯಕ್ಕೂ ಜಾಗರದ ದೃಶ್ಯಕ್ಕೂ ಭೇದವಿರುವುದನ್ನು ಕಾರಿಕೆಯಲ್ಲಿಯೇ ತಿಳಿಸಿದೆ. ಆದ್ದರಿಂದ ಸಾಮಾನ್ಯ ಜನತೆಗಾಗಿ ಇಲ್ಲಿ ಅನುಮಾನದಿಂದಲೂ ಮಿಥ್ಯಾತ್ವವನ್ನು ಹೇಳಬಹುದೆಂದು ಆಶಯ.

**ಸ್ವಪ್ನಜಾಗರಿತಸ್ಥಾನೇ ಹ್ಯೇಕಮಾಹುರ್ಮನೀಷಿಣಃ ।**
**ಭೇದಾನಾಂ ಹಿ ಸಮತ್ವೇನ ಪ್ರಸಿದ್ಧೇನೈವ ಹೇತುನಾ ॥೫॥**

**ಸ್ವಪ್ನಜಾಗರಿತಸ್ಥಾನೇ** = ಸ್ವಪ್ನಾವಸ್ಥೆ ಜಾಗರಾವಸ್ಥೆಗಳೆರಡೂ, **ಏಕಂ** = ಪರಿಣಾಮದಲ್ಲಿ ಒಂದೇ ಎಂದು, **ಮನೀಷಿಣಃ** = ತತ್ತ್ವಜ್ಞಾನಿಗಳು, **ಆಹುಃ** = ಹೇಳುತ್ತಾರೆ. **ಹಿ** = ಏಕೆಂದರೆ, **ಭೇದಾನಾಂ** = ಭಿದ್ಯಮಾನವಾದ ಗ್ರಾಹಕಗಳು ಮತ್ತು ಗ್ರಾಹ್ಯಗಳು –ಇವುಗಳ, **ಸಮತ್ವೇನ** = ಉಭಯಾವಸ್ಥೆಗಳಲ್ಲಿಯೂ ಸಮತೆ ಇರುವುದರಿಂದ, **ಪ್ರಸಿದ್ಧೇನೈವ ಹೇತುನಾ** = ಪ್ರಸಿದ್ಧವಾದ ದೃಶ್ಯತ್ವವೆಂಬ ಹೇತುವಿನಿಂದಲೇ (ಹಾಗೆ ಹೇಳುತ್ತಾರೆ).

ಸ್ವಪ್ನಜಾಗರಿತಗಳೆರಡರಲ್ಲಿಯೂ ಜ್ಞಾನೇಂದ್ರಿಯಗಳೂ ಮನಸ್ಸೂ ಗ್ರಾಹಕ

ಗಳು. ಇವು ದೇಹದೊಳಗಿರತಕ್ಕವು. ಘಟ, ಪಟ, ಪರ್ವತಾದಿಗಳು ಗ್ರಾಹ್ಯವಸ್ತು ಗಳು. ಸ್ವಪ್ನದಲ್ಲಿ ಹಿಂದೆ ಹೇಳಿದಂತೆ ಪರ್ವತಾದಿಗಳು ದೇಹದೊಳಗಿದ್ದರೂ ಗ್ರಾಹ್ಯಗಳೇ ಆಗಿರುತ್ತವೆ. ಸ್ವಪ್ನದಲ್ಲಿ ಯಾವುದು ಗ್ರಾಹ್ಯವೋ ಅದೇ ಜಾಗರಿತ ದಲ್ಲಿಯೂ ಗ್ರಾಹ್ಯ. ಗ್ರಾಹ್ಯವಾದದ್ದೇ ದೃಶ್ಯವೆನಿಸುತ್ತದೆ. ಸ್ವಪ್ನದಲ್ಲಿ ಇಂದ್ರಿಯಗಳು ಸುಪ್ತವಾಗಿದ್ದರೂ ಮುಖ್ಯವಾದ ಗ್ರಾಹಕವು ಉಭಯತ್ರ ಮನಸ್ಸೇ ಆಗಿದೆ. ವೇದಾಂತದ ಪ್ರಕಾರ ಇಂದ್ರಿಯಗಳೂ, ಮನಸ್ಸೂ ಸಹ ಅಂತರ್ಯಾಮಿಗೆ ಗೃಹ್ಯ ವಾಗಿವೆ. ಎಂದರೆ ದೃಶ್ಯವಾಗಿವೆ. ಅಂತರ್ಯಾಮಿಯು ಮಾತ್ರ ಕೇವಲ ಧೃಕ್ ಆಗಿರು ತ್ತಾನೆ. ಅವನು ಎಂದಿಗೂ ದೃಶ್ಯನಾಗುವುದಿಲ್ಲ. ದೃಶ್ಯತ್ವಾತ್ ಎಂಬ ಹೇತುವಿ ನಿಂದ ದೃಶ್ಯಮಾನ ಪದಾರ್ಥಗಳೆಲ್ಲವೂ ಮಿಥ್ಯೆ ಎಂದು ಹಿಂದಿನ ಕಾರಿಕೆಯಲ್ಲಿ ಅನುಮಾನ ಪ್ರಕಾರವನ್ನು ಹೇಳಿದ್ದಾಗಿದೆ. ಅದರಿಂದ ಜಾಗರಿತದಲ್ಲಿ ಕಾಣತಕ್ಕದ್ದೂ ಮಿಥ್ಯೆಯೆಂದು ಸಿದ್ಧವಾಯಿತು. ಜಾಗರಿತವೂ ಸ್ವಪ್ನವೆಂದೇ ಫಲಿತವಾಯಿತು! ಆದ್ದರಿಂದ ಸ್ವಪ್ನಜಾಗರಿತಗಳೆರಡೂ ಒಂದೇ ಎಂದು ಸಿದ್ಧವಾಯಿತು. ಐತರೇಯೋಪನಿಷತ್ತಿನಲ್ಲಿ **'ತ್ರಯಃ ಸ್ವಪ್ನಾಃ'** (೩–೧೨) ಎಂದು ಹೇಳಿದೆ. ಮುಂದೆ ೧೪ನೆಯ ಕಾರಿಕೆಯಲ್ಲಿಯೂ **''ಸ್ವಪ್ನನಿದ್ರಾಯುತಾವಾದ್ಯೌ''** ಎಂದು ಉಕ್ತವಾಗಿದೆ. ಜಾಗ್ರತ್ತೂ ಸ್ವಪ್ನವೆಂದು ಅಲ್ಲಿ ತಿಳಿಸಿದೆ.

**ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ।**
**ವಿತಥೈಃ ಸದೃಶಾಃ ಸಂತೋಽವಿತಥಾ ಇವ ಲಕ್ಷಿತಾಃ ॥೬॥**

ಯಾವುದು ಆದಿಯಲ್ಲಿಯೂ ಇಲ್ಲವೋ ಭವಿಷ್ಯತ್ತಿನಲ್ಲಿಯೂ ಇರುವುದಿಲ್ಲವೋ ಅದು ವರ್ತಮಾನ ಕಾಲದಲ್ಲಿಯೂ ಇರುವುದಿಲ್ಲ. ಈ ಪದಾರ್ಥಗಳು ಅನೃತಗಳೆಂದು ಸಿದ್ಧವಾದ ಮೃಗತೃಷ್ಣಿಕಾ, ಗಂಧರ್ವನಗರಗಳಂತೆ ಇದ್ದು ನಾಶ ವಾಗುತ್ತವೆ. **ಮೃಗತೃಷ್ಣಿಕಾ** = ಬೇಸಿಗೆಯ ಮಧ್ಯಾಹ್ನದಲ್ಲಿ ಬಿಸಿಲಿನ ಝಳದಿಂದ ದೂರದಲ್ಲಿ ಸೂರ್ಯಕಿರಣಗಳು ಹರಡಿದಾಗ ನೀರು ಹರಿಯುವಂತೆ ಕಾಣುತ್ತದೆ. ಮೃಗಗಳು ಬಾಯಾರಿಕೆಯಿಂದ ಬಳಲಿ ನೀರನ್ನು ಕುಡಿಯಬೇಕೆಂದು ಹೋಗುತ್ತವೆ. ಅಲ್ಲಿ ಏನೂ ಇರುವುದಿಲ್ಲ. ಹೀಗೆ ಕಾಣುವ ನೀರಿಗೆ ಮೃಗತೃಷ್ಣಿಕಾ ಎಂದು ಹೆಸರು. **ಗಂಧರ್ವನಗರ** = ಹಗಲು ಮಳೆ ಬಂದು ನಿಂತಾಗ ಆಕಾಶದಲ್ಲಿ ಸೂರ್ಯಕಿರಣ ಗಳು ಹರಡಿ ಒಂದು ಪಟ್ಟಣದಂತೆ ಕಾಣುವುದಂತೆ. ಅದು ಗಂಧರ್ವನಗರ. ಪ್ರಸಿದ್ಧವಾದ ಕಾಮನಬಿಲ್ಲನ್ನು ಸಹ ಇಲ್ಲಿ ಉದಾಹರಿಸಬಹುದು. ಇವೆಲ್ಲವೂ ವಾಸ್ತವವಾಗಿ ಇರುವುದಿಲ್ಲ. ಭ್ರಾಂತಿಯಿಂದ ಅವು ಇದ್ದ ಹಾಗೆ ಕಾಣಿಸುತ್ತವೆ.

ಹಾಗೆಯೇ ಸ್ವಪ್ನದಲ್ಲಿ ಕಾಣಿಸುವ ವಸ್ತುವೂ ಆದಿಯಲ್ಲಿಯೂ ಇರುವುದಿಲ್ಲ.

ಸ್ವಪ್ನದ ಅಂತ್ಯದಲ್ಲಿಯೂ ಇರುವುದಿಲ್ಲ. ಜಾಗ್ರತ್ತಿನಲ್ಲಿಯೂ ಸಹ ಪ್ರಾಣಿಗಳೂ, ಗಿಡಮರಗಳೂ ಹುಟ್ಟಿ ಸಾಯುತ್ತವೆ. ಹುಟ್ಟುವ ಮೊದಲೂ ಇರುವುದಿಲ್ಲ. ಸಾವಿನ ಅನಂತರವೂ ಇರುವುದಿಲ್ಲ. ಹುಟ್ಟಿದುದಕ್ಕೆ ಸಾವು ನಿಶ್ಚಿತ. **''ಜಾತಸ್ಯ ಮರಣಂ ಧ್ರುವಂ''** ಹೀಗೆ ಹುಟ್ಟುಸಾವುಗಳಿರುವುದು ಸ್ವಪ್ನದಲ್ಲಿಯೂ ಜಾಗ್ರತ್ತಿನಲ್ಲಿಯೂ ಸಮವಾಗಿದೆ. ಸ್ವಪ್ನದಲ್ಲಿ ಹುಟ್ಟಿ ಜಾಗ್ರತ್ತಿನಲ್ಲಿ ಸಾಯುತ್ತದೆ. ಮಧ್ಯದಲ್ಲಿ ತೋರುವುದು ಭ್ರಮೆಯಿಂದಲೇ. ಏವಂಚ **''ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ''**.

ಜಾಗರವೂ ಸಹ ದೀರ್ಘವಾದ ಸ್ವಪ್ನವೇ ಸರಿ ಎಂದು ಅಭಿಪ್ರಾಯ.

**ಸಪ್ರಯೋಜನತಾ ತೇಷಾಂ ಸ್ವಪ್ನೇ ವಿಪ್ರತಿಪದ್ಯತೇ ।**
**ತಸ್ಮಾದಾದ್ಯಂತವತ್ತ್ವೇನ ಮಿಥ್ಯೈವ ಖಲು ತೇ ಸ್ಮೃತಾಃ ॥೭॥**

**ತೇಷಾಂ** = ಜಾಗರದಲ್ಲಿ ದೃಷ್ಟವಾದ ಪದಾರ್ಥಗಳಿಗೆ, **ಸಪ್ರಯೋಜನತಾ** = ಪ್ರಯೋಜನವಿರುವುದು, **ಸ್ವಪ್ನೇ** = ಸ್ವಪ್ನದಲ್ಲಿಯೂ, **ವಿಪ್ರತಿಪದ್ಯತೇ** = ಇದೆಯೋ ಇಲ್ಲವೋ ಎಂಬ ವಿಪ್ರತಿಪತ್ತಿಗೆ ಒಳಗಾಗುತ್ತದೆ. **ತಸ್ಮಾತ್** = ಹೀಗೆ ವಿಪ್ರತಿಪತ್ತಿಯು ಉಭಯತ್ರ ಇರುವುದರಿಂದ, **ಆದ್ಯಂತವತ್ತ್ವೇನ** = ಸ್ವಪ್ನದೃಶ್ಯ ಮತ್ತು ಜಾಗರದೃಶ್ಯ ಇವೆರಡಕ್ಕೂ ಆದ್ಯಂತಗಳು (ಜನ್ಮನಾಶಗಳು) ಸಮಾನವಾದ್ದರಿಂದ, **ತೇ** = ಅವೆರಡು ದೃಶ್ಯಪದಾರ್ಥಗಳು, **ಖಲು** = ನಿಶ್ಚಯವಾಗಿ, **ಮಿಥ್ಯೈವ** = ಮಿಥ್ಯೆಯೇ ಎಂದು, **ಸ್ಮೃತಾಃ** = ಶಾಸ್ತ್ರಗಳಲ್ಲಿ ಸ್ಮೃತವಾಗಿವೆ.

ಸ್ವಪ್ನದೃಶ್ಯಗಳಂತೆ ಜಾಗ್ರತ್ತಿನ ದೃಶ್ಯಗಳೂ ಇರುವುದರಿಂದ ಅವೂ ಮಿಥ್ಯೆಯೆಂದು ಹೇಳಲಾಯಿತಷ್ಟೆ. ಇದರಲ್ಲಿ ವಿಪ್ರತಿಪತ್ತಿ ಇದೆ. ವಿಪ್ರತಿಪತ್ತಿ ಎಂದರೆ ಭಿನ್ನಾಭಿಪ್ರಾಯ; ಸಿದ್ಧಾಂತದಲ್ಲಿ ಸಂದೇಹಜನಕವಾದ ನುಡಿ. ಹೇಗೆಂದರೆ, ಜಾಗ್ರತ್ತಿನ ದೃಶ್ಯಗಳಿಗೆ ಪ್ರಯೋಜನವಿರುವುದು ಕಂಡು ಬರುತ್ತದೆ. ಜಾಗ್ರತ್ತಿನಲ್ಲಿ ಅನ್ನಪಾನಾದಿಗಳಿಂದ ಹಸಿವು ಬಾಯಾರಿಕೆಗಳು ನೀಗುತ್ತವೆ. ವಾಹನದಿಂದ ಸಂಚಾರ ಮಾಡಬಹುದು. ಹಣದಿಂದ ಬೇಕಾದ ಸಾಮಾನುಗಳನ್ನು ಖರೀದಿಸಿ ತರಬಹುದು. ಸ್ವಪ್ನದಲ್ಲಿ ಕಾಣುವ ಅನ್ನಪಾನಾದಿಗಳಿಂದ ಇಂತಹ ಪ್ರಯೋಜನಗಳಾವುವೂ ಇಲ್ಲ. 'ಕನಸಿನ ಗಂಟು' ಎಂದು ಹೇಳುವುದು ಇದಕ್ಕಾಗಿ. ಆದ್ದರಿಂದ ಸ್ವಪ್ನದೃಶ್ಯಗಳಂತೆ ಜಾಗರದೃಶ್ಯಗಳೂ ಮಿಥ್ಯೆಯೆಂದು ಹೇಳುವುದು ಅಸಂಗತ ಎಂದು ಭಿನ್ನಾಭಿಪ್ರಾಯ.

ಇದಕ್ಕೆ ಉತ್ತರ ಹೀಗೆ – ಸ್ವಪ್ನದಲ್ಲಿಯೂ ದೃಶ್ಯಗಳಿಂದ ಪ್ರಯೋಜನವಿರುತ್ತದೆ. ಅನ್ನಪಾನಾದಿಗಳಿಂದ ತೃಪ್ತನಾದಂತೆ ಕನಸು ಬೀಳುತ್ತದೆ. ವಾಹನದಲ್ಲಿ

ಕುಳಿತು ದೂರ ಹೋದಂತೆ ಕಾಣುತ್ತದೆ. ಸ್ವಪ್ನದಲ್ಲಿ ದೊರೆತ ಹಣದಿಂದ ಯಥೇಚ್ಛವಾಗಿ ಸಾಮಾನುಗಳನ್ನು ಖರೀದಿಸಿದಂತೆ ಸ್ವಪ್ನವಾಗಬಹುದು. ಎಚ್ಚರ ವಾದೊಡನೆ ಹೊಟ್ಟೆ ತುಂಬಿದವನಿಗೆ ಹಸಿವಾಗುತ್ತದೆ, ಬಾಯಾರಿಕೆಯಾಗುತ್ತದೆ. ವಾಹನದಲ್ಲಿ ದೂರ ಹೋದವನು ಎಚ್ಚರವಾದೊಡನೆ ಹಾಸಿಗೆಯಲ್ಲಿಯೇ ಮಲಗಿರುತ್ತಾನೆ! ಕನಸಿನ ಗಂಟು ಕನಸಿನಲ್ಲಿಯೇ ಕರಗಿ ಹೋಗಿರುತ್ತದೆ. ಆದ್ದರಿಂದ ಸ್ವಪ್ನದೃಶ್ಯಗಳಿಗೆ ಸ್ವಪ್ನದಲ್ಲಿಯೇ ಪ್ರಯೋಜನವಾಗುತ್ತದೆ. ಜಾಗ್ರತ್ತಿನ ಪದಾರ್ಥಗಳಿಗೆ ಜಾಗ್ರತ್ತಿನಲ್ಲಿ ಮಾತ್ರ ಪ್ರಯೋಜನವಿರುತ್ತದೆ. ಸ್ವಪ್ನದೃಶ್ಯವು ಸ್ವಪ್ನಕ್ಕೆ ಮಾತ್ರ ಸೀಮಿತ. ಜಾಗ್ರತ್ತಿನ ದೃಶ್ಯವು ಜಾಗ್ರತ್ತಿಗೆ ಮಾತ್ರ ಸೀಮಿತ.

ಆದ್ದರಿಂದ ಸ್ವಪ್ನದೃಶ್ಯ ಮತ್ತು ಜಾಗ್ರತ್ತಿನ ದೃಶ್ಯಗಳೆರಡೂ ಸಮಾನ. ಆದ್ದರಿಂದಲೇ ಜಾಗರದೃಶ್ಯಗಳೂ ಸ್ವಪ್ನದೃಶ್ಯಗಳೂ ಮಿಥ್ಯೆಯೇ ಸರಿಯೆಂದು ಶಾಸ್ತ್ರಕಾರರು ನಿಶ್ಚಯಿಸಿದ್ದಾರೆ.

ವಸ್ತುಸ್ಥಿತಿಯೇನೆಂದರೆ, ಸ್ವಪ್ನವು ಸ್ವಲ್ಪ ಹೊತ್ತು ಇದ್ದು ಎಚ್ಚರವಾಗಿ ಬಿಡುತ್ತದೆ. ಅಲ್ಲಿ ಕಂಡದ್ದು ಸುಳ್ಳೆಂದು ಮನಸ್ಸಿನಲ್ಲಿ ನಾಟಿಕೊಳ್ಳುತ್ತದೆ. ಪ್ರತಿದಿನ ಸ್ವಪ್ನವಾದರೂ ಪೂರ್ವಾಪರ ಸಂಬಂಧವಿರುವುದಿಲ್ಲ. ಹಿಂದಿನ ದಿನದ ಸ್ವಪ್ನವೇ ಮುಂದುವರಿಯುವುದಿಲ್ಲ. ಎಲ್ಲವೂ ತುಂಡುತುಂಡಾಗಿ ಸಂಬಂಧವಿಲ್ಲದೆ ಹೋಗುತ್ತದೆ. ಜಾಗ್ರತ್ತಿನಲ್ಲಿ ಸ್ವಪ್ನದ ಸ್ಮರಣೆ ಆಗುತ್ತದೆ. ಸ್ವಪ್ನದಲ್ಲಿ ಮಾತ್ರ ಜಾಗ್ರತ್ತಿನ ವ್ಯವಹಾರವೆಲ್ಲವೂ ಸ್ಮರಣೆಗೆ ಬಂದು ನಾನೀಗ ಸ್ವಪ್ನವನ್ನು ಕಾಣುತ್ತಿದ್ದೇನೆ ಎಂಬ ಭಾವನೆ ಬರುವುದೇ ಇಲ್ಲ. ಜಾಗ್ರತ್ತಿನ ವ್ಯವಹಾರವೆಲ್ಲವೂ ಮುಂದಿನ ಜಾಗ್ರತ್ತಿನಲ್ಲಿ ಕ್ರಮವಾಗಿ ಮುಂದುವರಿಯುತ್ತದೆ. ಹಿಂದಿನ ಜಾಗ್ರತ್ತಿನಲ್ಲಿ ಮಾಡಿದ ಕಾರ್ಯವನ್ನು ಮುಂದಿನ ಜಾಗ್ರತ್ತಿನಲ್ಲಿ ಮುಂದುವರಿಸುತ್ತಾನೆ. ಮರಣಪರ್ಯಂತವೂ ಹೀಗೆ ಮುಂದುವರಿಯುತ್ತಲೇ ಹೋಗುವುದರಿಂದ ಜಾಗ್ರತ್ತಿನ ದೃಶ್ಯವು ಸತ್ಯವೆಂದು ನಾವು ತಿಳಿಯುತ್ತೇವೆ. ಸ್ವಪ್ನದೃಶ್ಯವು ಹೀಗೆ ಕ್ರಮವರಿತು ಮುಂದುವರಿಯುವುದೇ ಇಲ್ಲ –ಇತ್ಯಾದಿ ಕಾರಣಗಳಿಂದ ಮನುಷ್ಯನು ಜಾಗ್ರತ್ತಿನ ಪದಾರ್ಥವು ಸತ್ಯವೆಂಬ ಭ್ರಮೆಗೆ ಒಳಗಾಗಿದ್ದಾನೆ. ಆತನಿಗೆ ಪರಮಾರ್ಥವು ತಿಳಿದು ಸಾಕ್ಷಾತ್ ಬ್ರಹ್ಮವಿದನೇ ಆದಾಗ ಜಾಗ್ರತ್ತಿನ ದ್ವೈತವೆಲ್ಲವೂ ಮಿಥ್ಯೆ, ಸುಳ್ಳು ಇಲ್ಲವೇ ಇಲ್ಲ. ಸರ್ವವೂ ಬ್ರಹ್ಮವೇ, ದ್ವಿತೀಯ ವಸ್ತುವೇ ಇಲ್ಲ ಎಂಬ ತತ್ತ್ವಜ್ಞಾನ ಉದಿಸುತ್ತದೆ. ಅಲ್ಲಿಯವರೆಗೂ ಜಾಗ್ರತ್ತಿನ ದೃಶ್ಯವು ಮಿಥ್ಯೆಯೆಂದು ಶಾಸ್ತ್ರಬಲ ದಿಂದ ಒಪ್ಪಿಕೊಳ್ಳುತ್ತಾನೆಯೇ ಹೊರತು, ಅದು ಸ್ವತಃ ಅನುಭವಕ್ಕೆ ಬಂದಿರುವು ದಿಲ್ಲ. ಆದ್ದರಿಂದಲೇ ಇದೆಲ್ಲವೂ ವ್ಯಾವಹಾರಿಕ ಸತ್ಯವೆಂದು ಶಾಸ್ತ್ರಕಾರರೇ ಒಪ್ಪಿ ಕೊಂಡಿದ್ದಾರೆ. ಆದ್ದರಿಂದಲೇ ಧರ್ಮಶಾಸ್ತ್ರಾದಿಗಳೆಲ್ಲವೂ ಸಾರ್ಥಕವಾಗುತ್ತವೆ.

**ಅಪೂರ್ವಂ ಸ್ಥಾನಿಧರ್ಮೋ ಹಿ ಯಥಾ ಸ್ವರ್ಗನಿವಾಸಿನಾಮ್ ।**
**ತಾನಯಂ ಪ್ರೇಕ್ಷತೇ ಗತ್ವಾ ಯಥೈವೇಹ ಸುಶಿಕ್ಷಿತಃ ॥೮॥**

**ಅಪೂರ್ವಂ** = ಅಪೂರ್ವ ಪದಾರ್ಥಗಳ ದರ್ಶನವು, **ಸ್ಥಾನಿಧರ್ಮೋಹಿ** = ಸ್ವಪ್ನಸ್ಥಾನದಲ್ಲಿದ್ದು ಕನಸು ಕಾಣುವವನ ಧರ್ಮವೇ ಆಗಿದೆ. **ಯಥಾಸ್ವರ್ಗ ನಿವಾಸಿನಾಂ** = ಸ್ವರ್ಗವಾಸಿಗಳಾದ ದೇವೇಂದ್ರಾದಿಗಳಿಗೆ ಸಾವಿರ ಕಣ್ಣುಗಳಿರುವುದು ಮೊದಲಾದದ್ದು ಹೇಗೆ ಅವರ ಧರ್ಮವೇ ಆಗಿದೆಯೋ ಹಾಗೆ. **ಅಯಂ** = ಸ್ವಪ್ನಸ್ಥಾನಿಯಾದ ದ್ರಷ್ಟಾರನು **ಗತ್ವಾ** = ಸ್ವಪ್ನಸ್ಥಾನಕ್ಕೆ ಹೋಗಿ, **ತಾನ್** = ಸ್ವಧರ್ಮಗಳೇ ಆದ ಚಿತ್ತವಿಕಲ್ಪಗಳನ್ನು, **ಪ್ರೇಕ್ಷತೇ** = ನೋಡುತ್ತಾನೆ. **ಇಹ** = ಈ ಲೋಕದಲ್ಲಿ **ಸುಶಿಕ್ಷಿತಃ** = ದೇಶಾಂತರ ಮಾರ್ಗವನ್ನು ಬಲ್ಲವನು, **ಯಥೈವ** = ಹೇಗೆ ದೇಶಾಂತರಕ್ಕೆ ಹೋಗಿ ಅಪೂರ್ವಪದಾರ್ಥಗಳನ್ನು ನೋಡುವನೋ ಹಾಗೆ (ಲೋಕಾಂತರ ವಿಷಯದಲ್ಲಿ ಸುಶಿಕ್ಷಿತನಾದ ಸ್ವಪ್ನದರ್ಶಿಯೂ ಲೋಕಾಂತರಕ್ಕೆ ಹೋಗಿ ಅಪೂರ್ವ ದೃಶ್ಯಗಳನ್ನು ನೋಡುತ್ತಾನೆ).

**ಟಿಪ್ಪಣಿ : ಸ್ಥಾನ** = ಅವಸ್ಥೆ, **ಸ್ಥಾನಿ** = ಜಾಗ್ರತ್ ಮುಂತಾದ ಅವಸ್ಥೆಯಲ್ಲಿ ಇರತಕ್ಕವನು.

ಈಗ ಇನ್ನೊಂದು ಪೂರ್ವಪಕ್ಷ ಒದಗುತ್ತದೆ. ಜಾಗ್ರತ್ತಿನ ದೃಶ್ಯಗಳಂತೆ ಸ್ವಪ್ನದೃಶ್ಯಗಳು ಇರುತ್ತವೆಯೆಂದೂ ಸ್ವಪ್ನದೃಶ್ಯಗಳು ಮಿಥ್ಯೆಯಾದ್ದರಿಂದ ಜಾಗ್ರತ್ತಿನಲ್ಲಿ ಕಾಣುವ ವಸ್ತುಗಳೂ ಮಿಥ್ಯೆಯೆಂದೂ ಹೇಳಿದ್ದೀರಿ. ಇದು ಅಸಂಗತ. ದೃಷ್ಟಾಂತವು ಹೊಂದುವುದಿಲ್ಲ. ಸ್ವಪ್ನದರ್ಶಿಯು ಕನಸಿನಲ್ಲಿ ಸ್ವರ್ಗಕ್ಕೆ ಹೋಗಿ ದೇವೇಂದ್ರ, ಐರಾವತಾದಿಗಳನ್ನು ನೋಡಬಹುದು. ತಾನು ಐರಾವತದ ಮೇಲೆ ಸವಾರಿ ಮಾಡಿದಂತೆ ಕಾಣಬಹುದು. ಇದೆಲ್ಲವೂ ಅಪೂರ್ವವಾದದ್ದು. ಜಾಗ್ರತ್ತಿನಲ್ಲಿ ಇದಾವುದೂ ದೃಶ್ಯವಾಗುವುದೇ ಇಲ್ಲ. ಸ್ವಪ್ನದರ್ಶಿಯು ಕಂಡ ಸ್ವರ್ಗ, ಇಂದ್ರ ಮೊದಲಾದವು ಸತ್ಯವಾದವು, ಮಿಥ್ಯೆಯಲ್ಲ. ಆದ್ದರಿಂದ ಸ್ವಪ್ನದ ದೃಷ್ಟಾಂತವು ಅಸಂಗತ.

ಇದಕ್ಕೆ ಸಿದ್ಧಾಂತಿಯ ಉತ್ತರ ಹೀಗೆ – ಸ್ವಪ್ನದೃಶ್ಯಗಳು ಅಪೂರ್ವಗಳಾದರೂ ಸ್ವತಃಸಿದ್ಧವಾದವಲ್ಲ. ಅವೆಲ್ಲವೂ ಸ್ಥಾನಿಯಾದ ಸ್ವಪ್ನದರ್ಶಿಯ ವಿಕಲ್ಪಗಳು. ಸ್ಥಾನಿಯ ಅಪೂರ್ವ ಧರ್ಮಗಳು. ಇಂದ್ರನಿಗೆ ಸಾವಿರ ಕಣ್ಣುಗಳು, ಶಿವನಿಗೆ ಮೂರು ಕಣ್ಣುಗಳು ಐರಾವತ ಗಜಕ್ಕೆ ನಾಲ್ಕು ಕೋರೆಹಲ್ಲುಗಳು ಮುಂತಾದವು ಇಂದ್ರಾದಿಗಳಿಗೆ ವಿಲಕ್ಷಣವಾದ ಅಪೂರ್ವ ಧರ್ಮಗಳು. ಹಾಗೆಯೇ ಈ ದೃಶ್ಯಗಳು ಸ್ವಪ್ನದರ್ಶಿಗೆ ಅಪೂರ್ವಗಳಾದ್ದರಿಂದ ಅಪೂರ್ವಧರ್ಮಗಳು. ಅಪೂರ್ವ

ವಿಕಲ್ಪಿತಗಳು. ಸ್ವತಃಸಿದ್ಧವಾದವುಗಳಲ್ಲವಾದ್ದರಿಂದ ಸತ್ಯವಸ್ತುಗಳಲ್ಲ. ದೃಶ್ಯವಾದಮಾತ್ರದಿಂದ ಸತ್ಯವೆನಿಸುವುದಿಲ್ಲ. ದೃಶ್ಯವಾದದ್ದು ಸತ್ಯವಾದರೆ ರಜ್ಜುಸರ್ಪ, ಮೃಗತೃಷ್ಣಿಕಾ, ಇಂದ್ರಜಾಲ ಮುಂತಾದವೂ ಸತ್ಯವೆಂದೂ ಹೇಳಬೇಕಾದೀತು.

ಅದು ಅಪೂರ್ವವಾದರೂ ಸತ್ಯವಾಗುವುದಿಲ್ಲ. ರಜ್ಜುಸರ್ಪಾದಿಗಳು ಅಪೂರ್ವ ದೃಶ್ಯಗಳೇ. ಅವೇನೂ ಸತ್ಯವಲ್ಲ.

ಜಾಗ್ರತ್ತಿನಲ್ಲಿಯೂ ಅಪೂರ್ವ ದರ್ಶನ ಉಂಟು. ಸುಶಿಕ್ಷಿತನು ದೇಶಾಂತರಕ್ಕೆ ಹೋಗಿ ಅಪೂರ್ವ ದೃಶ್ಯಗಳನ್ನು ಕಾಣುತ್ತಾನೆ. ಅವೂ ಸಹ ಸ್ಥಾನಧರ್ಮಗಳಾದ್ದರಿಂದ ಸ್ಥಾನಿಯ ವಿಕಲ್ಪಗಳೇ ಸರಿ. ಸ್ವಪ್ನದಲ್ಲಿ ಆಗುವ ಅಪೂರ್ವ ದರ್ಶನವೂ ಮಿಥ್ಯೆಯೇ ಆದ್ದರಿಂದ ನಾವು ಹೇಳಿದ ಸ್ವಪ್ನ ದೃಷ್ಟಾಂತವು ಸಮಂಜಸವಾಗಿದೆ. ಮನಸ್ಸು, ಜ್ಞಾನೇಂದ್ರಿಯ ಮುಂತಾದವುಗಳಿಂದ ಯಾವುದು ತಿಳಿಯುತ್ತದೆಯೋ ಅದು ಪರತಃಸಿದ್ಧವಾದದ್ದು. ಅದು ಮಿಥ್ಯೆ. ಸ್ವತಃಸಿದ್ಧವಾದದ್ದು ಸಾಕ್ಷಿಯಾದ ಅಂತರ್ಯಾಮಿ. ಅದು ಮಾತ್ರ ಸತ್ಯ.

ಕಾರಿಕೆಯಲ್ಲಿ 'ಸುಶಿಕ್ಷಿತಃ' ಎಂಬುದನ್ನು ಸ್ವಪ್ನದರ್ಶಿಗೂ ಅನ್ವಯಿಸಿಕೊಳ್ಳಬೇಕು. ಗ್ರಂಥಗಳಲ್ಲಿ ಓದಿಯೋ ಬಲ್ಲವರಿಂದ ಕೇಳಿಯೋ ಯಾವಾತನಿಗೆ ಸ್ವರ್ಗಾದಿಗಳ ಪರಿಚಯವಾಗಿ ಸಂಸ್ಕಾರ ಉಂಟಾಗಿರುತ್ತದೆಯೋ ಆತನಿಗೆ ಮಾತ್ರ ಪೂರ್ವಸಂಸ್ಕಾರದಿಂದ ಸಂಭವಿಸುತ್ತವೆ. ಸ್ವಪ್ನದೃಶ್ಯದಲ್ಲಿಯೂ ಆಗುವ ವಿಚಿತ್ರ ಘಟನೆಗಳು ಮನಸ್ಸಿನ ವಿಚಿತ್ರ ಚೇಷ್ಟೆಯಾಗಿರುತ್ತದೆ.

**ಸ್ವಪ್ನವೃತ್ತಾವಪಿ ತ್ವಂತಶ್ಚೇತಸಾ ಕಲ್ಪಿತಂ ತ್ವಸತ್ ।**
**ಬಹಿಶ್ಚೇತೋಗೃಹೀತಂ ಸದ್‌ದೃಷ್ಟಂ ವೈತಥ್ಯಮೇತಯೋಃ ॥೯॥**

**ಸ್ವಪ್ನವೃತ್ತೌ ಅಪಿ** = ಸ್ವಪ್ನಾವಸ್ಥೆಯಲ್ಲಿಯೂ ಸಹ, **ಅಂತಶ್ಚೇತಸಾ** = ಮನಸ್ಸಿನೊಳಗೇ, **ಕಲ್ಪಿತಂ** = ಕಲ್ಪಿಸಿಕೊಂಡದ್ದು, **ಅಸತ್** = ಇಲ್ಲದ ವಸ್ತು-ಸತ್ಯವಾದ್ದಲ್ಲ, **ಬಹಿಶ್ಚೇತೋಗೃಹೀತಂ ತು** = ಮನಸ್ಸಿನ ಹೊರಗೆ ಇಂದ್ರಿಯಗಳ ಮೂಲಕ ಗೃಹೀತವಾದದ್ದಾದರೋ, **ಸತ್** = ಇರತಕ್ಕದ್ದು, ಸತ್ಯವಾದದ್ದು ಎಂದು ಆಭಾಸವಾಗಿ ಕಾಣಬಹುದು. ಆದರೆ **ಏತಯೋಃ** = ಇವೆರಡು ದೃಶ್ಯಗಳಿಗೂ **ವೈತಥ್ಯಂ** = ಅಸತ್ಯತ್ವವು, **ದೃಷ್ಟಂ** = ಹಿಂದೆಯೇ ಜ್ಞಾತವಾಗಿದೆ.

ಕನಸಿನಲ್ಲಿ ಮನಸ್ಸಿನಿಂದಲೇ ಕಲ್ಪಿಸಿಕೊಳ್ಳುವ ವಸ್ತುವಿರುತ್ತದೆ. ಅದನ್ನು ಅಸತ್ ಎನ್ನಬಹುದು. ಏಕೆಂದರೆ, ಅದು ಒಡನೆಯೇ ನಾಶವಾಗಿಬಿಡುತ್ತದೆ. ಇಂದ್ರಿಯಗಳಿಂದ ತಿಳಿಯಲ್ಪಡುವ ದೃಶ್ಯಗಳೂ ಇರುತ್ತವೆ. ಅವನ್ನು ಸತ್

ಎನ್ನಬೇಕಾಗುತ್ತದೆ. ಏಕೆಂದರೆ, ಕನಸಿನಲ್ಲಿಯೂ ಬಾಹ್ಯೇಂದ್ರಿಯಗಳಾದ ಕಣ್ಣಿಂದ ನೋಡುತ್ತಾನೆ. ಕಿವಿಯಿಂದ ಕೇಳುತ್ತಾನೆ. ಹೀಗೆ ಕನಸಿನಲ್ಲಿ ಕಂಡ ಸದಸದ್ ವಸ್ತುಗಳೆಲ್ಲವೂ ಅಸತ್ಯ ವೆಂದು ಎಚ್ಚರವಾದೊಡನೆ ತಿಳಿದು ಹೋಗುತ್ತದೆ!

ಇದೇ ಪರಿಸ್ಥಿತಿ ಜಾಗ್ರತ್ತಿಗೂ ಅನ್ವಯಿಸುತ್ತದೆ –

**ಜಾಗ್ರದ್‌ವೃತ್ತಾವಪಿ ತ್ವಂತಶ್ಚೇತಸಾ ಕಲ್ಪಿತಂ ತ್ವಸತ್ ।**
**ಬಹಿಶ್ಚೇತೋ ಗೃಹೀತಂ ಸದ್ ಯುಕ್ತಂ ವೈತಥ್ಯಮೇತಯೋಃ ॥೧೦॥**

ಹೀಗೆ ಜಾಗರದಲ್ಲಿಯೂ ಮನಸ್ಸಿನಿಂದ ಕಲ್ಪಿಸಿಕೊಂಡದ್ದು ಅಸತ್. ಮನಸ್ಸಿನ ಹೊರಗೆ ಬಾಹ್ಯೇಂದ್ರಿಯಗಳ ಮೂಲಕ ಗೃಹೀತವಾದ ಘಟಪಟಾದಿಗಳು ಸತ್ ಎನ್ನಬಹುದು. ಈ ಸದಸತ್ತುಗಳೆರಡೂ ಕನಸಿನಲ್ಲಿ ಕಂಡವುಗಳಂತೆ ಮಿಥ್ಯೆಯೇ ಎಂದು ಹಿಂದೆ ಪ್ರತಿಪಾದಿಸಲಾಗಿದೆ.

ಕನಸಿನಲ್ಲಿ ನೇತ್ರಾದಿ ಬಾಹ್ಯೇಂದ್ರಿಯಗಳು ಸುಪ್ತವಾಗಿರುತ್ತವೆಯೆಂದು ಹೇಳುವುದು ಜಾಗ್ರತ್ತಿನ ದೃಷ್ಟಿಯಿಂದ. ಆದರೆ ಸ್ವಪ್ನಾವಸ್ಥೆಗೆ ಸಂಬಂಧಿಸಿದಂತೆ ಬಾಹ್ಯೇಂದ್ರಿಯಗಳು ಕೆಲಸ ಮಾಡುತ್ತಿರುವಂತೆಯೇ ಆ ಸಮಯದಲ್ಲಿ ತೋರುತ್ತದೆ ಯೆಂಬುದನ್ನು ಲಕ್ಷಿಸಬೇಕು. ಜಾಗ್ರತ್ತಿನಂತೆ ಸ್ವಪ್ನದಲ್ಲಿಯೂ ಸತ್, ಅಸತ್ ಎಂದು ಎರಡು ವಿಭಾಗಗಳನ್ನು ಮಾಡಬಹುದೆಂಬುದು ಇಲ್ಲಿ ಗ್ರಹಿಸಬೇಕಾದದ್ದು. ಪರಮಾರ್ಥ ದೃಷ್ಟಿಯಿಂದ ಜಾಗ್ರತ್‌ಸ್ವಪ್ನಗಳಿಗೆ ಭೇದವಿಲ್ಲ.

**ಉಭಯೋರಪಿ ವೈತಥ್ಯಂ ಭೇದಾನಾಂ ಸ್ಥಾನಯೋರ್ಯದಿ ।**
**ಕ ಏತಾನ್ ಬುಧ್ಯತೇ ಭೇದಾನ್ ಕೋ ವೈ ತೇಷಾಂ ವಿಕಲ್ಪಕಃ ॥೧೧॥**

**ಉಭಯೋಃ ಸ್ಥಾನಯೋರಪಿ** = ಜಾಗ್ರತ್–ಸ್ವಪ್ನಗಳೆಂಬ ಎರಡು ಅವಸ್ಥೆಗಳಲ್ಲಿಯೂ ದೃಷ್ಟವಾದ, **ಭೇದಾನಾಂ** = ನಾನಾ ಪದಾರ್ಥಗಳಿಗೆ, **ಯದಿ ವೈತಥ್ಯಂ** = ಮಿಥ್ಯಾತ್ವವೇ ಆಗಿಬಿಡುವುದಾದರೆ, **ಏತಾನ್ ಭೇದಾನ್** = ನಾನಾ ಭೇದಗಳುಳ್ಳ ಈ ಪದಾರ್ಥಗಳನ್ನು , **ಕಃ ಬುಧ್ಯತೇ** = ತಿಳಿದುಕೊಳ್ಳತಕ್ಕವನು ಯಾರು? **ವಾ** = ಮತ್ತು **ತೇಷಾಂ** = ಆ ಭೇದಗಳೆಲ್ಲವನ್ನು, **ವಿಕಲ್ಪಕಃ** = ವಿಂಗಡಿಸಿ ಕಲ್ಪನೆ ಮಾಡಿಕೊಳ್ಳತಕ್ಕವನು ಯಾರು?

ಜಾಗ್ರತ್ತಿನಲ್ಲಿ ಮತ್ತು ಸ್ವಪ್ನದಲ್ಲಿ ಕಾಣತಕ್ಕವೆಲ್ಲವೂ ಮಿಥ್ಯೆಯಾದರೆ ವ್ಯವಹಾರವಾದರೂ ಹೇಗೆ ನಡೆದೀತು? ಈ ಪದಾರ್ಥಗಳನ್ನು ತಿಳಿದುಕೊಳ್ಳತಕ್ಕವನೂ ಮಿಥ್ಯೆಯಾಗಿ ಬಿಡುತ್ತಾನೆ. ಆಗ ಜಾಗ್ರತ್ತಿನಲ್ಲಿ ಇವನ್ನು ನೋಡಿ ಸ್ವಪ್ನದಲ್ಲಿ ಸ್ಮರಿಸಿಕೊಳ್ಳತಕ್ಕವನೂ ಇಲ್ಲವೆಂದಾಗಿ ಬಿಡುತ್ತದೆ.

ಸ್ವಪ್ನದಲ್ಲಿ ನೋಡಿದ ವಸ್ತುಗಳು ಜಾಗ್ರತ್ತಿನಲ್ಲಿ ಬಾಧಿತವಾಗುವುದರಿಂದ ಸ್ವಪ್ನದ ವಸ್ತುಗಳು ಮಿಥ್ಯೆಯೆನ್ನಲು ಸಾಧ್ಯವಾಗುತ್ತದೆ. ಸ್ವಪ್ನದ ವಸ್ತುಗಳನ್ನು ನೋಡುವ ಬೋದ್ಧೃವೇ ಇಲ್ಲದಾಗ ಭ್ರಾಂತಿಬಾಧೆಗಳು ಹೇಗೆ ಉಪಪನ್ನ ವಾಗುತ್ತವೆ? ಭ್ರಾಂತಿಯು ಬರುವಾಗ ಎರಡು ಪದಾರ್ಥಗಳು ಇರಬೇಕು. ಹಗ್ಗವಿದ್ದರೆ ಹಾವು ಎಂಬ ಭ್ರಮೆ ಬರುತ್ತದೆ. ಆಗ ಹಾವೂ ಇನ್ನೊಂದೆಡೆಯಲ್ಲಿ ಇರಬೇಕು. ಎರಡೂ ಇಲ್ಲದಿದ್ದರೆ ಭ್ರಾಂತಿ ಹೇಗೆ ಬರುತ್ತದೆ? ಆಮೇಲೆ ಇವೆಲ್ಲವೂ ವಿಕಲ್ಪಗಳಾದರೆ ವಿಕಲ್ಪಕನು ಯಾರು? ನಿಮ್ಮ ಹೇಳಿಕೆಯಂತೆ ವಿಕಲ್ಪಕನೂ ಮಿಥ್ಯೆಯಾಗುತ್ತಾನೆ ಮತ್ತು ಇಂದ್ರಿಯಗಳೂ ಮನಸ್ಸೂ ಇದ್ದರಲ್ಲವೆ ಪದಾರ್ಥಗಳನ್ನು ಕಂಡು ವಿಕಲ್ಪಿಸುವುದು? ಅವೂ ನಿಮ್ಮ ಮತದಲ್ಲಿ ಮಿಥ್ಯೆಯಾಗುತ್ತವೆ. ಇದು ಮಿಥ್ಯೆ ಯೆಂದೂ ಬಾಧಿತವೆಂದೂ ತಿಳಿಯತಕ್ಕವನೆಲ್ಲಿದ್ದಾನೆ? ಈ ಪ್ರಕಾರದಲ್ಲಿ ಜಾಗ್ರತ್ ಸ್ವಪ್ನಗಳೆರಡೂ ಮಿಥ್ಯೆಯಾದರೆ ಶೂನ್ಯವಾದವಾಗಿ ಬಿಡುತ್ತದೆ. ಅದು ವೇದಬಾಹ್ಯ ವಾದ್ದರಿಂದ ಅದನ್ನು ನಾವು ಒಪ್ಪುವುದು ಎಂದಿಗೂ ಇಷ್ಟವಲ್ಲ. ಸ್ಥಾನ ದ್ವಯಾತಿರಿಕ್ತವಾದ ಒಂದು ತತ್ತ್ವವು ಸತ್ಯವಾದದ್ದು ಇರಲೇಬೇಕು. ಅದಿಲ್ಲದೆ ಸುಪ್ರಸಿದ್ಧವಾದ ಈ ಲೋಕವ್ಯವಹಾರವು ನಡೆಯುವುದೇ ಇಲ್ಲ. ಆದ್ದರಿಂದ ಈ ಮಿಥ್ಯಾವಾದವನ್ನು ಒಪ್ಪಲು ಶಕ್ಯವಿಲ್ಲ ಎಂದು ತಾತ್ಪರ್ಯ.

**ಕಲ್ಪಯತ್ಯಾತ್ಮನಾಽತ್ಮಾನಮಾತ್ಮಾ ದೇವಃ ಸ್ವಮಾಯಯಾ ।**
**ಸ ಏವ ಬುಧ್ಯತೇ ಭೇದಾನಿತಿ ವೇದಾಂತ ನಿಶ್ಚಯಃ ॥೧೨॥**

**ದೇವಃ** = ಸ್ವಯಂಪ್ರಕಾಶನಾದ, **ಆತ್ಮಾ** = ಆತ್ಮನು, **ಆತ್ಮಾನಂ** = ತನ್ನನ್ನು , **ಆತ್ಮನಾ** = ತನ್ನಿಂದಲೇ, **ಸ್ವಮಾಯಯಾ** = ತನ್ನ ಮಾಯೆಯ ಸಹಾಯದಿಂದ, **ಕಲ್ಪಯತಿ** = ಭಿನ್ನಾಕಾರದ ವಸ್ತುಗಳನ್ನಾಗಿ, **ಕಲ್ಪಯತಿ** = ಕಲ್ಪಿಸುತ್ತಾನೆ. **ಸ ಏವ** = ಆತನೇ ಸ್ವಯಂ, **ಭೇದಾನ್** = ನಾನಾ ಭಿನ್ನ ಪದಾರ್ಥಗಳನ್ನು, **ಬುಧ್ಯತೇ** = ತಿಳಿಯುತ್ತಾನೆ. **ಇತಿ** = ಹೀಗೆಂದು, **ವೇದಾಂತನಿಶ್ಚಯಃ** = ವೇದಾಂತದ ನಿರ್ಣಯವಾಗಿರುತ್ತದೆ.

ಹಿಂದಿನ ಕಾರಿಕೆಯಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರ. ಆತ್ಮನೊಬ್ಬನೇ ಸ್ವಯಂಪ್ರಕಾಶನಾಗಿ ವಿರಾಜಿಸುತ್ತಾನೆ. ಆತನು ತನ್ನ ಮಾಯೆಯಿಂದ ತನ್ನನ್ನೇ ನಾನಾ ಪ್ರಕಾರದ ಪದಾರ್ಥಗಳನ್ನಾಗಿ, ತನ್ನಲ್ಲಿಯೇ ತೋರಿಸಿಕೊಳ್ಳುತ್ತಾನೆ. ತನ್ನ ಈ ಲೀಲೆಗಳನ್ನು ತಾನೇ ನೋಡುತ್ತಾನೆ. ಕುಂಬಾರನಿಗೆ ಗಡಿಗೆಯನ್ನು ನಿರ್ಮಿಸಲು ಬೇಕಾದ ಮಣ್ಣು, ಚಕ್ರ, ಕೋಲು ಮುಂತಾದ ಯಾವ ಸಾಮಗ್ರಿಯೂ ಬೇಕಾಗಿಲ್ಲ. ಎಲ್ಲವೂ ತಾನೇ ಆಗಿ ತೋರಿಕೊಳ್ಳುತ್ತಾನೆ. ರಜ್ಜುಸರ್ಪಸ್ಥಳದಲ್ಲಿ

ರಜ್ಜುವನ್ನು ಸರ್ಪವನ್ನಾಗಿ ಮಾಡಲು ಯಾವ ವಸ್ತುವೂ ಬೇಡವಷ್ಟೆ ಮತ್ತು ಯಾವನು ಸರ್ಪವನ್ನಾಗಿ ಮಾಡಿಕೊಂಡಿದ್ದಾನೋ ಅದನ್ನು ಅವನೇ ನೋಡುತ್ತಾನೆ! ಆದ್ದರಿಂದ ಹಿಂದೆ ಕೇಳಿದ ಎಲ್ಲ ಪ್ರಶ್ನೆಗಳಿಗೂ ಇದೇ ಉತ್ತರ. ಉಪನಿಷತ್ತುಗಳಲ್ಲಿ ಯಾವುದು ನಿರ್ಣೀತವಾಗಿದೆಯೋ ಅದನ್ನು ಇಲ್ಲಿ ಹೇಳಿದ್ದೇವೆ. ಇದು ನಮ್ಮ ಕಲ್ಪನೆಯಲ್ಲ.

**ವಿವರಣೆ : ಆತ್ಮನ ಆಕಾಶಃ ಸಂಭೂತಃ** (ತೈತ್ತಿ.೨-೧) ಇತ್ಯಾದಿ ಶ್ರುತಿಗಳಿಂದ ಆತ್ಮನೊಬ್ಬನಿದ್ದಾನೆಂದು ಸಿದ್ಧವಾಗುತ್ತದೆ. **'ತದಾತ್ಮಾನಂ ಸ್ವಯಮಕುರುತ'** (ತೈತ್ತಿ.೨-೭) ಎಂಬ ಶ್ರುತಿಯು ಒಬ್ಬನೇ ಕರ್ತೃವೂ ಕರ್ಮವೂ ಆಗಿದ್ದಾನೆಂದು ತಿಳಿಸುತ್ತದೆ. ಇದರಿಂದ ಕರ್ತೃ, ಕರ್ಮ, ಕರಣ, ಅಧಿಕರಣ ಮೊದಲಾದವೆಲ್ಲವೂ ಆತ್ಮನೇ ಎಂದು ಸಿದ್ಧವಾಗುತ್ತದೆ. ಇದು ಲೋಕದಲ್ಲಿ ಅಸಂಭವವೆಂದು ತೋರಿದರೂ ಮಾಯಾಶಕ್ತಿಯಿಂದ ಇದೆಲ್ಲವೂ ಸಂಭವಿಸಲಡ್ಡಿ ಇಲ್ಲ. **''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ''** ಎಂಬ ಶ್ವೇತಾಶ್ವತರೋಪನಿಷತ್ತು ಆತ್ಮನ ಮಾಯಾಶಕ್ತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. **''ಸಂಭವಾಮ್ಯಾತ್ಮಮಾಯಯಾ''** ಎಂದು ಗೀತೆಯಲ್ಲಿ (ಗೀತಾ ೪-೬) ಭಗವಂತನೇ ಹೇಳಿಕೊಂಡಿದ್ದಾನೆ. **''ಬಹುಸ್ಯಾಂ ಪ್ರಜಾಯೇಯ''** ಎಂಬ ಶ್ರುತಿಯು (ಛಾಂ.೬-೨-೨) ಒಬ್ಬನೇ ಬಹುವಾದನೆಂದೂ **''ಆತ್ಮೈವೇದಂ ಸರ್ವಂ''** ಎಂಬ ಶ್ರುತಿಯು (ಛಾಂ. ೭-೨೫-೨) ಸ್ಥಾವರ ಜಂಗಮಾತ್ಮಕವಾದ ವಿಶ್ವವೆಲ್ಲವೂ ಬ್ರಹ್ಮವೇ ಎಂದು ಹೇಳುವುದರಿಂದಲೂ ಚೈತನ್ಯಸ್ವರೂಪನಾದ ಆತ್ಮನು ಜಡವಸ್ತುವಾಗಿಯೂ ತೋರಿಕೊಳ್ಳುತ್ತಿದ್ದಾನೆಂದು ಸ್ಫುಟವಾಗಿ ಗೊತ್ತಾಗುತ್ತದೆ. ಈ ಮಾಯಾಪ್ರಪಂಚವನ್ನು ನೋಡತಕ್ಕವನೂ ಆತ್ಮನೇ ಆಗಿದ್ದಾನೆಂಬುದೂ ಪ್ರಾಮಾಣಿಕವೇ. **''ಅದೃಷ್ಟೋ ದ್ರಷ್ಟಾ''** (ಬೃಹ. ೩-೭-೨೩) ಇತ್ಯಾದಿ ಶ್ರುತಿಗಳು ಆತ್ಮನೇ ದ್ರಷ್ಟಾರನೂ ಆಗಿದ್ದಾನೆಂಬುದನ್ನು ತಿಳಿಸುತ್ತವೆ. ಆದ್ದರಿಂದ ಕಾರಿಕೆಯಲ್ಲಿ **''ಕಲ್ಪಯತ್ಯಾತ್ಮನಾತ್ಮಾನಮಾತ್ಮಾ ದೇವಃ ಸ್ವಮಾಯಯಾ''** ಎಂದು ಹೇಳಿರುವುದು ಪ್ರಾಮಾಣಿಕವಾದದ್ದು. ಹೀಗೆ ಸರ್ವಜ್ಞನೂ ಅದ್ವಿತೀಯನೂ ಆದ ಪರಮಾತ್ಮನನ್ನು ಅದ್ವೈತಸಿದ್ಧಾಂತವು ವೇದ ಪ್ರಾಮಾಣ್ಯದಿಂದಲೇ ಅಂಗೀಕರಿಸಿದೆ. **''ಇಂದ್ರೋ ಮಾಯಾಭಿಃ ಪುರುರೂಪ ಈಯತೇ''.**

**ವಿಕರೋತ್ಯಪರಾನ್ ಭಾವಾನಂತಶ್ಚಿತ್ತೇ ವ್ಯವಸ್ಥಿತಾನ್ ।**
**ನಿಯತಾಂಶ್ಚ ಬಹಿಶ್ಚಿತ್ತ ಏವಂ ಕಲ್ಪಯತೇ ಪ್ರಭುಃ ॥೧೩॥**

**ಪ್ರಭುಃ** = ಸರ್ವಶಕ್ತನಾದ ಆತ್ಮನು, **ಅಂತಶ್ಚಿತ್ತೇ** = ಚಿತ್ತದಲ್ಲಿ,

**ವ್ಯವಸ್ಥಿತಾನ್** = ವಾಸನಾರೂಪದಿಂದ ನೆಲೆಸಿರುವ, **ಅಪರಾನ್ ಭಾವಾನ್** = ಅವ್ಯಾಕೃತವಾದ ಅನಿಯತ ಪದಾರ್ಥಗಳನ್ನೂ, **ಬಹಿಶ್ಚಿತ್ತೇ** = ಚಿತ್ತದ ಹೊರಗೆ ಬಾಹ್ಯದಲ್ಲಿ, **ನಿಯತಾಂಶ್ಚ** = ನಿಯಮದಿಂದ ವ್ಯಾಕೃತವಾದ ಪೃಥಿವ್ಯಾದಿ ಪದಾರ್ಥಗಳನ್ನೂ, **ಏವಂ** = ಹೀಗೆಯೇ ಅವುಗಳ ನಾಮರೂಪಗಳನ್ನೂ **ಕಲ್ಪಯತೇ** = ಕಲ್ಪಿಸುತ್ತಾನೆ.

೧೧ನೆಯ ಕಾರಿಕೆಯಲ್ಲಿ ಎತ್ತಿದ ಎಲ್ಲ ಶಂಕೆಗಳಿಗೂ ಉತ್ತರವನ್ನು ಹೇಳಿದ್ದಾಯಿತು. ಹಿಂದಿನ ಶ್ಲೋಕದಲ್ಲಿ ಹೇಳಿದ ಕಲ್ಪನೆಯ ಪ್ರಕಾರ ವಿಧಿ, ವಿಧಾನಗಳನ್ನು ಇಲ್ಲಿ ತಿಳಿಸಲಾಗಿದೆ. ಲೋಕದಲ್ಲಿ ಪ್ರತಿಯೊಬ್ಬನೂ ಒಂದು ಕಾರ್ಯವನ್ನು ಮಾಡುವಾಗ ಮೊದಲು ಆ ಕಾರ್ಯದ ಸ್ವರೂಪವು ಹೇಗಿರಬೇಕೆಂದು ಸಂಕಲ್ಪಿಸಿಕೊಳ್ಳುತ್ತಾನೆ. ಆಗ ಕಾರ್ಯದ ನಾಮರೂಪಗಳು ಅವ್ಯಾಕೃತವಾಗಿರುತ್ತವೆ. ಉದಾಹರಣೆಗೆ, ಮೊದಲು ಸಂಕಲ್ಪಿಸಿ ಆಮೇಲೆ ಒಬ್ಬ ಕುಂಬಾರನು ಘಟವನ್ನೂ ನೆಯ್ಗೆಯವನು ಬಟ್ಟೆಯನ್ನೂ ಸಿದ್ಧಪಡಿಸುತ್ತಾರೆ. ಆಗ ಘಟ, ವಸ್ತ್ರಗಳ ನಾಮರೂಪಗಳು ವ್ಯಾಕೃತವಾಗುತ್ತವೆ.

ಹೀಗೆಯೇ ಆದಿಕರ್ತನಾದ ಭಗವಂತನು ಮಾಯಾಸ್ವರೂಪದ ತನ್ನ ಚಿತ್ತದಲ್ಲಿ ನೆಲೆಸಿದ ಅವ್ಯಾಕೃತವಾದ ಪೃಥಿವೀ, ಜಲ ಇತ್ಯಾದಿ ಪ್ರಪಂಚವನ್ನು ಇಚ್ಛಾಮಾತ್ರದಿಂದಲೇ ಬಾಹ್ಯದಲ್ಲಿ ಕಲ್ಪಿಸುತ್ತಾನೆ. ಆಗ ಜಗತ್ತಿನ ಎಲ್ಲ ಪದಾರ್ಥಗಳೂ ನಾಮರೂಪಗಳಿಂದ ವ್ಯಾಕೃತವಾದವೆಂದು ತಿಳಿಯಬೇಕು. ಲೋಕದಲ್ಲಿ ಜನರು ನಡೆಸುವ ಸಕಲ ಕಾರ್ಯಗಳೂ ಭಗವದಿಚ್ಛೆಯಂತೆ ಸಂಕಲ್ಪಪೂರ್ವಕವಾಗಿಯೇ ನಡೆಯುತ್ತವೆ. ಶ್ಲೋಕದಲ್ಲಿರುವ ಅಂತಶ್ಚಿತ್ತ ಬಹಿಶ್ಚಿತ್ತ ಶಬ್ದಗಳನ್ನು ಪ್ರಥಮಾಂತವಾಗಿಯೂ ಅನ್ವಯಿಸಿಕೊಳ್ಳಬಹುದು. **ಅಂತಶ್ಚಿತ್ತಃ** = ಮನಸ್ಸಿನಲ್ಲಿ ಸಂಕಲ್ಪಿಸಿದವನಾಗಿ, **ಬಹಿಶ್ಚಿತ್ತಃ** = ಬಾಹ್ಯಚಿತ್ತನಾಗಿ.

**ಚಿತ್ತಕಾಲಾ ಹಿ ಯೇಽಂತಸ್ತು ದ್ವಯಕಾಲಾಶ್ಚಯೇ ಬಹಿಃ |**
**ಕಲ್ಪಿತಾ ಏವ ತೇ ಸರ್ವೇ ವಿಶೇಷೋ ನಾನ್ಯಹೇತುಕಃ ||೧೪||**

**ಅಂತಃ** = ಒಳಗೆ ಮನಸ್ಸಿನಲ್ಲಿ, **ಚಿತ್ತಕಾಲಾಃ** = ಚಿತ್ತವೇ ಪರಿಚ್ಛೇದಕವಾದ ಕಾಲವುಳ್ಳ, **ಯೇ ಭಾವಾಃ** = ಯಾವ ಕನಸಿನ ಪದಾರ್ಥಗಳಿವೆಯೋ, **ಬಹಿಃ** = ಬಾಹ್ಯದಲ್ಲಿ, **ದ್ವಯಕಾಲಾಃ** = ಎರಡು (ಅನೇಕ) ಪರಿಚ್ಛೇದಕವಾದ ಕಾಲಗಳುಳ್ಳ, **ಯೇ ಭಾವಾಃ** = ಜಾಗ್ರತ್ತಿನ ಯಾವ ಪದಾರ್ಥಗಳಿವೆಯೋ **ತೇ ಸರ್ವೇ** = ಆ ಎಲ್ಲ ಪದಾರ್ಥಗಳೂ, **ಕಲ್ಪಿತಾ ಏವ** = ಕಲ್ಪಿತವಾದ ಮಿಥ್ಯಾವಸ್ತುಗಳೇ ಸರಿ. **ವಿಶೇಷಃ** = ಅವುಗಳಿಗಿರುವ ವಿಶೇಷವು, **ಅನ್ಯಹೇತುಕಃ** = ಕಲ್ಪಿತವಲ್ಲದ ಕಾರಣದಿಂದ, **ನ** = ಅಲ್ಲ.

ಸ್ವಪ್ನದಲ್ಲಿ ಕಂಡ ವಸ್ತುಗಳಂತೆ ಜಾಗರದಲ್ಲಿ ಕಾಣುವ ವಸ್ತುಗಳೂ ಮಿಥ್ಯೆಯೆಂದು ಹೇಳಲಾಯಿತಷ್ಟೆ. ಅದರಲ್ಲಿ ಒಂದು ಶಂಕೆಯುಂಟು. ಸ್ವಪ್ನದ ವಸ್ತುಗಳು ಚಿತ್ತಕಾಲಗಳು. ಚಿತ್ತವು ಕಲ್ಪಿಸಿಕೊಂಡ ಕಾಲದಲ್ಲಿ ಮಾತ್ರ ಇದ್ದು ಆಮೇಲೆ ಇರುವುದೇ ಇಲ್ಲ. ಕೆಲವು ನಿಮಿಷಗಳವರೆಗೆ ಇದ್ದರೂ ಅದು ಚಿತ್ತದ ಕಲ್ಪನೆಯ ಕಾಲವೇ ಆಗಿರುತ್ತದೆ. ಎಷ್ಟು ಹೊತ್ತು ಆ ವಸ್ತು ಇತ್ತೆಂದು ಹೇಳಲು ಹೊತ್ತನ್ನು ಅಳೆಯಲು ಪರಿಚ್ಛೇದಕವಾದ ಕಾಲವೇ ಇರುವುದಿಲ್ಲ. ಜಾಗರದ ವಸ್ತು ಹಾಗಲ್ಲ. ಈಗ ಒಂದು ಗಡಿಗೆಯನ್ನು ನೋಡುತ್ತೇವೆ. ಆಮೇಲೆ ಅದನ್ನು ಮರೆಯುತ್ತೇವೆ. ನಾಳೆ ಬಂದು ನೋಡಿದರೂ ಗಡಿಗೆ ಅಲ್ಲಿಯೇ ಇರುತ್ತದೆ. ಆಗ ಇಪ್ಪತ್ತು ನಾಲ್ಕು ಘಂಟೆಗಳಿಂದ ಈ ಗಡಿಗೆ ಇಲ್ಲಿ ಇದೆ ಎಂದು ಹೇಳಬಹುದು. ಈ ಒಂದು ದಿನದ ಕಾಲವು ಆ ವಸ್ತುವಿನ ಪರಿಚ್ಛೇದಕವಾಗುತ್ತದೆ ಎಂದರೆ ಗಡಿಗೆಯ ಅಸ್ತಿತ್ವದ ಕಾಲವನ್ನು ದಿನದ ಕಾಲವು ಅಳೆಯುತ್ತದೆ. ಹಾಗೆಯೇ **"ಗೋದೋಹಮಾಸ್ತೇ"** ಎಂಬುದು ಇನ್ನೊಂದು ಉದಾಹರಣೆ. ಹಸುವಿನ ಹಾಲನ್ನು ಕರೆಯುವವರೆಗೂ ಇರುತ್ತಾನೆ ಎಂದರ್ಥ. ಹಾಲನ್ನು ಕರೆಯುವಷ್ಟು ಕಾಲವು ಅವನ ಇರುವಿಕೆಯ ಕಾಲವನ್ನು ಅಳತೆ ಮಾಡುತ್ತದೆ. ಅವನ ಇರುವಿಕೆಯು ಹಾಲು ಕರೆಯುವ ಕಾಲವನ್ನು ಅಳತೆ ಮಾಡುತ್ತದೆ. ಹೀಗೆ ಜಾಗರದ ವಸ್ತುಗಳೆಲ್ಲವೂ ದ್ವಯಕಾಲಗಳು. ಸ್ವಪ್ನದ ವಸ್ತು ಸ್ವಲ್ಪ ಹೊತ್ತಿನ ಮೇಲೆ ಇರುವುದೇ ಇಲ್ಲ. ಎಷ್ಟು ಕ್ಷಣ ಇರುತ್ತದೆಯೋ ಅಷ್ಟೇ ಅದರ ಕಾಲ. ಆದ್ದರಿಂದ ಅದು ಚಿತ್ತಕಾಲವೆನಿಸುತ್ತದೆ. ಹೀಗೆ ಭೇದಗಳಿರುವುದರಿಂದ ಕನಸಿನ ವಸ್ತುವಿನಂತೆ ಜಾಗರದ ವಸ್ತುವೂ ಮಿಥ್ಯೆ ಎನ್ನುವುದು ಯುಕ್ತವಲ್ಲ ಎಂಬುದು ಶಂಕೆ.

ಇದಕ್ಕೆ ಉತ್ತರ ಸುಲಭವಾದದ್ದು. ಇಂದು ನೋಡಿದ ಗಡಿಗೆ ಹೇಗೆ ಕಲ್ಪಿತವೋ ಹಾಗೆಯೇ ನಾಳೆ ನೋಡುವ ಗಡಿಗೆಯೂ ಕಲ್ಪಿತವಾದದ್ದೇ! ಎರಡೂ ಕಲ್ಪಿತವಾದ್ದರಿಂದ ದ್ವಯಕಾಲ ಜಾಗರದಲ್ಲಿ ಎನ್ನುವುದೇ ಯುಕ್ತವಲ್ಲ. ಸ್ವಪ್ನದಲ್ಲಿಯೂ ಒಂದೇ ವಸ್ತು ಅದೇ ಸ್ವಪ್ನದಲ್ಲಿಯೇ ಮತ್ತೊಂದು ಸಲ ಕಾಣಿಸಬಹುದು. ಜಾಗರದಲ್ಲಿ ಕಾಣಿಸಿದ ಗಡಿಗೆ ನಾಳೆ ಇಲ್ಲದಿರಬಹುದು. ಆಗ ಜಾಗರದ ಗಡಿಗೆಯೂ ಚಿತ್ತಕಾಲವೇ ಆಗಿಬಿಡುತ್ತದೆ. ಮತ್ತು ಜಾಗರದ ದೃಷ್ಟಿಯಿಂದ ಸ್ವಪ್ನದ ಭೇದವನ್ನು ಹೇಳಬೇಕಾಗಿದೆ. ಸ್ವಪ್ನದಲ್ಲಾದರೋ ಜಾಗರವಿದೆಯೆಂಬುದೇ ತಿಳಿಯದು. ಸ್ವಪ್ನವೇ ಜಾಗ್ರತ್ತೆಂದು ತೋರುತ್ತದೆ. ಆದ್ದರಿಂದ ಸ್ವಪ್ನದಲ್ಲಿ ಜಾಗ್ರತ್ತೆಲ್ಲವೂ ಮಿಥ್ಯೆಯೇ ಆದಂತೆ ತಿಳಿಯಬೇಕಾಯಿತು. ಜಾಗ್ರತ್ತಿನಲ್ಲಿ ಸ್ವಪ್ನದ ಸ್ಮರಣೆ ಇದ್ದರೂ ಅಲ್ಲಿಯ ವಸ್ತುಗಳು ಮಿಥ್ಯೆಯೆಂಬುದು ಸರ್ವಸಂಮತ. ಹೀಗೆ ದೃಷ್ಟಿಭೇದದಿಂದ ಉಭಯವೂ ಮಿಥ್ಯೆಯೆಂದೇ ಸಿದ್ಧವಾಗುತ್ತದೆ.

ವಸ್ತುತಸ್ತು ಈ ಯುಕ್ತಿವಾದಕ್ಕೆ ಮಿತಿಯಿಲ್ಲ. ವೇದಾಂತ ಶಾಸ್ತ್ರವು ಶ್ರುತಿಯಿಂದ ಅನುಗೃಹೀತವಾದ ತರ್ಕವನ್ನು ಮಾತ್ರ ಆಶ್ರಯಿಸುತ್ತದೆ. **'ತ್ರಯಃ ಸ್ವಪ್ನಾಃ'** ಇತ್ಯಾದಿ ಶ್ರುತಿಗಳಿಂದ ಜಾಗರವು ಸಹ ಸ್ವಪ್ನವೇ ಆಗುತ್ತದೆ. ಎಂದರೆ ಜಾಗ್ರತ್ತಿನಲ್ಲಿ ತೋರುವುದು ಮಿಥ್ಯೆಯೆಂದರ್ಥ. ಅದಕ್ಕೆ ಅನುಸಾರವಾಗಿ ಯುಕ್ತಿಯಿಂದಲೂ ಸ್ವಪ್ನ ದೃಷ್ಟಾಂತದಿಂದಲೂ ದೃಶ್ಯವೆಲ್ಲವೂ ಮಿಥ್ಯೆಯೆಂದು ತಿಳಿಯಬೇಕು.

**ಅವ್ಯಕ್ತಾ ಏವ ಯೇಽಂತಸ್ತು ಸ್ಫುಟಾ ಏವ ಹಿ ಯೇ ಬಹಿಃ ।**
**ಕಲ್ಪಿತಾ ಏವ ತೇ ಸರ್ವೇ ವಿಶೇಷಸ್ತ್ವಿಂದ್ರಿಯಾಂತರೇ ॥೧೫॥**

**ಅಂತಃ** = ಮನಸ್ಸಿನೊಳಗೆ, **ಯೇ** = ಯಾವ ಪದಾರ್ಥಗಳು, **ಸ್ಫುಟಾ ಏವ** = ಸ್ಪಷ್ಟವಾಗಿಯೇ ತೋರುತ್ತವೆಯೋ, **ತೇ ಸರ್ವೇ** = ಆ ಎಲ್ಲ ಪದಾರ್ಥಗಳು, **ಕಲ್ಪಿತಾ ಏವ** = ಕಲ್ಪಿತವಾದವುಗಳೇ ಸರಿ. **ವಿಶೇಷಸ್ತು** = ಸ್ಪಷ್ಟತೆಯೆಂಬ ವಿಶೇಷವಾದರೋ, **ಇಂದ್ರಿಯಾಂತರೇ** = ಇತರ ಇಂದ್ರಿಯಗಳ ಸಂಬಂಧದಲ್ಲಿದೆ.

ಕನಸಿನಲ್ಲಿ ಕಾಣುವ ವಸ್ತುಗಳು ಮಸುಕು ಮಸುಕಾಗಿರುತ್ತವೆ. ಎಚ್ಚರದಲ್ಲಿ ಕಾಣತಕ್ಕವು ಸ್ಫುಟವಾಗಿ ತೋರುತ್ತವೆ. ಆದ್ದರಿಂದ ಕನಸಿನ ವಸ್ತುಗಳಂತೆ ಜಾಗರದ ವಸ್ತುಗಳನ್ನು ಹೋಲಿಸಿ ಮಿಥ್ಯೆಯೆನ್ನುವುದು ಸರಿಯಲ್ಲ ಎಂದು ಆಕ್ಷೇಪ. ಈ ಆಕ್ಷೇಪ ಸರಿಯಲ್ಲ. ಕನಸಿನಲ್ಲಿ ಕಾಣತಕ್ಕವನ್ನು ಮನಸ್ಸು ಕಲ್ಪಿಸಿ ಮನಸ್ಸೇ ನೋಡುತ್ತದೆ. ಆಗ ನೇತ್ರ ಮುಂತಾದ ಇಂದ್ರಿಯಗಳ ಸಹಾಯವಿರುವುದಿಲ್ಲ. ಎಚ್ಚರದಲ್ಲಿ ನೇತ್ರ ಮುಂತಾದ ಇಂದ್ರಿಯಗಳು ಜಾಗೃತವಾಗಿರುವುದರಿಂದ, ಅವು ವಸ್ತುಗಳನ್ನು ಚೆನ್ನಾಗಿ ಗಮನಿಸಿ ಮನಸ್ಸಿಗೆ ತಿಳಿಸುತ್ತವೆ. ಹೀಗೆ ಎಚ್ಚರದಲ್ಲಿ ಇಂದ್ರಿಯಗಳ ಸಹಾಯ ವಿರುವುದರಿಂದ ವಸ್ತುಗಳು ಸ್ಫುಟವಾಗಿ ತೋರಬಹುದು. ಎಚ್ಚರದಲ್ಲಿಯೇ ಬೆಳಕು ಮಸುಕಾಗಿದ್ದರೆ ವಸ್ತುಗಳು ಮಸುಕಾಗಿಯೂ ತೋರುತ್ತವೆ. ಕನಸಿನಲ್ಲಿಯೂ ಸ್ಫುಟವಾಗಿಯೇ ವಸ್ತುಗಳು ಕಾಣಿಸುವುದೂ ಉಂಟು. ಜಾಗರದಲ್ಲಿಯೂ ಮಿಥ್ಯಾವಸ್ತು ಸ್ಫುಟವಾಗಿ ಕಾಣುವುದುಂಟು. ಒಬ್ಬನಿಗೆ ಹಿತ್ತಾಳೆಯು ಚಿನ್ನವೆಂಬ ಭ್ರಮೆ ಹುಟ್ಟಿರುತ್ತದೆ ಎಂದು ತಿಳಿಯೋಣ. ಆತನು ಆ ಹಿತ್ತಾಳೆಯ ವಸ್ತುವನ್ನು ಕೈಯಲ್ಲಿ ಹಿಡಿದು ಚೆನ್ನಾಗಿ ಪರೀಕ್ಷಿಸಿದರೂ ಅವನಿಗೆ ಚಿನ್ನವೇ ಕಾಣುತ್ತದೆ! ಆದ್ದರಿಂದ ಮಸುಕು, ಸ್ಫುಟತೆ–ಎಂಬುದಕ್ಕೂ ಮಿಥ್ಯಾತ್ವಕ್ಕೂ ಸತ್ಯತೆಗೂ ಸಂಬಂಧವಿಲ್ಲ. ದೃಶ್ಯಗಳೆಲ್ಲವೂ ಎಚ್ಚರದಲ್ಲಿಯೂ ಸಹ ಮಿಥ್ಯೆಯೇ ಸರಿ.

**ಜೀವಂ ಕಲ್ಪಯತೇ ಪೂರ್ವಂ ತತೋ ಭಾವಾನ್ ಪೃಥಗ್ವಿಧಾನ್ ।**
**ಬಾಹ್ಯಾನಾಧ್ಯಾತ್ಮಿಕಾಂಶ್ಚೈವ ಯಥಾವಿದ್ಯಸ್ತಥಾ ಸ್ಮೃತಿಃ ॥೧೬॥**

**ಪೂರ್ವಂ** = ಮೊದಲು, **ಜೀವಂ** = ಜೀವವನ್ನು, **ಕಲ್ಪಯತೇ** = ಆ

ಪ್ರಭುವು ಕಲ್ಪಿಸುತ್ತಾನೆ. **ತತಃ** = ಅನಂತರ, **ಪೃಥಗ್ ವಿಧಾನ್** = ನಾನಾ ಬಗೆಯ, **ಬಾಹ್ಯಾನ್** = ಬಾಹ್ಯದಲ್ಲಿರುವ, **ಚೈವ** = ಮತ್ತು **ಆಧ್ಯಾತ್ಮಿಕಾನ್** = ದೇಹದಲ್ಲಿ ಇರುವ, **ಭಾವಾನ್** = ಪದಾರ್ಥಗಳನ್ನು ಕಲ್ಪಿಸುತ್ತಾನೆ. ಏಕೆಂದರೆ, **ಯಥಾವಿದ್ಯಃ** = ಯಾವ ರೀತಿಯ ವಿಜ್ಞಾನವುಳ್ಳವನಾಗುತ್ತಾನೋ, **ತಥಾಸ್ಮೃತಿಃ** = ಆ ಕ್ರಮದ ಸ್ಮೃತಿಯುಳ್ಳವನಾಗುತ್ತಾನೆ.

ಸರ್ವಪದಾರ್ಥಗಳೂ ಮಾಯೆಯಿಂದ ಕಲ್ಪಿತವಾದವುಗಳೆಂದು ಹೇಳಿದ್ದಾಯಿತು. ಈ ಪದಾರ್ಥಕಲ್ಪನೆಯು ಯಾವ ಕ್ರಮದಲ್ಲಿ ನಡೆಯುತ್ತದೆಯೆಂಬುದನ್ನು ಈಗ ಹೇಳಲಾಗುವುದು. ಹೇತು (ನಿಮಿತ್ತ) ಫಲ – ಇವು ಸೃಷ್ಟಿಯ ಕಾರಣಗಳು. ಪರಮಾತ್ಮನು ಮೊದಲು ಹೇತು ಫಲಾತ್ಮಕನಾದ ಜೀವನನ್ನು ಕಲ್ಪಿಸುತ್ತಾನೆ. ಧರ್ಮಾಧರ್ಮಗಳು ಜೀವನ ಕಲ್ಪನೆಗೆ ಹೇತುಗಳು. ಅವುಗಳಿಂದಾಗುವ ಸುಖದುಃಖಭೋಗಗಳು ಫಲಗಳು. ಈ ಹೇತು ಫಲಗಳು ಜೀವನಲ್ಲಿರುವುದರಿಂದ ಇವನು ಹೇತುಫಲಾತ್ಮಕನು. ಅಂತಃಕರಣವೆಂಬ ಉಪಾಧಿಯುಳ್ಳವನು ಜೀವ. ಯಾವ ಉಪಾಧಿಯೂ ಇಲ್ಲದ ಶುದ್ಧಾತ್ಮನಲ್ಲಿ ಜೀವನ ಕಲ್ಪನೆಯಾಗಿದೆ. ಮಹಾಕಾಶದಲ್ಲಿ ಘಟಾಕಾಶವಿರುವಂತೆ ಶುದ್ಧಾತ್ಮನಲ್ಲಿ ಜೀವನಿದ್ದಾನೆ ಎಂಬ ದೃಷ್ಟಾಂತವನ್ನು ಕೊಡ ಬಹುದು. ಕುಂಬಾರನು ಮಣ್ಣಿನಿಂದ ಘಟವನ್ನು ನಿರ್ಮಿಸಿದಂತೆ, ಈಶ್ವರನು ಮಾಯೆಯಿಂದ ಅಂತಃಕರಣವನ್ನು ನಿರ್ಮಿಸಿರುತ್ತಾನೆ. ನಾನು ಮಾಡುತ್ತೇನೆ, ನಾನು ಭೋಗಿಸುತ್ತೇನೆ, ಇದು ನನ್ನ ಮನೆ – ಇತ್ಯಾದಿ ಭಾವನೆಗಳುಳ್ಳವನು ಜೀವ.

ಜೀವನನ್ನು ಮೊದಲು ಕಲ್ಪಿಸುತ್ತಾನೆ ಎಂದು ಹೇಳಿದ್ದು–ಕಾಲದ ಕ್ರಮದಿಂದ 'ಮೊದಲು' ಎಂದಲ್ಲ, ಪ್ರತಿಪತ್ತಿ ಕ್ರಮದಿಂದ 'ಮೊದಲು' ಎಂದು ತಿಳಿಯಬೇಕು. ಪ್ರತಿಪತ್ತಿಯೆಂದರೆ ಜ್ಞಾನಸ್ಮೃತಿಗಳು. ಆದ್ದರಿಂದಲೇ ಪಂಚಮಹಾಭೂತಗಳನ್ನು ಭೋಗಾಯತನವಾದ ಶರೀರವನ್ನು ಸೃಷ್ಟಿಸಿ, ಅನಂತರ ಪರಮಾತ್ಮನು ಶರೀರದಲ್ಲಿ ಜೀವರೂಪನಾಗಿ ಅನುಪ್ರವೇಶ ಮಾಡಿದನು ಎಂಬ ಈ ಶ್ರುತಿವಚನಗಳು ಉಪಪನ್ನವಾಗುತ್ತವೆ. **''ತತ್‌ಸೃಷ್ಟ್ವಾ ತದೇವಾನು ಪ್ರಾವಿಶತ್''** (ತೈತ್ತಿ೨–೬) **''ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ''** (ಛಾಂ. ೬–೩–೨). ಆಧ್ಯಾತ್ಮಿಕ ಭಾವಗಳೆಂದರೆ ಹಸಿವು, ಬಾಯಾರಿಕೆ, ಸುಖ, ದುಃಖ, ಕಾಮ, ಕೋಪ ಮುಂತಾದವು. ಬಾಹ್ಯಭಾವಗಳೆಂದರೆ ಧಾನ್ಯ, ಜಲ, ಅಗ್ನಿ ಮುಂತಾದ ಭೋಗ್ಯವಾದ ಪ್ರಾಪಂಚಿಕ ಪದಾರ್ಥಗಳು. **'ಪೃಥಿವ್ಯಾ ಓಷಧಯಃ ಓಷಧೀಭ್ಯೋಽನ್ನಂ ಅನ್ನಾತ್ ಪುರುಷಃ'** (ತೈತ್ತಿ.೨–೧).

ಅಲ್ಲಿಂದ ಮುಂದಿನದು ಜೀವಾತ್ಮನ ಸೃಷ್ಟಿ. **'ಯಥಾ ವಿದ್ಯಸ್ತಥಾ ಸ್ಮೃತಿಃ'**

ವಿದ್ಯೆಯೆಂದರೆ ಜ್ಞಾನ. **ಯಥಾ** = ಯಾವ ಪ್ರಕಾರವುಳ್ಳ **ವಿದ್ಯಾ** = ಜ್ಞಾನವು **ಯಸ್ಯ ಸಃ** = ಯಾರಿಗಿದೆಯೋ ಅವನು **ಯಥಾವಿದ್ಯಃ. ತಥಾ** = ಅದೇ ಪ್ರಕಾರವುಳ್ಳ, **ಸ್ಮೃತಿಃ** = ಸ್ಮರಣೆಯು, **ಯಸ್ಯ ಸಃ** = ಯಾರಿಗಿದೆಯೋ ಅವನು, **ತಥಾಸ್ಮೃತಿಃ** = ಆ ಪ್ರಕಾರವಾದ ಸ್ಮರಣೆಯುಳ್ಳವನಾಗಿರುತ್ತಾನೆ. ಇದು ಜೀವನಿಗೆ ಅನ್ವಯಿಸುವ ವಿಶೇಷಣ. ಈ ಕ್ರಮದಿಂದ ಜೀವನು ನಡೆಸುವ ಸೃಷ್ಟಿ ಇರುತ್ತದೆ. ಅನ್ನವನ್ನು ತಿಂದರೆ ಹಸಿವು ಹೋಗುತ್ತದೆಯೆಂಬುದನ್ನು ತಾಯಿ ತಿಳಿಸಿರುತ್ತಾಳೆ. ಮತ್ತೆ ಹಸಿವಾದಾಗ ಅನ್ನದ ಸ್ಮರಣೆ ಬರುತ್ತದೆ. ಆಗ ಅನ್ನವನ್ನು ಮಾಡಿ ಕೊಳ್ಳುತ್ತಾನೆ. ಸ್ಮರಣೆಯಂತೆ ಮುಂದೆ ಜ್ಞಾನವೂ ಹುಟ್ಟಬಹುದು. ಈ ಪ್ರಕಾರವಾಗಿ ವಸ್ತು, ಗೃಹ, ಭಾವಿ ಇತ್ಯಾದಿಗಳು ಜೀವನಿಂದಾಗುವ ಸೃಷ್ಟಿಗಳು. ಆಧ್ಯಾತ್ಮಿಕ ಭಾವಗಳಿಂದ ಬಾಹ್ಯ ಪದಾರ್ಥಗಳ ನಿರ್ಮಾಣವಾಗುತ್ತದೆ. ಈ ಕಾರ್ಯವು ಮುಂದುವರಿಯುತ್ತಿರುವುದು.

**ಅನಿಶ್ಚಿತಾ ಯಥಾ ರಜ್ಜುರಂಧಕಾರೇ ವಿಕಲ್ಪಿತಾ ।**
**ಸರ್ಪಧಾರಾದಿಭಿರ್ಭಾವೈಸ್ತದ್ವದಾತ್ಮಾ ವಿಕಲ್ಪಿತಃ** ||೧೭||

**ಅನಿಶ್ಚಿತಾ** = ನಿಜಸ್ವರೂಪವು ಸರಿಯಾಗಿ ತಿಳಿಯಲ್ಪಡದಿರುವ, **ರಜ್ಜುಃ** = ಹಗ್ಗವು, **ಅಂಧಕಾರೇ** = ಕತ್ತಲಲ್ಲಿ, **ಯಥಾ** = ಹೇಗೆ, **ಸರ್ಪಧಾರಾದಿಭಿಃ** = ಸರ್ಪ, ನೀರಿನ ಧಾರೆ ಇತ್ಯಾದಿ, **ಭಾವೈಃ** = ವಸ್ತುಗಳಾಗಿರಬಹುದೆಂದು, **ಯಥಾ** = ಹೇಗೆ, **ವಿಕಲ್ಪಿತಾ** = ಭ್ರಮೆಗೆ ಒಳಗಾಗುವುದೋ, **ತಥಾ** = ಹಾಗೆಯೇ, **ಆತ್ಮಾ** = ಪರಮಾತ್ಮನು, **ವಿಕಲ್ಪಿತಃ** = ಅವಿದ್ಯೆಯಿಂದ ಜೀವನೆಂದೂ ಸಂಸಾರಿಯೆಂದೂ, **ವಿಕಲ್ಪಿತಃ** = ಭ್ರಮೆಗೆ ಒಳಗಾಗಿರುತ್ತಾನೆ.

ಜೀವಕಲ್ಪನೆಯು ಸರ್ವಕಲ್ಪನೆಗೂ ಮೂಲವೆಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಹಾಗಾದರೆ ಜೀವಕಲ್ಪನೆಗೆ ನಿಮಿತ್ತವೇನು? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ವಿದೆ. ಕತ್ತಲೆಯ ಮಬ್ಬಿನಲ್ಲಿ ಒಂದು ಹಗ್ಗವನ್ನು ಕಂಡಾಗ ಅದು ಸರ್ಪವೆಂದೋ ನೀರಿನ ಧಾರೆಯೆಂದೋ ದೊಣ್ಣೆಯೆಂದೋ ಭ್ರಮೆ ಬರುತ್ತದೆ. ಅದಕ್ಕೆ ಕತ್ತಲೆಯು ನಿಮಿತ್ತ. ಹಾಗೆಯೇ ಪರಮಾತ್ಮನನ್ನು ಸಂಸಾರಿಯಾದ ಜೀವನೆಂದು ಭ್ರಮಿಸ ಲಾಗಿದೆ. ಇದಕ್ಕೆ ಕತ್ತಲೆಯಂತಹ ಅವಿದ್ಯೆಯು ನಿಮಿತ್ತ. ಭ್ರಮೆಯು ಹೇತು ಫಲಾತ್ಮಕನಾದ ಜೀವನೆಂದೋ ಪ್ರಾಣವೆಂದೋ ಮನಸ್ಸೆಂದೋ ಇಂದ್ರಿಯ ಗಳೆಂದೋ ಬಂದಿರುತ್ತದೆ. ಹಾಗೆ ವಾದಿಸತಕ್ಕವರಿದ್ದಾರೆ. ಆತ್ಮನ ನಿಜಸ್ವರೂಪ ವನ್ನು ನಿಶ್ಚಯವಾಗಿ ತಿಳಿಯದಿರುವುದೇ ಅದಕ್ಕೆ ಕಾರಣ. ತಿಳಿದಿದ್ದರೆ ಈ ಭ್ರಮೆ ಹುಟ್ಟುತ್ತಿರಲಿಲ್ಲ. ಸರಿಯಾದ ಬೆಳಕು ಬಂದಾಗ ಹಗ್ಗದಲ್ಲಿ ಸರ್ಪಾದಿ ಭ್ರಮೆಯು ಹೋಗಿ ಕಂಡದ್ದು ಹಗ್ಗವೇ ಎಂಬ ನಿಶ್ಚಯ ಹುಟ್ಟುತ್ತದೆ. ಅಂತೆಯೇ ಅಜ್ಞಾನವು

ತೊಲಗಿದಾಗ ಜೀವಾತ್ಮ, ಪ್ರಾಣ ಮುಂತಾದ ಎಲ್ಲ ಭ್ರಮೆಗಳೂ ಹೋಗಿ ನಮ್ಮ ನಿಜಸ್ವರೂಪವು ಕೇವಲ ಶುದ್ಧಾತ್ಮನೇ ಎಂಬ ನಿಶ್ಚಯ ಬರುತ್ತದೆ. ಇದು ಸರ್ವೋಪನಿಷತ್ತುಗಳ ಸಿದ್ಧಾಂತವಾಗಿದೆ.

**ಪ್ರಾಣಾದಿಭಿರನಂತೈಶ್ಚ ಭಾವೈರೇತೈರ್ವಿಕಲ್ಪಿತಃ ।**
**ಮಾಯೈಷಾ ತಸ್ಯ ದೇವಸ್ಯ ಯಯಾ ಸಂಮೋಹಿತಃ ಸ್ವಯಮ್॥೧೯॥**

ಈ ಅದ್ವಯಾತ್ಮನು, **ಪ್ರಾಣಾದಿಭಿಃ** = ಮುಂದಿನ ಶ್ಲೋಕಗಳಲ್ಲಿ ಹೇಳಿದ **ಪ್ರಾಣಾದಿಭಿಃ** = ಪ್ರಾಣವೇ ಮೊದಲಾದ, **ಅನಂತೈಃ** = ಅಸಂಖ್ಯಾತವಾದ, **ಏತೈಃ** = ಈ ಸಂಸಾರ ಧರ್ಮಗಳುಳ್ಳ, **ಭಾವೈಃ** = ವಸ್ತುಗಳಿಂದ, **ವಿಕಲ್ಪಿತಃ** = ಆ ವಸ್ತುಗಳೆಂಬ ಭ್ರಮೆಗೆ ಒಳಗಾಗಿದ್ದಾನೆ. **ಏಷಾ** = ಈ ಬಗೆಯ ವಿಕಲ್ಪವು, **ತಸ್ಯ ದೇವಸ್ಯ** = ಸರ್ವಶಕ್ತನಾದ ಆ ಪರಮಾತ್ಮನ, **ಮಾಯಾ** = ಮಾಯೆಯೇ ಸರಿ, **ಯಯಾ** = ಯಾವ ಮಾಯೆಯಿಂದ, **ಸ್ವಯಂ** = ತಾನೇ, **ಸಂಮೋಹಿತಃ** = ಸಂಮೋಹಕ್ಕೆ ಒಳಗಾಗಿದ್ದಾನೋ ಆ ಮಾಯೆ ಅದು.

ಈ ಆತ್ಮನು ಪ್ರಾಣ, ಪೃಥಿವ್ಯಾದಿ ಮಹಾಭೂತಗಳು, ಗುಣಗಳು ಇತ್ಯಾದಿ ನಾನಾಸ್ವರೂಪನೆಂದು ಬೇರೆ ಬೇರೆ ಜನರು ಭ್ರಮಿಸಿದ್ದಾರೆ. ಇಂತಹ ಭ್ರಮೆಗಳು ಅದ್ವಯನೂ ಪ್ರಜ್ಞಪ್ತಿ ಸ್ವರೂಪನೂ ಆದ ಆತ್ಮನಲ್ಲಿ ಹೇಗೆ ಸಂಭವಿಸುತ್ತವೆ? ಭ್ರಮಿಸತಕ್ಕವರು ಯಾರು? ದ್ವಿತೀಯ ವಸ್ತುವೇ ಇಲ್ಲದಿರುವಾಗ ಪ್ರಾಣಾದಿಗಳಾದರೂ ಎಲ್ಲಿರುತ್ತವೆ? ಎಂಬ ಪ್ರಶ್ನೆಗಳು ಇಲ್ಲಿ ಹುಟ್ಟುತ್ತವೆ. ರಜ್ಜುವನ್ನು ಸರ್ಪವೆಂದು ಭ್ರಮಿಸುವಾಗ ಸರ್ಪವು ಅನ್ಯತ್ರ ಇದ್ದಿರಬೇಕು. ಭ್ರಮಿಸತಕ್ಕ ಮನುಷ್ಯನೂ ಪ್ರತ್ಯೇಕವಾಗಿರಬೇಕು. ನೀವು ಹೇಳುವ ಪ್ರಕಾರ ಭ್ರಮೆಗೆ ವಿಷಯ ರಜ್ಜುಸ್ಥಾನದಲ್ಲಿರತಕ್ಕವನು ಆತ್ಮನೇ ಆಗಿದ್ದಾನಲ್ಲವೆ?

ಹೌದು; ಇದೆಲ್ಲವೂ ಆ ಪರಮಾತ್ಮನ ಮಾಯೆಯೆಂಬುದೇ ಉತ್ತರ. ಈ ಮಾಯಾಬಲದಿಂದ ತಾನೊಬ್ಬನೇ ನಾನಾ ಜೀವಾತ್ಮರಾಗಿ ತೋರುತ್ತಾನೆ. ಜೀವಾತ್ಮರೇ ಭ್ರಮಿಸತಕ್ಕವರು. ಪ್ರಾಣಾದಿ ನಾನಾ ರೂಪಗಳನ್ನು ಪಡೆದು, ಅವೆಲ್ಲವೂ ಬೇರೆ ಬೇರೆ ಪದಾರ್ಥಗಳೆಂದು ತನ್ನನ್ನೇ ತೋರಿಸಿಕೊಳ್ಳುತ್ತಾನೆ. ರಜ್ಜುವಿನಂತೆ ಭ್ರಮೆಗೆ ವಿಷಯವಾಗತಕ್ಕವನೂ ತಾನೇ ಆಗಿರುತ್ತಾನೆ. ಆದ್ದರಿಂದಲೇ ಮಾಯೆಯು **ಅಘಟಿತಘಟನಾ ಪಟೀಯಸೀ** ಎಂದು ಶ್ರೀ ಶಂಕರರೇ ಹೇಳಿದ್ದಾರೆ. ಮಹಾಭಾರತದ ಭೀಷ್ಮ ಪರ್ವದಲ್ಲಿ **''ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್''** (೫–೧೨) ಎಂದು ಹೇಳಿದೆ. ನಮ್ಮ ಚಿಂತನೆಗೆ ಎಂದಿಗೂ ನಿಲುಕದಿರುವ ವಸ್ತುಗಳ ವಿಷಯದಲ್ಲಿ ನಮ್ಮ

ತರ್ಕಕೌಶಲವನ್ನು ಬೆರೆಸಬಾರದು ಎಂದು ಅದರ ತಾತ್ಪರ್ಯ. ಗೀತೆಯಲ್ಲಿ **'ಮಮ ಮಾಯಾ ದುರತ್ಯಯಾ'** ಎಂದು ಭಗವಂತನೇ ಹೇಳಿದ್ದಾನೆ (ಗೀತಾ ೭–೧೪).

ಜನರು ಭ್ರಮಿಸಿದ ಪ್ರಕಾರಗಳಲ್ಲಿ ಕೆಲವನ್ನು ಈಗ ಹೇಳಲಾಗುವುದು. ಪ್ರಾಣಾದಿಗಳು ಜಗತ್ಕಾರಣಗಳೆಂದು ಬೇರೆ ಬೇರೆ ವಾದಿಗಳ ಅಭಿಪ್ರಾಯ.

**ಪ್ರಾಣ ಇತಿ ಪ್ರಾಣವಿದೋ ಭೂತಾನೀತಿ ಚ ತದ್ವಿದಃ ।**
**ಗುಣಾ ಇತಿ ಗುಣವಿದಸ್ತತ್ತ್ವಾನೀತಿ ಚ ತದ್ವಿದಃ ॥೨೦॥**

ಪ್ರಾಣ ಎಂದರೆ ಹಿರಣ್ಯಗರ್ಭ. ಪ್ರಾಣನ ಸ್ವರೂಪವನ್ನು ಬಲ್ಲ ಪ್ರಾಣವಾದಿಗಳು ಹಿರಣ್ಯಗರ್ಭನೇ ಜಗತ್ಕಾರಣನೆಂದು ಹೇಳುತ್ತಾರೆ. ಇದಕ್ಕೆ ಆಧಾರವಿಲ್ಲವಾದ್ದರಿಂದ ಭೂತವಾದಿಗಳು ಪೃಥಿವೀ, ಜಲ, ಅಗ್ನಿ, ವಾಯು ಎಂಬ ನಾಲ್ಕು ಭೂತಗಳು ಜಗತ್ತಿನ ಕಾರಣಗಳೆಂದು ಹೇಳುತ್ತಾರೆ. ಜಡವಸ್ತು ಘಟಿತವಾದ ಶರೀರಕ್ಕೆ ಚೈತನ್ಯವು ಹೇಗೆ ಬರುತ್ತದೆ? ಇತ್ಯಾದಿ ಪ್ರಶ್ನೆಗಳಿಗೆ ಈ ವಾದದಲ್ಲಿ ಉತ್ತರವಿಲ್ಲ. ಇವರ ಮತದಲ್ಲಿ ಆಕಾಶವು ಬರಿಯ ಶೂನ್ಯವೇ ಹೊರತೂ ವಸ್ತುವಲ್ಲ. ಇದೆಲ್ಲವೂ ವೇದವಿರುದ್ಧವಾದ್ದರಿಂದ ಗ್ರಾಹ್ಯವಲ್ಲ. ಶ್ರುತಿವಿರುದ್ಧವೆಂಬುದು ಮುಂದೆ ಹೇಳುವ ಎಲ್ಲ ಮತಗಳಿಗೂ ಅನ್ವಯಿಸುತ್ತದೆ. ಗುಣವಿದರಾದ ಸಾಂಖ್ಯರು ಸತ್ತ್ವ, ರಜಸ್ಸು, ತಮಸ್ಸು ಎಂಬ ಗುಣತ್ರಯವು ಲೋಕದ ಉತ್ಪತ್ತಿಗೆ ಕಾರಣವೆನ್ನುತ್ತಾರೆ. ಗುಣಗಳ ಸಮತೆಯು ಜಗತ್ತಿಗೆ ಕಾರಣವಾದರೆ ಸದಾ ಜಗತ್ತು ಇರಬೇಕಾಗುವುದರಿಂದ ಪ್ರಳಯವಿಲ್ಲದೆ ಹೋಗುತ್ತದೆ. ಗುಣಗಳ ವಿಷಮತೆಯು ಕಾರಣವಾದರೆ, ವಿಷಮತೆಗೆ ನಿಮಿತ್ತವಿಲ್ಲದೆ ಹೋಗುತ್ತದೆ. ಆದ್ದರಿಂದ ಸಾಂಖ್ಯ ಮತವು ಸರಿಯಲ್ಲ. ಜೀವ, ಅವಿದ್ಯೆ, ಶಿವ ಎಂಬ ಮೂರು ತತ್ತ್ವಗಳು ಜಗತ್ತಿಗೆ ಕಾರಣಗಳೆಂದು ಶೈವರ ಹೇಳಿಕೆ. ಇದು ಅದ್ವಯ ಪ್ರತಿಪಾದಕ ಶ್ರುತಿಗಳಿಗೆ ವಿರುದ್ಧವಾದದ್ದು.

ಈ ಪ್ರಕಾರವಾಗಿ ಮುಂದೆ ಹೇಳುವ ಪ್ರತಿಯೊಂದು ಮತಗಳಲ್ಲಿಯೂ ದೋಷಗಳಿವೆ. ಈ ದೋಷಗಳನ್ನು ವಿವರಿಸುವುದರಿಂದ ಇಲ್ಲಿ ಪ್ರಯೋಜನವೇನೂ ಇಲ್ಲವಾದ್ದರಿಂದ ಆ ಮತಗಳು ಯಾವುವೆಂಬುದನ್ನು ಮಾತ್ರ ಬರೆಯಲಾಗುವುದು.

**ಪಾದಾ ಇತಿ ಪಾದವಿದೋ ವಿಷಯಾ ಇತಿ ತದ್ವಿದಃ ।**
**ಲೋಕಾ ಇತಿ ಲೋಕವಿದೋ ದೇವಾ ಇತಿ ಚ ತದ್ವಿದಃ ॥೨೧॥**

ವಿಶ್ವ, ತೈಜಸ, ಪ್ರಾಜ್ಞ, ಈಶ್ವರ ಎಂಬ ನಾಲ್ಕು ಪಾದಗಳೂ ಜಗತ್ತಿನ ಕಾರಣಗಳೆಂದು ಪಾದವಿದರ ಮತ. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಕಾರಣಗಳೆಂದು ವಿಷಯವಾದಿಗಳ ಅಭಿಪ್ರಾಯ. ಭೂಃ, ಭುವಃ, ಸುವಃ ಎಂಬ ತ್ರಿಲೋಕ

ಗಳು ನಿತ್ಯವಾಗಿವೆ. ಇವುಗಳಿಗೆ ಕಾರಣವೇನೂ ಇಲ್ಲವೆಂದು ಲೋಕವಾದಿಗಳ ಅಭಿಪ್ರಾಯ. ಅಗ್ನಿ, ಇಂದ್ರ ಮೊದಲಾದ ದೇವತೆಗಳು ಜಗತ್ಕಾರಣಗಳೆಂದು ದೇವವಿದರ ಆಶಯ.

**ವೇದಾ ಇತಿ ವೇದವಿದೋ ಯಜ್ಞಾ ಇತಿ ಚ ತದ್ವಿದಃ ।**
**ಭೋಕ್ತೇತಿ ಚ ಭೋಕ್ತೃವಿದೋ ಭೋಜ್ಯಮಿತಿ ಚ ತದ್ವಿದಃ ॥೨೨॥**

ಋಗ್ವೇದವೇ ಮೊದಲಾದ ನಾಲ್ಕು ವೇದಗಳು ನಿತ್ಯವಾದವು. ಅವುಗಳಿಂದ ಜಗತ್ತು ನಡೆಯುತ್ತದೆ ಎಂದು ವೇದಪಾಠಕರ ಅಭಿಪ್ರಾಯ.

ಜ್ಯೋತಿಷ್ಟೋಮಾದಿ ಯಜ್ಞಗಳು ನಿತ್ಯವಾದ ತತ್ತ್ವಗಳೆಂದು ಯಾಜ್ಞಿಕರ ಹೇಳಿಕೆ. ಅವುಗಳಿಂದಲೇ ಲೋಕಯಾತ್ರೆ ನಡೆಯುತ್ತದೆಯೆಂದು ಅವರು ಹೇಳುತ್ತಾರೆ. ಭೋಕ್ತೃವೇ ಆತ್ಮ ಕರ್ತನು ಆತ್ಮನಲ್ಲವೆಂದು ಕೆಲವು ಸಾಂಖ್ಯರ ಹೇಳಿಕೆ. ಭೋಜ್ಯ ವಸ್ತುವೇ ಸತ್ಯವೆಂದು ಇನ್ನೂ ಕೆಲವು ಜನರ ಮತವಿದೆ.

**ಸೂಕ್ಷ್ಮ ಇತಿ ಸೂಕ್ಷ್ಮವಿದಃ ಸ್ಥೂಲ ಇತಿ ಚ ತದ್ವಿದಃ ।**
**ಮೂರ್ತ ಇತಿ ಮೂರ್ತವಿದೋಽಮೂರ್ತ ಇತಿ ಚ ತದ್ವಿದಃ ॥೨೩॥**

ಸೂಕ್ಷ್ಮವಾದ ಪರಮಾಣುವಿನಿಂದ ಲೋಕಗಳ ಸೃಷ್ಟಿಯೆಂದು ಕೆಲವರ ಆಶಯ. ಆತ್ಮನೇ ಸೂಕ್ಷ್ಮವಾದ ಪರಮಾಣು ಸದೃಶನೆಂಬ ಮತವೂ ಇದೆ. ಸ್ಥೂಲವಾದ ಶರೀರವೇ ಆತ್ಮವೆಂದೂ ಹೇಳತಕ್ಕವರುಂಟು. ರೂಪವಂತನಾದ ಪರಮೇಶ್ವರ ಅಥವಾ ವಿಷ್ಣು ಮುಂತಾದವರಲ್ಲೊಬ್ಬನು ಸೃಷ್ಟಿಕರ್ತನೆಂದು ಆಗಮಿಕರ ಹೇಳಿಕೆ. ಯಾವ ಆಕಾರವೂ ಇಲ್ಲದ ಶೂನ್ಯವೇ ಪರಮಾರ್ಥವೆಂದು ಶೂನ್ಯವಾದಿಗಳ ಮತ (ಬೌದ್ಧ ಮತ)

**ಕಾಲ ಇತಿ ಕಾಲವಿದೋ ದಿಶ ಇತಿ ಚ ತದ್ವಿದಃ ।**
**ವಾದಾ ಇತಿ ವಾದವಿದೋ ಭುವನಾನೀತಿ ತದ್ವಿದಃ ॥೨೪॥**

ಕಾಲವೇ ಪರಮಾರ್ಥವೆಂದು ಜ್ಯೋತಿಃಶಾಸ್ತ್ರವಿದರೂ, ದಿಗಧಿಪತಿಗಳಾದ ಇಂದ್ರಾದಿಗಳು ಪರಮಾರ್ಥವೆಂದು ಕೆಲವರೂ ಹೇಳುತ್ತಾರೆ. ಧಾತುವಾದ, ಮಂತ್ರ ವಾದ ಮುಂತಾದ ವಾದಗಳನ್ನು ಕೆಲವರೂ, ಚತುರ್ದಶ ಲೋಕಗಳು ತತ್ತ್ವಗಳೆಂದು ಭುವನಕೋಶವನ್ನು ಬಲ್ಲವರೂ ಹೇಳುತ್ತಾರೆ. ಅವೆಲ್ಲವೂ ಭ್ರಮೆಗಳೇ ಸರಿ.

**ಮನ ಇತಿ ಮನೋವಿದೋ ಬುದ್ಧಿರಿತಿ ಚ ತದ್ವಿದಃ ।**
**ಚಿತ್ತಮಿತಿ ಚಿತ್ತವಿದೋ ಧರ್ಮಾಧರ್ಮೌ ಚ ತದ್ವಿದಃ ॥೨೫॥**

ಮನಸ್ಸೇ ಆತ್ಮನೆಂದು ಕೆಲವು ಚಾರ್ವಾಕರೂ, ಬುದ್ಧಿಯೆಂದೂ, ಚಿತ್ತವೇ ಆತ್ಮನೆಂದೂ ಹೇಳತಕ್ಕವರೂ ಇದ್ದಾರೆ. ಧರ್ಮಾಧರ್ಮಗಳೇ ಪರಮಾರ್ಥಗಳೆಂದು ಹೇಳುವವರೂ ಇದ್ದಾರೆ.

**ಪಂಚವಿಂಶಕ ಇತ್ಯೇಕೇ ಷಡ್‌ವಿಂಶ ಇತಿ ಚಾಪರೇ ।**
**ಏಕತ್ರಿಂಶಕ ಇತ್ಯಾಹುರನಂತ ಇತಿ ಚಾಪರೇ ॥೨೬॥**

ಈ ಪ್ರಪಂಚವು ಇಪ್ಪತ್ತೈದು ತತ್ತ್ವಗಳಿಂದ ಕೂಡಿದೆಯೆಂದು ಸಾಂಖ್ಯರು ಹೇಳುತ್ತಾರೆ. ಈಶ್ವರನೂ ಸೇರಿ ಇಪ್ಪತ್ತಾರು ತತ್ತ್ವಗಳೆಂದು ಪಾತಂಜಲ ಯೋಗದವರು ಹೇಳುತ್ತಾರೆ. ಮೂವತ್ತೊಂದು ತತ್ತ್ವಗಳೆಂದು ಪಾಶುಪತರ ಅಭಿಪ್ರಾಯ. ಅನಂತಪದಾರ್ಥಗಳಿವೆಯೆಂದು ಇತರರ ಅಭಿಪ್ರಾಯ.

**ವಿವರಣೆ :**

೧. **ಸಾಂಖ್ಯರು :–** ಪ್ರಧಾನ (ಮೂಲಪ್ರಕೃತಿ)–೧, ಮಹತ್, ಅಹಂಕಾರ, ಪಂಚತನ್ಮಾತ್ರೆಗಳು–೭; ಕರ್ಮೇಂದ್ರಿಯಗಳು–೫, ಜ್ಞಾನೇಂದ್ರಿಯಗಳು–೫, ಶಬ್ದಾದಿ ವಿಷಯಗಳು–೫, ಮನಸ್ಸು–೧ ಇವು ಒಟ್ಟು ೨೪. ಪುರುಷನೂ ಸೇರಿ ಇಪ್ಪತ್ತೈದು.

೨. **ಪಾತಂಜಲ ಯೋಗದವರು :–** ಮೇಲ್ಕಂಡ ೨೫ ತತ್ತ್ವಗಳೊಡನೆ ಈಶ್ವರನೂ ಸೇರಿ ಇಪ್ಪತ್ತಾರು ತತ್ತ್ವಗಳು.

೩. **ಪಾಶುಪತರು :–** ರಾಗ, ನಿಯತಿ, ಕಾಲ, ಕಲಾ, ಅವಿದ್ಯಾ, ಮಾಯಾ ಎಂಬ ಆರು ತತ್ತ್ವಗಳನ್ನು ೨೫ ತತ್ತ್ವಗಳಿಗೆ ಸೇರಿಸಬೇಕು. ಒಟ್ಟು ಮೂವತ್ತೊಂದು ತತ್ತ್ವಗಳಾಗುತ್ತವೆ. ಇವರ ಮತದಲ್ಲಿ ಈಶ್ವರನೇ ಪುರುಷನೆಂಬ ಜೀವ.

**ಲೋಕಾನ್ ಲೋಕವಿದಃ ಪ್ರಾಹುರಾಶ್ರಮಾ ಇತಿ ತದ್ವಿದಃ ।**
**ಸ್ತ್ರೀಪುಂನಪುಂಸಕಂ ಲೈಂಗಾಃ ಪರಾಪರಮಥಾಪರೇ ॥೨೭॥**

ಲೋಕಾನುರಂಜನವೇ ಸತ್ಯವಾದದ್ದೆಂದು ಲೌಕಿಕರು ಹೇಳುತ್ತಾರೆ. ಚತುರಾಶ್ರಮಗಳನ್ನು ಪಾಲಿಸುವುದೇ ಮುಖ್ಯವಾದದ್ದೆಂದು ಧರ್ಮಶಾಸ್ತ್ರಕಾರರಾದ ಕೆಲವರ ಅಭಿಪ್ರಾಯ. ಸ್ತ್ರೀ, ಪುರುಷ, ನಪುಂಸಕ ಎಂಬ ಮೂರು ವಿಭಾಗಗಳೇ ಪರಮಸತ್ಯವೆಂದು ಇನ್ನು ಕೆಲವು ಚಾರ್ವಾಕರ ಅಭಿಪ್ರಾಯವಿದೆ. ಶಬ್ದ, ಪರಬ್ರಹ್ಮ ಎಂಬ ಪರಾಪರ ಬ್ರಹ್ಮಗಳು ಸತ್ಯವೆಂದು ಕೆಲವು ವೈಯಾಕರಣರ ಆಶಯ.

**ಸೃಷ್ಟಿರಿತಿ ಸೃಷ್ಟಿವಿದೋ ಲಯ ಇತಿ ಚ ತದ್ವಿದಃ ।**
**ಸ್ಥಿತಿರಿತಿ ಸ್ಥಿತಿವಿದಃ ಸರ್ವೇ ಚೇಹ ತು ಸರ್ವದಾ ॥೨೮॥**

ಸೃಷ್ಟಿ, ಲಯ, ಸ್ಥಿತಿ ಇವುಗಳಲ್ಲೊಂದು ಪರಮಾರ್ಥವೆಂದು ಬೇರೆ ಬೇರೆ ಪೌರಾಣಿಕರ ಅಭಿಪ್ರಾಯ. ಇದುವರೆಗೆ ಹೇಳಿದ ವಿವಿಧ ಕಲ್ಪನೆಗಳೆಲ್ಲವೂ ಸರ್ವದಾ ಕಲ್ಪನೆಗಳೇ ಆಗಿರುತ್ತವೆ. ಆತ್ಮನೊಬ್ಬನೇ ಸತ್ಯನೆಂದು ತಿಳಿಯಬೇಕು.

ಹಿಂದೆ ಹೇಳಿದ ಪ್ರಾಣನೇ ಪ್ರಾಜ್ಞನು. ಅವನು ವಿಕಾರವಿಶೇಷನಾದ್ದರಿಂದ ಬೀಜಾತ್ಮನೆನಿಸುತ್ತಾನೆ. ಸುಷುಪ್ತಾವಸ್ಥೆಯ ಆತ್ಮನಲ್ಲಿ ಅವಿದ್ಯೆ ಇರುತ್ತದೆ. ಈ ಅವಿದ್ಯಾ ಸಹಿತನಾದ ಜೀವಾತ್ಮನ ಕಲ್ಪನೆಗಳು ಇಪ್ಪತ್ತನೆಯ ಕಾರಿಕೆಯಿಂದ ಇದುವರೆಗೆ ಹೇಳಿದ ಮತಭೇದಗಳು. ಈ ಯಾವ ಕಲ್ಪನೆಗಳೂ ಇಲ್ಲದವನೇ ಶುದ್ಧಾತ್ಮನು. ಇದು ವರೆಗಿನ ಶ್ಲೋಕಗಳಲ್ಲಿ ಹೇಳಿದವುಗಳ ವಿವರಣೆಯಿಂದ ಪ್ರಕೃತೋಪಯೋಗಿಯಾದ ಪ್ರಯೋಜನವೇನೂ ಇಲ್ಲವೆಂದು ಭಾಷ್ಯಕಾರರು ಇವನ್ನು ವಿವರಿಸುವ ಪ್ರಯತ್ನವನ್ನು ಮಾಡಿಲ್ಲ.

**ಯಂ ಭಾವಂ ದರ್ಶಯೇದ್ಯಸ್ಯ ತಂ ಭಾವಂ ಸ ತು ಪಶ್ಯತಿ ।**
**ತಂ ಚಾವತಿ ಸ ಭೂತ್ವಾಽಸೌ ತದ್ಗ್ರಹಃ ಸಮುಪೈತಿತಮ್ ॥೨೯॥**

**ಯಂ ಭಾವಂ** = ಇದುವರೆಗೆ ಹೇಳಿದವುಗಳಲ್ಲಿ ಯಾವುದನ್ನು ತತ್ತ್ವವೆಂದು, **ಯಸ್ಯ** = ಯಾರಿಗೆ, **ದರ್ಶಯೇತ್** = ಆಚಾರ್ಯನೋ ಆಪ್ತನೋ ತೋರಿಸಿ ಕೊಟ್ಟರೆ, **ತಂ ಭಾವಂ** = ಆ ವಸ್ತುವೇ ತತ್ತ್ವವೆಂದು, **ಸಃ** = ಹಾಗೆ ಉಪದೇಶಿಸಲ್ಪಟ್ಟವನು, **ಪಶ್ಯತಿ** = ಸತ್ಯವೆಂದು ತಿಳಿಯುತ್ತಾನೆ. ಆಗ **ಸಃ** = ಆ ವಸ್ತುವೇ, **ಭೂತ್ವಾ** = ತತ್ತ್ವವೇ ಆಗಿ, **ತಂ** = ಉಪದೇಶಿಸಲ್ಪಟ್ಟವನನ್ನು, **ಅವತಿ** = ನಂಬಿಕೆಯಿಂದ ಕದಲದಂತೆ, **ರಕ್ಷತಿ** = ನೋಡಿಕೊಂಡು ರಕ್ಷಿಸುತ್ತದೆ. **ತದ್ಗ್ರಹಃ** = ಅದೇ ಸರಿಯಾದದ್ದೆಂಬ ತಿಳಿವಳಿಕೆಯು, **ತಂ** = ಆ ಮನುಷ್ಯನನ್ನು, **ಸಮುಪೈತಿ** = ಹಿಡಿದುಕೊಳ್ಳುತ್ತದೆ.

ಈ ಮಾಯೆಯ ಪ್ರಾಬಲ್ಯವು ಎಷ್ಟೆಂದರೆ, ಮಿಥ್ಯಾಕಲ್ಪನೆಗಳಲ್ಲಿ ಯಾವುದಾದ ರೊಂದನ್ನು ಒಬ್ಬ ಆಚಾರ್ಯನೋ ಅಥವಾ ತನ್ನ ಗೌರವಕ್ಕೆ ಪಾತ್ರನಾದ ಇನ್ನೊಬ್ಬನೋ ಹೇಳಿಬಿಟ್ಟರೆ ಸಾಕು, ಅದನ್ನು ಕೇಳದವನು ಅದೇ ಸತ್ಯವೆಂದು ನಂಬಿಬಿಡುತ್ತಾನೆ. ಇನ್ನೊಂದನ್ನು ನಿಜವಾದ ತತ್ತ್ವವೆಂದು ಎಷ್ಟು ಹೇಳಿದರೂ ನಂಬುವುದೇ ಇಲ್ಲ. ಆ ಮಿಥ್ಯಾಕಲ್ಪನೆಯೇ ಸತ್ಯವೆಂದು ಆತನನ್ನು ಗಟ್ಟಿಯಾಗಿ ಹಿಡಿದುಕೊಂಡು ಬಿಡುತ್ತದೆ! ಇದೇ ಮತಾಂಧತೆ. ಜೈಲಿನಲ್ಲಿರುವ ಖೈದಿಯನ್ನು ಇನ್ನೊಂದೆಡೆಗೆ ಬಿಡದಂತೆ ಕಾವಲುಗಾರನು ರಕ್ಷಿಸುವ ಹಾಗೆ ಈ ಮಿಥ್ಯಕಲ್ಪನೆಯು ಸತ್ಯವನ್ನು ನಂಬದಂತೆ ಈ ಮತಾಂಧನನ್ನು ರಕ್ಷಿಸುತ್ತದೆ! ಇದೊಂದು ಮಾಯಾವಿಲಾಸ.

**ಏತೈರೇಷೋಽಪೃಥಗ್‌ಭಾವೈಃ ಪೃಥಗೇವೇತಿ ಲಕ್ಷಿತಃ ।**
**ಏವಂ ಯೋ ವೇದ ತತ್ತ್ವೇನ ಕಲ್ಪಯೇತ್ ಸೋಽವಿಶಂಕಿತಃ ॥೩೦॥**

**ಅಪೃಥಗ್‌ಭಾವೈಃ** = ಆತ್ಮನಿಗಿಂತ ಬೇರೆಯಾಗಿ ಇಲ್ಲದಿರುವ, **ಏತೈಃ** = ಈ ಪ್ರಾಣಾದಿಗಳಿಗಿಂತ, **ಏಷಃ** = ಈ ಆತ್ಮನು, **ಪೃಥಗೇವೇತಿ** = ಅನ್ಯನೇ ಸರಿಯೆಂದು, **ಲಕ್ಷಿತಃ** = ಮೂಢರಿಂದ ತಿಳಿಯಲ್ಪಟ್ಟಿರುವನು, **ಏವಂ** = ಆತ್ಮನಿಗಿಂತ ಬೇರೆ ಯಾವ ವಸ್ತುವೂ ಇಲ್ಲವೆಂದು, **ಯಃ** = ಯಾವಾತನು, **ತತ್ತ್ವೇನ** = ಶ್ರುತಿಗಳಿಂದಲೂ ಯುಕ್ತಿಗಳಿಂದಲೂ, **ವೇದ** = ತಿಳಿಯಬಲ್ಲನೋ, **ಸಃ** = ಆತನು, **ಅವಿಶಂಕಿತಃ** = ಯಾವ ಶಂಕೆಯೂ ಇಲ್ಲದವನಾಗಿ, **ಕಲ್ಪಯೇತ್** = ವೇದಾರ್ಥ ವನ್ನು ವ್ಯವಸ್ಥಿತವಾಗಿ ನಿಶ್ಚಯಿಸುತ್ತಾನೆ.

ರಜ್ಜುವನ್ನು ಸರ್ಪವೆಂದೂ ಜಲಧಾರೆಯೆಂದೂ ನಾನಾ ವಿಧವಾಗಿ ಜನರು ಭ್ರಮೆಯಿಂದ ಕಲ್ಪಿಸಿಕೊಳ್ಳುವಂತೆ, ಆತ್ಮನನ್ನು ದೇಹವೆಂದೂ ಪ್ರಾಣವೆಂದೂ ಮನಸ್ಸೆಂದೂ ನಾನಾ ವಿಧವಾಗಿ ಮೂಢರು ಕಲ್ಪಿಸಿಕೊಂಡಿದ್ದಾರೆ. ಆದರೆ ಆತ್ಮನಿಗಿಂತ ಪ್ರತ್ಯೇಕವಾಗಿ ಇವುಗಳಿಗೆ ಅಸ್ತಿತ್ವವಿಲ್ಲ. **ಇದಂ ಸರ್ವಂ ಯದಯಮಾತ್ಮಾ** (ಬೃಹ.೨–೪–೬) ಇತ್ಯಾದಿ ಶ್ರುತಿಗಳು ಸರ್ವವೂ ಆತ್ಮನೆಂದು ಘೋಷಿಸುತ್ತಿವೆ. ಆದರೆ ದೇಹ, ಪ್ರಾಣಾದಿಗಳು ಆತ್ಮನ ನಿಜಸ್ವರೂಪಗಳಲ್ಲ. ಲೌಕಿಕ ಭ್ರಮೆಗೂ ಈ ಭ್ರಮೆಗೂ ಒಂದು ವ್ಯತ್ಯಾಸವಿದೆ. ಲೋಕದ ರಜ್ಜುಸರ್ಪದೃಷ್ಟಾಂತದಲ್ಲಿ ರಜ್ಜುವಿಗಿಂತ ಭಿನ್ನವಾದ ಸರ್ಪವೂ ಜಲಧಾರೆಯೂ ಬೇರೆಯಾಗಿವೆ. ಪ್ರಕೃತದಲ್ಲಿ ಆತ್ಮನಿಗಿಂತ ಬೇರೆಯಾಗಿ ಯಾವ ವಸ್ತುವೂ ಇಲ್ಲ. ಆದರೂ ಭ್ರಮೆಯೆಂಬುದಕ್ಕೆ ಮಾತ್ರ ಇದು ದೃಷ್ಟಾಂತವಾದದ್ದು. ದಾರ್ಷ್ಟಾಂತಿಕವಾದ ಪರಮಾರ್ಥದಲ್ಲಿ ಸರ್ವವಸ್ತುಗಳಿಗೂ ಅಧಿಕರಣವಾದ ಬ್ರಹ್ಮವು ಪ್ರತೀತಿಗೋಚರವೇ ಹೊರತು ಪ್ರತ್ಯಕ್ಷವಲ್ಲ. ಹಗ್ಗದಲ್ಲಿ ಹಾವನ್ನು ಆರೋಪಿಸಿದಂತೆ ನಾವು ಬ್ರಹ್ಮದಲ್ಲಿ ಬಾಹ್ಯ ಪ್ರಪಂಚವನ್ನು ಭ್ರಾಂತಿಯಿಂದ ಆರೋಪಿಸಿಕೊಂಡಿದ್ದೇವೆ. ಪ್ರಾಣ, ಕಾಲ ಮುಂತಾದವೂ ಸಹ ಬ್ರಹ್ಮದಲ್ಲಿ ಆರೋಪಿತವಾಗಿವೆ. ಅವು ವಾಸ್ತವವಾಗಿ ಇಲ್ಲವೇ ಇಲ್ಲ. ಈ ಪ್ರಕಾರವಾಗಿ ಯಾವಾತನು ನಿಶ್ಚಯಿಸಿಕೊಂಡು ಬ್ರಹ್ಮವು ನಿರ್ವಿಕಲ್ಪ, ನಿರ್ವಿಶೇಷ ಎಂಬ ವಿಷಯದಲ್ಲಿ ಯಾವ ಶಂಕೆಯನ್ನು ತಳೆಯುವುದಿಲ್ಲವೋ ಅವನು ಮಾತ್ರ ವೇದದ ಕರ್ಮಕಾಂಡ–ಜ್ಞಾನಕಾಂಡಗಳನ್ನು ವಿಭಜಿಸಿ ಅರ್ಥ ಮಾಡಿಕೊಳ್ಳಲು ಸಮರ್ಥನಾಗುತ್ತಾನೆ. ಅರ್ಥ ಮಾಡಿಕೊಳ್ಳುವುದರ ಫಲವೇ ಬ್ರಹ್ಮಜ್ಞಾನ. ಶ್ರುತಿಯೂ ಸಹ **''ಸರ್ವೇ ವೇದಾ ಯತ್ಪದಮಾಮನಂತಿ''** (ಕಠ ೧–೨–೧೫) ಎಂದು ಹೇಳಿದೆ.

**ಸ್ವಪ್ನಮಾಯೇ ಯಥಾದೃಷ್ಟೇ ಗಂಧರ್ವನಗರಂ ಯಥಾ ।**
**ತಥಾ ವಿಶ್ವಮಿದಂ ದೃಷ್ಟಂ ವೇದಾಂತೇಷು ವಿಚಕ್ಷಣೈಃ ॥೩೧॥**

**ಸ್ವಪ್ನಮಾಯೇ** = ಸ್ವಪ್ನದ ಮತ್ತು ಇಂದ್ರಜಾಲದ ವಸ್ತುಗಳು, **ಯಥಾದೃಷ್ಟೇ** = ಇಲ್ಲದಿದ್ದರೂ ಹೇಗೆ ದೃಷ್ಟವಾಗುತ್ತವೆಯೋ, **ಯಥಾ ಗಂಧರ್ವನಗರಂ** = ಅಸತ್ ಆದರೂ ಗಂಧರ್ವನಗರವೂ ಹೇಗೆ ದೃಷ್ಟವಾಗುತ್ತದೆಯೋ, **ತಥಾ** = ಹಾಗೆಯೇ, **ಇದಂ ವಿಶ್ವಂ** = ಈ ಪ್ರಪಂಚವು, **ವೇದಾಂತೇಷು ವಿಚಕ್ಷಣೈಃ** = ವೇದಾಂತದಲ್ಲಿ ನಿಪುಣರಾದ ಪಂಡಿತರಿಂದ, **ದೃಷ್ಟಂ** = ಅಸತ್ ಆದರೂ ಇರುವಂತೆ ಕಾಣುತ್ತದೆಯೆಂದು ತಿಳಿಯಲ್ಪಟ್ಟಿದೆ.

ಈ ದ್ವೈತ ಪ್ರಪಂಚವು ಮಿಥ್ಯೆಯೆಂದು ಯುಕ್ತಿಗಳಿಂದ ಪ್ರತಿಪಾದಿಸಿದ್ದಾಯಿತು. ಈ ವಿಷಯವು ವೇದಾಂತದಲ್ಲಿಯೂ ಎಂದರೆ ಉಪನಿಷತ್ತುಗಳಲ್ಲಿಯೂ ಉಕ್ತವಾಗಿದೆಯೆಂಬುದನ್ನು ವೇದಾಂತವನ್ನರಿತ ವಿದ್ವಾಂಸರು ಬಲ್ಲರು. ಮಳೆ ಬಂದ ಮೇಲೆ ಸೂರ್ಯಕಿರಣಗಳು ಆಕಾಶದಲ್ಲಿ ಹರಡಿಕೊಂಡಾಗ ಆಕಾಶದಲ್ಲಿ ನಗರದಂತಹ ವಿವಿಧ ದೃಶ್ಯಗಳು ಕಾಣುತ್ತವೆಯಂತೆ. ಅಲ್ಲಿ ಮನೆಗಳಿರುವಂತೆಯೂ ಜನರು ತಿರುಗಾಡುತ್ತಿರುವಂತೆಯೂ ಕಾಣುವುದಂತೆ. ಅದಕ್ಕೆ ಗಂಧರ್ವನಗರವೆಂದು ಹೆಸರು. ಆ ತೋರಿಕೆ ಮಿಥ್ಯೆಯಾದದ್ದು.

ಬ್ರಹ್ಮವೆಂಬ ಒಂದೇ ಒಂದು ವಸ್ತುವಿದೆ, ಇನ್ನೊಂದು ವಸ್ತು ಇಲ್ಲವೇ ಇಲ್ಲ ಎಂದು ಉಪನಿಷತ್ತುಗಳು ಘೋಷಿಸಿದಾಗ ದ್ವೈತ ಪ್ರಪಂಚವು ಅಸತ್ ಎಂದೂ ಮಿಥ್ಯೆಯೆಂದೂ ಸ್ವತಃ ಸಿದ್ಧವಾಗುತ್ತದೆ. ಇವು ವೇದಾಂತದಲ್ಲಿರುವ ವಚನಗಳು –

೧. **ನೇಹ ನಾನಾಸ್ತಿ ಕಿಂಚನ** (ಕಠ ೨–೧–೧೧). ಈ ಬ್ರಹ್ಮದಲ್ಲಿ ಅಣುಮಾತ್ರವೂ ಇನ್ನೊಂದು ವಸ್ತುವಿಲ್ಲ.

೨. **ನ ತು ತದ್‌ದ್ವಿತೀಯಮಸ್ತಿ** (ಬೃಹ. ೪–೩.೨೩). ಬ್ರಹ್ಮಕ್ಕೆ ಅತಿರಿಕ್ತವಾದ ಇನ್ನೊಂದು ವಸ್ತು ಇಲ್ಲವೇ ಇಲ್ಲ.

೩. **ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್, ತತ್ರ ಕೇನ ಕಂ ಪಶ್ಯೇತ್....** (ಬೃಹ. ೪–೫–೧೫).

ಬ್ರಹ್ಮಜ್ಞಾನವು ಪ್ರಾಪ್ತವಾದಾಗ ಜ್ಞಾನಿಗೆ ಸರ್ವವೂ ಆತ್ಮನೇ ಆಗಿರುತ್ತದೆ. ಆಗ ಜ್ಞಾನಿಯು ಯಾವುದರಿಂದ ಯಾವುದನ್ನು ನೋಡುವನು? ಯಾವ ಕಾರಣಕ್ಕಾಗಿ ಯಾವುದನ್ನು ಕೇಳಬೇಕಾಗಿರುತ್ತದೆ?

೪. **ಆತ್ಮಾವಾ ಇದಮೇಕ ಏವಾಗ್ರ ಆಸೀತ್** (ಐತ.೧–೧–೧)

ನಾಮರೂಪಗಳಿಂದ ಕೂಡಿದ ಈ ವಿಶ್ವವು ಮೊದಲು ಆತ್ಮ ಒಂದೇ ಆಗಿತ್ತು ಇತ್ಯಾದಿ.

ಈಗ ಪ್ರಕರಣಾರ್ಥದ ಉಪಸಂಹಾರ –

**ನ ನಿರೋಧೋ ನಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥೩೨॥**

ಸಕಲ ವ್ಯವಹಾರವೂ ಅವಿದ್ಯಾವಿಷಯವಾದ್ದರಿಂದ **ನ ನಿರೋಧಃ** = ಪ್ರಳಯವೆಂಬುದಿಲ್ಲ, **ನ ಉತ್ಪತ್ತಿಃ** = ಜಗತ್ತಿನ ಉತ್ಪತ್ತಿ ಇಲ್ಲ, **ನ ಬದ್ಧಃ** = ಸಂಸಾರ ಬಂಧಕ್ಕೆ ಒಳಗಾದವನೂ ಇಲ್ಲ, **ನ ಚ ಸಾಧಕಃ** = ವ್ಯವಹಾರದಲ್ಲಿ ತೊಡಗಿದ ಜೀವನೂ ಇಲ್ಲ, **ನ ಮುಮುಕ್ಷುಃ** = ಮೋಕ್ಷವನ್ನು ಬಯಸತಕ್ಕವನೂ ಇಲ್ಲ, **ನ ವೈಮುಕ್ತಃ** = ಸಂಸಾರಬಂಧನದಿಂದ ಬಿಡುಗಡೆ ಹೊಂದಿದ ಮುಕ್ತನೂ ಇಲ್ಲ! **ಇತ್ಯೇಷಾ** = ಈ ರೀತಿಯಾಗಿರುವುದೇ, **ಪರಮಾರ್ಥತಾ** = ಪರಮಾರ್ಥವಾದ ಸತ್ಯಸ್ಥಿತಿಯಾಗಿದೆ!

ಜಗತ್ತಿನ ಉತ್ಪತ್ತಿ ಪ್ರಳಯಗಳೇ ಇಲ್ಲವಾದ್ದರಿಂದ ಇವನು ಸಂಸಾರಿ, ಅವನು ಮುಮುಕ್ಷು, ಮತ್ತೊಬ್ಬನು ಮುಕ್ತ, ಆತನು ಜೀವ ಎಂಬ ವ್ಯವಹಾರಗಳೆಲ್ಲವೂ ವಿತಥವಾದವುಗಳು. ವ್ಯವಹಾರಭೂಮಿಯಲ್ಲಿ ಮಾತ್ರ ಇವು ಇದ್ದಂತೆ ಕಾಣಿಸುತ್ತವೆ. ಅವಿದ್ಯಾವಿಷಯವಾದ್ದರಿಂದ ವ್ಯವಹಾರವೆಲ್ಲವೂ ಮಿಥ್ಯೆಯಾದದ್ದು.

ಪರಮಾರ್ಥದಲ್ಲಿ ಇರತಕ್ಕದ್ದು ಅದ್ವೈತವೇ ಆದ್ದರಿಂದ ಅದಕ್ಕೆ ಉತ್ಪತ್ತಿ ಪ್ರಳಯಗಳಿಲ್ಲ. ಉತ್ಪತ್ತಿ ಪ್ರಳಯಗಳಿಗೆ ಕಾರಣವಾಗಿ ದ್ವಿತೀಯ ವಸ್ತುವಿರಬೇಕು. ದ್ವಿತೀಯ ವಸ್ತುವೇ ಇಲ್ಲದ್ದರಿಂದ ಉತ್ಪತ್ತಿ ಪ್ರಳಯಗಳಿಲ್ಲವೆಂಬುದು ನ್ಯಾಯಸಿದ್ಧವಾದದ್ದು. ಅದ್ವೈತವೇ ಪರಮಾರ್ಥವೆಂದು ಶ್ರುತಿಯು ಸಾರಿ ಹೇಳಿದೆ –

೧. **ಯತ್ರ ಹಿ ದ್ವೈತಮಿವ ಭವತಿ** (ಬೃಹ. ೨–೪–೧೪) ಸರ್ವವ್ಯಾಪಿಯಾಗಿರುವ ಬ್ರಹ್ಮದಲ್ಲಿ ದ್ವೈತವಿದೆಯೋ ಎಂಬಂತೆ ತೋರುತ್ತದೆ.

೨. **ಆತ್ಮೈವೇದಂ ಸರ್ವಮ್** (ಛಾಂ. ೭–೨೫–೨). ಕಾಣುವ ಸರ್ವವೂ ಬ್ರಹ್ಮವೇ ಸರಿ.

೩. **ಇದಂ ಸರ್ವಂ ಯದಯಮಾತ್ಮಾ** (ಬೃಹ. ೨–೪–೬). ಇದೆಲ್ಲವೂ ಆತ್ಮವೇ ಸರಿ.

೪. **ನ ತು ತದ್ ದ್ವಿತೀಯಮಸ್ತಿ** (ಬೃಹ. ೪–೩–೨೩). ಎರಡನೆಯ ವಸ್ತುವೇ ಇಲ್ಲ.

ಎರಡನೆಯ ವಸ್ತುವಿದ್ದರೆ ಅದಕ್ಕೆ ಉತ್ಪತ್ತಿಯೋ ಪ್ರಳಯವೋ ಬಂದೀತು. ಇಲ್ಲದ್ದಕ್ಕೆ ಅದರ ಸಂಭವವೇ ಇಲ್ಲ. ಇಲ್ಲದ ಶಶಶೃಂಗ, ಗಗನಕುಸುಮಗಳಿಗೆ ಉತ್ಪತ್ತಿಯೂ ಇಲ್ಲ, ನಾಶವೂ ಇಲ್ಲ. ವ್ಯವಹಾರದಲ್ಲಿರುವ ದ್ವೈತವು ಮನೋವಿಕಲ್ಪವೆಂದೂ ಮಿಥ್ಯೆಯೆಂದೂ ಹೇಳಿದ್ದಾಗಿದೆ. ಈ ದ್ವೈತವು ಕೇವಲ ಮನಃಸ್ಪಂದಿತವಾದದ್ದು. ಸಮಾಧಿಯಲ್ಲಿಯೂ ಸುಷುಪ್ತಿಯಲ್ಲಿಯೂ ಮನಸ್ಸು ನಿಯತವಾಗಿರುತ್ತದೆ. ಅದರ ಸ್ಪಂದನೆ ಇರುವುದಿಲ್ಲ. ಆದ್ದರಿಂದಲೇ ಆ ಸಮಯ ದಲ್ಲಿ ದ್ವೈತವು ತೋರುವುದೇ ಇಲ್ಲ. ಹೀಗೆ ದ್ವೈತವು ಮನಃಸ್ಪಂದಿತಗಳೇ ಆಗಿರುತ್ತವೆ. ತಾತ್ವಿಕವಾದ ಉತ್ಪತ್ತಿನಾಶಗಳು ಅವುಗಳಿಗಿಲ್ಲ.

## ಅದ್ವೈತಸಿದ್ಧಾಂತವು ಬೌದ್ಧರ ಶೂನ್ಯವಾದವಲ್ಲ

ಈಗ ಒಂದು ಆಕ್ಷೇಪ ಹುಟ್ಟುತ್ತದೆ. ಅದ್ವೈತವೇ ತಾತ್ತ್ವಿಕವಾದರೆ ಶ್ರುತಿಸ್ಮೃತಿ ಗಳಲ್ಲಿ ಹೇಳಿದ ವಿಧಿನಿಷೇಧಗಳು ಯಾರಿಗೆ? ಜೀವಾತ್ಮನನ್ನೂ ಪತ್ನೀಪುತ್ರಾದಿ ದ್ವೈತ ವಸ್ತುಗಳನ್ನೂ ಒಪ್ಪಿದಾಗ ಮಾತ್ರ ವಿಧಿನಿಷೇಧರೂಪವಾದ ಶಾಸ್ತ್ರವ್ಯಾಪಾರವು ಪ್ರವರ್ತಿಸುತ್ತದೆ. ಅದ್ವೈತದಲ್ಲಿ ವಿಧಿಯೂ ಇಲ್ಲ, ನಿಷೇಧವೂ ಇಲ್ಲ. ಶಾಸ್ತ್ರ ವ್ಯಾಪಾರವೇ ಇಲ್ಲದಾಗ ಅದ್ವಿತೀಯವಾದ ಬ್ರಹ್ಮವಿದೆಯೆಂಬುದಕ್ಕೆ ಪ್ರಮಾಣವೇ ಇಲ್ಲವೆಂದಾಗುತ್ತದೆ. ದ್ವೈತವು ಮಿಥ್ಯೆ. ವೇದಾದಿ ಶಾಸ್ತ್ರಗಳೂ ಮಿಥ್ಯೆಯಾಗುವುದ ರಿಂದ ಅದ್ವಿತೀಯ ವಸ್ತುವಿದೆಯೆಂಬುದಕ್ಕೆ ಪ್ರಮಾಣವಿಲ್ಲ ಎಂದಾದರೆ ಏನೂ ಇಲ್ಲವೆಂದಾಗಿ ಶೂನ್ಯವಾದವಾಗಿ ಬಿಡುತ್ತದೆ. ಈ ಆಕ್ಷೇಪಕ್ಕೆ ಸಮಾಧಾನವೇನು?

ಇದು ಹುರುಳಿಲ್ಲದ ಆಕ್ಷೇಪ. ಕಲ್ಪನೆಗೆ ಆಧಾರವಾಗಿ ಒಂದು ವಸ್ತುವಿರಲೇ ಬೇಕು. ರಜ್ಜುವಿನಲ್ಲಿ ಸರ್ಪ, ಜಲಧಾರೆ, ನೆಲದ ಬಿರುಕು ಮುಂತಾದ ಭ್ರಾಂತಿ ಕಲ್ಪನೆಗಳು ಬರುತ್ತವೆ. ಆಧಾರವಾಗಿ ರಜ್ಜುವಿರಲೇಬೇಕು. ಹಾಗೆ ಎಲ್ಲ ದ್ವೈತ ಕಲ್ಪನೆಗಳಿಗೂ ಆಧಾರವಾಗಿ ಇರತಕ್ಕದ್ದು ಅದ್ವೈತಬ್ರಹ್ಮವೇ ಆಗಿದೆ. ಈ ಎಲ್ಲ ದ್ವೈತ ಕಲ್ಪನೆಗಳೂ ಮಿಥ್ಯೆಯೆಂಬ ಜ್ಞಾನವನ್ನುಂಟು ಮಾಡುವುದಕ್ಕಾಗಿ ಶ್ರುತಿ ಸ್ಮೃತಿಗಳು ಸಾರ್ಥಕವಾಗುತ್ತವೆ. ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲ. ದ್ವೈತವು ಮಿಥ್ಯೆಯೆಂದು ಜ್ಞಾಪಿಸುವುದಕ್ಕಾಗಿ ಶಾಸ್ತ್ರವು ಆವಶ್ಯಕ ಮತ್ತು ಇದು ಮಿಥ್ಯೆಯೆಂಬ ಜ್ಞಾನಕ್ಕೆ ಸಾಕ್ಷಿಯಾಗಿ ಅಂತರ್ಯಾಮಿಯಾದ ಆತ್ಮನು ಇದ್ದೇ ಇರಬೇಕಾಗುತ್ತದೆ. ಹೀಗೆ ಆತ್ಮನು ಇದ್ದಾನೆಂದು ಅವನ ಅಸ್ತಿತ್ವವನ್ನು ತಿಳಿಸಿ ಮಿಥ್ಯಾಕಲ್ಪನೆಗಳನ್ನು ಶಾಸ್ತ್ರವು ಹೋಗಲಾಡಿಸುತ್ತದೆ. ಅದೇ ಶಾಸ್ತ್ರದಿಂದಾಗುವ ಪ್ರಯೋಜನ. ಆದ್ದರಿಂದಲೇ ದ್ರವಿಡಾಚಾರ್ಯರು **''ಸಿದ್ಧಂ ತು ನಿವರ್ತಕತ್ವಾತ್''** ಎಂದು ಸೂತ್ರಿಸಿದ್ದಾರೆಂದು ಶ್ರೀ ಶಂಕರ ಭಗವತ್ಪಾದರು ಈ ಕಾರಿಕೆಯ ಭಾಷ್ಯದಲ್ಲಿ

ಬರೆದಿದ್ದಾರೆ. ಆತ್ಮನ ವಿಷಯದಲ್ಲಿರುವ ಮಿಥ್ಯಾಕಲ್ಪನೆಗಳನ್ನು ನಿವೃತ್ತಿಗೊಳಿಸುವುದರಿಂದ ವೇದದ ಪ್ರಾಮಾಣ್ಯವು ಸಿದ್ಧಿಸುತ್ತದೆ ಎಂದು ಸೂತ್ರಾರ್ಥ. ಈ ಸೂತ್ರಗ್ರಂಥವು ನಮಗೆ ದೊರಕಿಲ್ಲ.

**ಭಾವೈರಸದ್ಭಿರೇವಾಯಮದ್ವಯೇನ ಚ ಕಲ್ಪಿತಃ ।**
**ಭಾವಾ ಅಪ್ಯದ್ವಯೇನೈವ ತಸ್ಮಾದದ್ವಯತಾ ಶಿವಾ ॥೩೩॥**

**ಅಯಂ** = ಈ ಆತ್ಮನು, **ಅದ್ವಯೇನೈವ (ಸತಾ)** = ತಾನು ಅದ್ವಿತೀಯನಾಗಿರುವಾಗಲೇ, **ಅಸದ್ಭಿಃ** = ತನ್ನಲ್ಲಿ ಇಲ್ಲದಿರುವ, **ಭಾವೈಃ** = ವಿಭಿನ್ನ ಪದಾರ್ಥ ರೂಪಗಳಿಂದ, **ಕಲ್ಪಿತಃ** = ವಿಕಲ್ಪಿತನಾಗಿದ್ದಾನೆ. **ಭಾವಾ ಅಪಿ** = ಆ ಪದಾರ್ಥಗಳೂ ಸಹ **ಅದ್ವಯೇನೈವ (ಸತಾ)** = ತಾನು ಅದ್ವಿತೀಯನಾಗಿರುವಾಗಲೇ **ಕಲ್ಪಿತಃ** = ಕಲ್ಪಿಸಲ್ಪಟ್ಟಿರುತ್ತವೆ. **ತಸ್ಮಾತ್** = ಆದ್ದರಿಂದ **ಅದ್ವಯತಾ** = ಅದ್ವೈತವು, **ಶಿವಾ** = ಮಂಗಳಕರವಾದದ್ದು. ಇದರಲ್ಲಿ ದುಃಖ ದ್ವೇಷ ಭಯಾದಿಗಳಿಲ್ಲವಾದ್ದರಿಂದ ಮಂಗಳಕರ.

ರಜ್ಜುವು ತನ್ನಲ್ಲಿ ಯಾವ ಬದಲಾವಣೆಯನ್ನೂ ಹೊಂದದೆ ತನ್ನ ಪಾಡಿಗೆ ತಾನಿರುತ್ತದೆ. ಭ್ರಾಂತನು ತನ್ನ ಮೋಹಾವೇಶದಿಂದ ಇದು ಸರ್ಪ, ಇದು ಜಲಧಾರೆ. ಇದು ದೊಣ್ಣೆ ಇತ್ಯಾದಿ ರೂಪಗಳಿಂದ ಅದನ್ನು ಕಲ್ಪಿಸಿಕೊಳ್ಳುತ್ತಾನೆ. ರಜ್ಜುವಿನಲ್ಲಿ ಯಾವ ಪರಿವರ್ತನವೂ ಆಗಿರುವುದಿಲ್ಲ. ಹೀಗೆ ಕಲ್ಪಿಸಲು ಕಲ್ಪನೆಗೆ ಅಧಿಷ್ಠಾನವಾದ ಹಗ್ಗ ಎಂಬ ಒಂದು ವಸ್ತು ಮಾತ್ರ ಇದ್ದೇ ಇರಬೇಕು. ಅಧಿಷ್ಠಾನವಿಲ್ಲದೆ ಯಾವ ಕಲ್ಪನೆಯೂ ಬರುವುದಿಲ್ಲ. ಆದ್ದರಿಂದ ಕಲ್ಪನೆಗಳಿಗೆ ಅಧಿಷ್ಠಾನವಸ್ತು ನಿಮಿತ್ತವಾಗುತ್ತದೆ. ಹಾಗೆಯೇ ಆತ್ಮನಲ್ಲಿ ಮೂಢರು ನಾನಾ ಲೌಕಿಕ ಪದಾರ್ಥಗಳನ್ನು ಕಲ್ಪಿಸಿಕೊಂಡಿರುತ್ತಾರೆ. ಆತ್ಮನಲ್ಲಿ ಮಾತ್ರ ಯಾವ ಪರಿವರ್ತನೆಯೂ ಆಗಿರುವುದಿಲ್ಲ. ಭಾವಪದಾರ್ಥಗಳ ಕಲ್ಪನೆಗೆ ಅಧಿಷ್ಠಾನವಾದವನು ಆತ್ಮ. ಆವನಲ್ಲಿ ಮಾತ್ರ ಯಾವ ಬದಲಾವಣೆಯೂ ಆಗಿರುವುದಿಲ್ಲ. ಹೀಗೆ ಅಧಿಷ್ಠಾನವಾಗಿ ಪರಬ್ರಹ್ಮವಸ್ತುವಿರುವುದು ಅದ್ವೈತಸಿದ್ಧಾಂತದ ವೈಶಿಷ್ಟ್ಯವಾಗಿದೆ. ಬೌದ್ಧರ ಶೂನ್ಯವಾದದಲ್ಲಿ ಆತ್ಮನಿಲ್ಲ. ಅವರು ನೈರಾತ್ಮ್ಯವಾದಿಗಳು. ಆ ವಾದಕ್ಕೆ ಪ್ರಮಾಣವಾದ ಗ್ರಂಥವಿಲ್ಲ. ಅದ್ವೈತವಾದಕ್ಕೆ ಶ್ರುತಿಗಳು ಪ್ರಮಾಣವಾಗಿವೆ. ಆದ್ದರಿಂದ ಅದ್ವೈತಸಿದ್ಧಾಂತವು ಶೂನ್ಯವಾದವಲ್ಲ.

**ನಾಽಽತ್ಮಭಾವೇನ ನಾನೇದಂ ನ ಸ್ವೇನಾಪಿ ಕಥಂಚನ ।**
**ನ ಪೃಥಙ್ ನಾಪೃಥಕ್ ಕಿಂಚಿದಿತಿ ತತ್ತ್ವವಿದೋ ವಿದುಃ ॥೩೪॥**

**ಇದಂ** = ಈ ಜಗತ್ತು, **ಆತ್ಮಭಾವೇನ** = ಪರಮಾರ್ಥವಾದ ಆತ್ಮ

ಸ್ವರೂಪದಿಂದ, **ನಾನಾ** = ವಿಭಿನ್ನವಾದ ಮತ್ತೊಂದು ವಸ್ತುವು, **ನ** = ಆಗುವುದಿಲ್ಲ. **ಸ್ವೇನಾಪಿ** = ತನ್ನ ಪ್ರಾಣವಿಶ್ವಾದಿ ಸ್ವರೂಪದಿಂದಲೂ, **ಕಥಂಚನ** = ಯಾವ ರೀತಿಯಲ್ಲಿಯೂ, **ನ** =ಇರುವುದಿಲ್ಲ. **ಕಿಂಚಿತ್** = ಯಾವುದೂ, **ಪೃಥಕ್** = ಅನ್ಯೋನ್ಯವಾಗಿ ಬೇರೆಯ ವಸ್ತುರೂಪದಿಂದಲೂ, **ನ** = ಇಲ್ಲ. ಅನ್ಯೋನ್ಯ ಏಕಸ್ವರೂಪದಿಂದಲೂ, **ನ** = ಇಲ್ಲ. **ಇತಿ** = ಹೀಗೆಂದು **ತತ್ತ್ವವಿದಃ** = ತತ್ತ್ವಜ್ಞಾನಿಗಳು, **ವಿದುಃ** = ತಿಳಿದಿದ್ದಾರೆ.

**'ತಸ್ಮಾದದ್ವಯತಾ ಶಿವಾ'** ಅದ್ವೈತವು ಮಂಗಳಕಾರಿಯಾದದ್ದು. ಶೋಕ, ಭಯ, ಕೋಪ, ದ್ವೇಷ, ಮರಣ ಮುಂತಾದ ಅಮಂಗಳವು ಎರಡನೆಯ ವಸ್ತುವಿನಿಂದ ಬರತಕ್ಕದ್ದು. ಎರಡನೆಯ ವಸ್ತುವೇ ಇಲ್ಲದಾಗ ಶೋಕಾದಿಗಳಿಗೆ ಪ್ರಾಪ್ತಿಯೇ ಇರುವುದಿಲ್ಲ. **''ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ''** (ಈಶಾ.೭), **''ಅಭಯಂ ಪ್ರತಿಷ್ಠಾಂ ವಿಂದತೇ''** (ತೈ.೩-೭). ಆತ್ಮಾತಿರಿಕ್ತವಾಗಿ ತೋರತಕ್ಕದ್ದೆಲ್ಲವೂ ಕಲ್ಪಿತವಾದ್ದರಿಂದ ದ್ವಿತೀಯ ವಸ್ತುವೇ ಇಲ್ಲ.

ಈ ಶ್ಲೋಕದಲ್ಲಿ ನಾಲ್ಕು ಬಗೆಯಿಂದ ದ್ವಿತೀಯ ವಸ್ತುವನ್ನು ನಿಷೇಧಿಸಲಾಗಿದೆ.

೧. ರಜ್ಜುವೇ ಸರ್ಪವಾಗಿ ತೋರಿದರೂ ಅದು ಸರ್ಪವಲ್ಲ.

೨. ಆತ್ಮನೇ ವಿಶ್ವ, ಪ್ರಾಣಾದಿಸ್ವರೂಪನಾದರೂ ಅದು ತೋರಿಕೆಯೇ ಹೊರತು ಭಿನ್ನವಸ್ತುವಲ್ಲ.

೩. ವಿಶ್ವ, ಪ್ರಾಣಾದಿಗಳು ವಸ್ತುತಃ ಭಿನ್ನವಸ್ತುಗಳೂ ಅಲ್ಲ. ಉಪಾಧಿಭೇದದಿಂದ ನಾಮವು ಕಲ್ಪಿತವಾಗಿದೆಯೇ ಹೊರತು ಪದಾರ್ಥವು ಒಂದೇ ಆಗಿರುತ್ತದೆ.

೪. ಹಸು-ಎಮ್ಮೆ, ವಸ್ತ್ರ-ಒಡವೆ ಮುಂತಾದವುಗಳ ಹಾಗೆ ವಿಭಿನ್ನ ವಸ್ತುಗಳೇ ಪರಮಾರ್ಥದಲ್ಲಿ ಇಲ್ಲವಾದ್ದರಿಂದ ದ್ವೈತವೆನ್ನುವುದೇ ಇಲ್ಲ. ಪರಬ್ರಹ್ಮದಲ್ಲಿ ಸಕಲವೂ ಕಲ್ಪಿತವೇ ಹೊರತು ಯಾವುದೂ ಅದರಂತೆಯೇ ಇದ್ದು ಭಿನ್ನವಸ್ತುವಾಗಿಯೂ ಇಲ್ಲ.

**ವೀತರಾಗಭಯಕ್ರೋಧೈರ್ಮುನಿಭಿರ್ವೇದಪಾರಗೈಃ ।**
**ನಿರ್ವಿಕಲ್ಪೋ ಹ್ಯಯಂದೃಷ್ಟಃ ಪ್ರಪಂಚೋಪಶಮೋಽದ್ವಯಃ ॥೩೫॥**

ರಾಗಭಯಕ್ರೋಧಾದಿಸಕಲ ದೋಷಗಳೂ ಇಲ್ಲದವರೂ ಮನನಶೀಲರೂ ವೇದಾರ್ಥತತ್ತ್ವಜ್ಞಾನಿಗಳೂ ಆದ ಮಹಾತ್ಮರಿಂದ ಸರ್ವವಿಕಲ್ಪರಹಿತನೂ ಅದ್ವೈತನೂ ಆದ ಈ ಪರಮಾತ್ಮನು ಉಪಲಬ್ಧನಾಗಿರುತ್ತಾನೆ.

ಸಮ್ಯಗ್ದರ್ಶನದ ಸ್ತುತಿ ಇದು. ಈ ಪ್ರಕಾರವಾದ ಪರಮಾರ್ಥ ತತ್ತ್ವವು

ಅನುಭವಕ್ಕೆ ಬಾರದ ವಿಷಯವಲ್ಲವೆಂಬುದನ್ನೂ ಇದು ಸ್ಪಷ್ಟಪಡಿಸುತ್ತದೆ. ಈ ಪರತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಮಹಾತ್ಮರು ಇದ್ದಾರೆ. ಅವರ ಅನುಭವವೇ ಇಲ್ಲಿ ಪ್ರಪಂಚಿತವಾಗಿದೆ. ಭಯಕ್ರೋಧಾದಿಗಳನ್ನು ತ್ಯಜಿಸಿ ಶಮದಮಾದಿ ಸಂಪತ್ತನ್ನು ಮೊದಲು ಗಳಿಸಿಕೊಳ್ಳಬೇಕು. ತತ್ತ್ವವನ್ನೇ ಚಿಂತಿಸತಕ್ಕ ಮನನಶೀಲ ರಾಗಬೇಕು. ಗುರುಮುಖದಿಂದ ವೇದಾಂತವನ್ನು ಶ್ರವಣ ಮಾಡುತ್ತ ಅದರಲ್ಲಿ ಪಾರಂಗತನಾಗಬೇಕು. ಇಂತಹ ಸಾಧನಸಂಪತ್ತುಗಳನ್ನು ದೊರಕಿಸಿಕೊಂಡವರು ಸರ್ವವಿಕಲ್ಪರಹಿತನಾದ ನಿಷ್ಪ್ರಪಂಚನಾದ ಅದ್ವೈತನಾದ ಪರಮಾತ್ಮನನ್ನು ಕಾಣ ಬಲ್ಲರು. **ಪ್ರಪಂಚಸ್ಯ ಉಪಶಮಃ ಅಭಾವಃ ಯಸ್ಮಿನ್ ಸಃ ಪ್ರಪಂಚೋಪಶಮಃ** ಎಂದು ಬಹುವ್ರೀಹಿ ಸಮಾಸ.

**ತಸ್ಮಾದೇವಂ ವಿದಿತ್ವೈನಮದ್ವೈತೇ ಯೋಜಯೇತ್ ಸ್ಮೃತಿಮ್ ।**
**ಅದ್ವೈತಂ ಸಮನುಪ್ರಾಪ್ಯ ಜಡವಲ್ಲೋಕಮಾಚರೇತ್** ॥೩೬॥

**ತಸ್ಮಾತ್** = ಅದ್ವೈತವು ಮಂಗಳಕರವಾದ್ದರಿಂದ, **ಏವಂ** = ಈ ಪ್ರಕಾರ ವಾಗಿ, **ಏನಂ** = ಅದ್ವೈತಸ್ವರೂಪನಾದ ಪರಮಾತ್ಮನನ್ನು, **ವಿದಿತ್ವಾ** = ಅರಿತು ಕೊಂಡು, **ಅದ್ವೈತೇ** = ಅದ್ವಯವಾದ ಈ ಪರತತ್ತ್ವದಲ್ಲಿ, **ಸ್ಮೃತಿಂ** = ಸ್ಮರಣೆ ಯನ್ನು, **ಯೋಜಯೇತ್** = ಸದಾ ಇರುವಂತೆ ಸಂಬಂಧಿಸಿಕೊಳ್ಳಬೇಕು. **ಅದ್ವೈತಂ ಸಮನುಪ್ರಾಪ್ಯ** = ಅದ್ವೈತವಾದ ಪರಬ್ರಹ್ಮವೇ ನಾನು ಎಂಬುದನ್ನು ನಿಶ್ಚಯಿಸಿಕೊಂಡು, **ಜಡವತ್** = ತಾನು ಒಬ್ಬ ಜಡಪುರುಷನೋ ಎಂಬಂತೆ, **ಲೋಕಮಾಚರೇತ್** = ಲೋಕದಲ್ಲಿ ನಡೆದುಕೊಳ್ಳುತ್ತಿರಬೇಕು.

ಅದ್ವೈತವು ಸರ್ವಮಂಗಳಧಾಮವಾದ್ದರಿಂದ ಇದರ ಸ್ವರೂಪವೇನೆಂಬು ದನ್ನು ವೇದಾಂತಶಾಸ್ತ್ರದಿಂದ ಸರಿಯಾಗಿ ತಿಳಿದುಕೊಳ್ಳಬೇಕು. ಅನಂತರ ಮುಮುಕ್ಷು ವಾದವನು ಈ ಅದ್ವೈತತತ್ತ್ವದಲ್ಲಿಯೇ ಮುಳುಗಿ ಅದನ್ನೇ ಸ್ಮರಿಸುತ್ತ ಚಿತ್ತವು ಅದರಲ್ಲಿಯೇ ಮಗ್ನವಾಗಿರುವಂತಹ ನಿಷ್ಠೆಯನ್ನು ಸಂಪಾದಿಸಿಕೊಳ್ಳಬೇಕು. ಹೀಗಿರುವಾಗ 'ನಾನು ಪರಬ್ರಹ್ಮವೇ ಹೌದು' ಎಂಬ ಜ್ಞಾನ ಉದಿಸಿ ಆತ್ಮ ಸಾಕ್ಷಾತ್ಕಾರವಾಗುತ್ತದೆ. ಮಿಥ್ಯಾಕಲ್ಪನೆಗಳೆಲ್ಲವೂ ತೊಲಗಿ ಹೋಗುತ್ತವೆ. ಆಗ ಕರ್ತವ್ಯವೇನೂ ಉಳಿದಿರುವುದಿಲ್ಲ. ಪ್ರಾರಬ್ಧಕರ್ಮವು ಸವೆಯುವವರೆಗೆ ದೇಹವು ಮಾತ್ರ ಉಳಿದಿರುತ್ತದೆ. ತಾನು ಬ್ರಹ್ಮಜ್ಞಾನಿಯೆಂದು ಯಾರಿಗೂ ತೋರಿಸಿಕೊಳ್ಳದೆ ಅಜ್ಞಾನಿಯಂತೆ ಲೋಕದಲ್ಲಿ ತಿರುಗಾಡಿಕೊಂಡಿರತಕ್ಕದ್ದು. **''ಅಂಧವಜ್ಜಡವಚ್ಚೈವ ಮೂರ್ಖವಚ್ಚ ಮಹೀಂಚರೇತ್''** ಎಂದು ಶ್ರೀ ವಿದ್ಯಾರಣ್ಯ ಸ್ವಾಮಿಗಳು ವೇದಾಂತ ಪಂಚದಶಿಯಲ್ಲಿ ಹೇಳಿದ್ದಾರೆ.

**ನಿಃಸ್ತುತಿರ್ನಿರ್ನಮಸ್ಕಾರೋ ನಿಃಸ್ವಧಾಕಾರ ಏವ ಚ ।**
**ಚಲಾಚಲನಿಕೇತಶ್ಚ ಯತಿರ್ಯಾದೃಚ್ಛಿಕೋ ಭವೇತ್ ॥೩೭॥**

ಆ ಬ್ರಹ್ಮವಿದನು, **ನಿಃಸ್ತುತಿಃ** = ಸ್ತುತಿ ಮಾಡದವನೂ, **ನಿರ್ನಮಸ್ಕಾರಃ** = ನಮಸ್ಕಾರ ಮಾಡದವನೂ, **ನಿಃಸ್ವಧಾಕಾರಃ** = ಪಿತೃಕಾರ್ಯವನ್ನು ಮಾಡದವನೂ **ಚಲಾಚಲನಿಕೇತಃ** = ಚಲ–ಚಲಿಸುವ ಶರೀರ, ಅಚಲ–ಅಚಲವಾದ ಬ್ರಹ್ಮತತ್ತ್ವ ಇವುಗಳೇ, **ನಿಕೇತಃ** = ಆಶ್ರಯಗಳನ್ನಾಗಿ ಉಳ್ಳವನೂ, **ಯತಿಃ** = ಸಂನ್ಯಾಸಿಯೂ, **ಯಾದೃಚ್ಛಿಕಃ** = ಯದೃಚ್ಛಾಲಾಭಸಂತುಷ್ಟನೂ **ಭವೇತ್** = ಆಗಿರುತ್ತಾನೆ.

**ಟಿಪ್ಪಣಿ :** ಭವೇತ್ ಎಂಬಲ್ಲಿ ಇಚ್ಛೆ ಅಥವಾ ಸಂಭಾವನೆ ಎಂಬ ಅರ್ಥದಲ್ಲಿ ಲಿಙ್ ಪ್ರತ್ಯಯ ಬಂದಿದೆ. ವಿಧ್ಯರ್ಥದಲ್ಲಿ ಬಂದಿಲ್ಲ.

ಬ್ರಹ್ಮಜ್ಞಾನಿಯು ಲೋಕದಲ್ಲಿ ಹೇಗೆ ನಡೆದುಕೊಳ್ಳುತ್ತಾನೆಂದರೆ : ಆತನು ದೇವತಾಸ್ತುತಿ, ನಮಸ್ಕಾರ, ದೇವತಾಪೂಜೆ ಮುಂತಾದ್ದರಲ್ಲಿ ತೊಡಗುವುದಿಲ್ಲ. ಪಿತೃಕಾರ್ಯವನ್ನೂ ಮಾಡುವುದಿಲ್ಲ. ಪರಬ್ರಹ್ಮವೇ ತನ್ನ ಆಶ್ರಯಸ್ಥಾನವೆಂದೂ ದೇಹವೇ ತನ್ನ ಮನೆಯೆಂದೂ ತಿಳಿದುಕೊಳ್ಳುತ್ತಾನೆ. ಅವನು ಪರಮಹಂಸ ಪರಿವ್ರಾಜಕನೆಂದೇ ಹೇಳಬಹುದು. ಬೇಡದೆ ತಾನಾಗಿ ದೊರಕಿದ ಅನ್ನ, ವಸ್ತ್ರ, ಕೌಪೀನ, ಶಯನಸ್ಥಳ ಮುಂತಾದವುಗಳಿಂದ ಸಂತೃಪ್ತನಾಗಿರುವನು. ಆತನು ಜೀವನ್ಮುಕ್ತನೇ ಸರಿ. ಪರಮ ಪುರುಷಾರ್ಥವಾದ ಮೋಕ್ಷವೇ ದೊರಕಿರುವಾಗ ಧರ್ಮಾರ್ಥಕಾಮಗಳ ಬಯಕೆಯೇ ಅವನಿಗಿರುವುದಿಲ್ಲ.

ಜ್ಞಾನಿಯೂ ಲೋಕಸಂಗ್ರಹಕ್ಕಾಗಿ ಕರ್ಮದಲ್ಲಿ ತೊಡಗಬಹುದು. ಸಂನ್ಯಾಸದಲ್ಲಿಯೂ ವಿವಿದಿಷಾ ಸಂನ್ಯಾಸ, ವಿದ್ವತ್ ಸಂನ್ಯಾಸ ಇತ್ಯಾದಿ ಭೇದಗಳುಂಟು. ಅವೆಲ್ಲವನ್ನೂ ಇಲ್ಲಿ ಪ್ರಸ್ತಾಪಿಸಿಲ್ಲ.

**ತತ್ತ್ವಮಾಧ್ಯಾತ್ಮಿಕಂ ದೃಷ್ಟ್ವಾ ತತ್ತ್ವಂ ದೃಷ್ಟ್ವಾ ತು ಬಾಹ್ಯತಃ ।**
**ತತ್ತ್ವೀಭೂತಸ್ತದಾರಾಮಸ್ತತ್ತ್ವಾದಪ್ರಚ್ಯುತೋ ಭವೇತ್ ॥೩೮॥**

ಆತನು, **ಆಧ್ಯಾತ್ಮಿಕಂ** = ದೇಹೇಂದ್ರಿಯ ಪ್ರಾಣಾದಿಗಳಿಗೆ ಸಂಬಂಧಿಸಿದ, **ತತ್ತ್ವಂ** = ಅಧಿಷ್ಠಾನವು ಆತ್ಮವೇ ಎಂದೂ, **ದೃಷ್ಟ್ವಾ** = ತಿಳಿದು, **ಬಾಹ್ಯತಃ** = ಹೊರಗೆ ಪೃಥಿವೀ ಜಲಾದಿಗಳಿಗೆ ಅಧಿಷ್ಠಾನವಾದದ್ದೂ ಆತ್ಮವೇ ಎಂದೂ, **ದೃಷ್ಟ್ವಾ** = ತಿಳಿದು, **ತತ್ತ್ವೀಭೂತಃ** = ಸ್ವಯಮಾತ್ಮನೇ ಆಗಿ, **ತದಾರಾಮಃ** = ಸ್ವಾತ್ಮಚಿಂತನೆಯಲ್ಲಿಯೇ ಆನಂದಿಸುತ್ತ, **ತತ್ತ್ವಾತ್** = ಆತ್ಮಸ್ಮೃತಿಯಿಂದ, **ಅಪ್ರಚ್ಯುತಃ** = ವಿಯುಕ್ತನಾಗದವನು, **ಭವೇತ್** = ಆಗಿರಬೇಕು.

ಹಿಂದೆ ಹೇಳಿದಂತೆ ದೇಹಪ್ರಾಣಾದಿಗಳೂ ಪೃಥಿವೀ ಮುಂತಾದ ಬಾಹ್ಯ ಪದಾರ್ಥಗಳೂ ರಜ್ಜುಸರ್ಪದಂತೆ, ಸ್ವಪ್ನದೃಶ್ಯದಂತೆ ಭ್ರಮೆಯಿಂದ ಕಲ್ಪಿತವಾದವು. ಇವೆಲ್ಲವುಗಳಿಗೂ ಆಧಾರವಾದದ್ದು ಆತ್ಮತತ್ತ್ವ ಒಂದೇ. **''ವಾಚಾರಂಭಣಂ ವಿಕಾರೋ ನಾಮಧೇಯಮ್, ಮೃತ್ತಿಕೇತ್ಯೇವ ಸತ್ಯಮ್''** (ಛಾಂ. ೬-೧-೧) ಇತ್ಯಾದಿ ಶ್ರುತಿಗಳು ಆತ್ಮತತ್ತ್ವವು ಮಾತ್ರ ಸತ್ಯವೆಂದೂ ಉಳಿದವು ರಜ್ಜುಸರ್ಪದಂತೆ ಕಲ್ಪಿತಗಳೆಂದೂ ಹೇಳುತ್ತವೆ. **''ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ''** (ಗೀತಾ. ೨-೧೬) ಎಂಬ ಭಗವದ್ವಚನವು ನಾಶವಾಗುವ ವಸ್ತುಗಳೆಲ್ಲವೂ ಅಸತ್ ಎಂದು ತಿಳಿಸುತ್ತದೆ. ಆದ್ದರಿಂದ **''ತತ್ತ್ವಮಸಿ'' ''ಅಹಂ ಬ್ರಹ್ಮಾಸ್ಮಿ''** ಇತ್ಯಾದಿ ಶ್ರುತಿಬಲದಿಂದ ತಾನೇ ಆತ್ಮತತ್ತ್ವವೆಂದು ನಿಶ್ಚಯಿಸಿ ಆತ್ಮಾರಾಮನಾಗಿ ಸದಾ ಆತ್ಮಚಿಂತನೆಯಲ್ಲಿಯೇ ಮುಳುಗಿ ನಲಿಯುತ್ತಿರಬೇಕು.

ಇಲ್ಲಿಗೆ ಎರಡನೆಯ ವೈತಥ್ಯಪ್ರಕರಣವು ಸಮಾಪ್ತವಾಯಿತು.



# ಅದ್ವೈತ ಪ್ರಕರಣ – ೩

ಮಾಂಡೂಕ್ಯೋಪನಿಷತ್ತಿನ ಓಂಕಾರನಿರ್ಣಯ ಪ್ರಸಂಗದಲ್ಲಿ **''ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತಃ''** ಎಂದು ಆತ್ಮನನ್ನು ವರ್ಣಿಸಲಾಗಿದೆ. **''ಜ್ಞಾತೇ ದ್ವೈತಂ ನ ವಿದ್ಯತೇ''** (೧–೧೮) ಎಂದು ಆಗಮಪ್ರಕರಣದಲ್ಲಿ ದ್ವೈತದ ಅಭಾವವನ್ನು ಹೇಳಿದೆ. **''ಆದಾವಂತೇಽಚಯನ್ನಾಸ್ತಿ ವರ್ತಮಾನೇಽಪಿ ತತ್ತಥಾ''** (೨–೬) ತರ್ಕದಿಂದಲೂ ಸ್ವಪ್ನಮಾಯಾಗಂಧರ್ವನಗರಾದಿ ದೃಷ್ಟಾಂತಗಳಿಂದಲೂ ಜಗತ್ತು ಮಿಥ್ಯೆಯೆಂದು ಸಾಧಿಸಿ ಅದ್ವೈತವು ಪರಮಾರ್ಥಸತ್ಯವೆಂದು ತಿಳಿಸಲಾಗಿದೆ. ಈ ನಿರ್ಣಯಕ್ಕೆ ಅನುಕೂಲವಾದ ಅದ್ವೈತಶ್ರುತಿಗಳು ವಿಪುಲವಾಗಿ ದೊರೆಯುತ್ತವೆ. ಈ ವೈದಿಕ ಸಿದ್ಧಾಂತಕ್ಕೆ ಅನುಕೂಲವಾದ ಸಹಕಾರಿತರ್ಕಗಳೂ ಇವೆಯೆಂದು ನಿರೂಪಿಸುವುದಕ್ಕಾಗಿ ಈ ಅದ್ವೈತಪ್ರಕರಣವು ಪ್ರವೃತ್ತವಾಗಿದೆ.

**ಉಪಾಸನಾಶ್ರಿತೋ ಧರ್ಮಃ ಜಾತೇ ಬ್ರಹ್ಮಣಿ ವರ್ತತೇ ।**
**ಪ್ರಾಗುತ್ಪತ್ತೇರಜಂ ಸರ್ವಂ ತೇನಾಸೌ ಕೃಪಣಃ ಸ್ಮೃತಃ ॥೧॥**

**ಉಪಾಸನಾಶ್ರಿತಃ** = ಉಪಾಸನಾವಿಧಿಯನ್ನು ಪಾಲಿಸುವ, **ಧರ್ಮಃ** = ಜೀವನು, **ಜಾತೇ** = ಜಗದ್ರೂಪದಲ್ಲಿ ಉತ್ಪನ್ನವಾದ, **ಬ್ರಹ್ಮಣಿ** = ಬ್ರಹ್ಮವಸ್ತುವಿನಲ್ಲಿ, **ವರ್ತತೇ** = ಅಭಿಮಾನಿಯಾಗಿರುತ್ತಾನೆ. **ಉತ್ಪತ್ತೇಃ ಪ್ರಾಕ್** = ಈ ಜೀವನೂ ಮತ್ತು ಈ ಜಗತ್ತೂ ಹುಟ್ಟುವುದಕ್ಕೆ ಮೊದಲು, **ಸರ್ವಂ** = ಎಲ್ಲವೂ, **ಅಜಂ** = ಜನ್ಮರಹಿತವಾದ ಬ್ರಹ್ಮವೇ ಆಗಿತ್ತು. **ತೇನ** = ಹೀಗೆ ತಿಳಿಯುವುದರಿಂದ, **ಅಸೌ** = ಉಪಾಸನೆಯನ್ನು ಮಾಡುವ ಆ ಜೀವನು, **ಕೃಪಣಃ** = ಅಜ್ಞ–ಅಲ್ಪನೆಂದು, **ಸ್ಮೃತಃ** = ವೇದಶಾಸ್ತ್ರಗಳಲ್ಲಿ ಸ್ಮೃತನಾಗಿದ್ದಾನೆ.

**ಟಿಪ್ಪಣಿ :** ಇದಿಷ್ಟು ಶಬ್ದಾರ್ಥ. ಧಾರಣಾತ್ ಧರ್ಮಃ ಎಂದು ಧರ್ಮ ಶಬ್ದದ ವ್ಯುತ್ಪತ್ತಿ. ದೇಹವನ್ನೂ ಪ್ರಾಣವನ್ನೂ ಧರಿಸಿರುವುದರಿಂದ ಧರ್ಮ–ಜೀವ ಎಂದರ್ಥ. ಇದು ಪ್ರಾಚೀನ ಕಾಲದ ಪ್ರಯೋಗ. ಮನುಷ್ಯನೆಂದು ತಾತ್ಪರ್ಯ.

**ಶ್ಲೋಕದ ತಾತ್ಪರ್ಯ :** ಬ್ರಹ್ಮವನ್ನು ಉಪಾಸನೆ ಮಾಡಿ ಮೋಕ್ಷವನ್ನು ಪಡೆಯಬೇಕೆಂದು ಹೇಳತಕ್ಕ ವೇದಾಂತಿಗಳಿದ್ದಾರೆ. ಅವರು ಹೇಳುವುದೇನೆಂದರೆ ಬ್ರಹ್ಮನಾಗಿದ್ದ ನಾನು ಈಗ ಜೀವಾತ್ಮನಾಗಿ (ಮನುಷ್ಯನಾಗಿ) ಹುಟ್ಟಿದ್ದೇನೆ. ಬ್ರಹ್ಮವೇ ಜಗತ್ತಾಗಿ ಉತ್ಪನ್ನವಾಗಿದೆ. ಇಂತಹ ಜಗದ್ರೂಪವಾದ ಬ್ರಹ್ಮದಲ್ಲಿ ನಾನು ಅಭಿಮಾನಿಯಾಗಿ ವಾಸ ಮಾಡುತ್ತಿದ್ದೇನೆ.

ಹೀಗೆ ಹುಟ್ಟುವುದಕ್ಕೆ ಮೊದಲು ನಾನು, ಈ ಜಗತ್ತು–ಸರ್ವವೂ ಬ್ರಹ್ಮವೇ ಆಗಿತ್ತು. ಆ ಬ್ರಹ್ಮವು ಶಾಶ್ವತವಾದದ್ದು. ನಾನು ಅದನ್ನು ಉಪಾಸನೆ ಮಾಡಿ ಮತ್ತೆ ಆ ಬ್ರಹ್ಮವೇ ಆಗಬೇಕು. ಅದೇ ಮೋಕ್ಷ ಎನ್ನುವ ಸಾಧಕನಾದ ಮನುಷ್ಯನಿದ್ದಾನೆ. ಶಾಸ್ತ್ರದ ಪ್ರಕಾರ ಅಂಥವನು ಕೃಪಣನೇ ಸರಿ. ಅವನು ಅಜ್ಞ. **'ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾ ಪ್ರೈತಿ ಸ ಕೃಪಣಃ'** (ಬೃಹ. ೩–೮–೧೦). ಯಾಜ್ಞವಲ್ಕ್ಯರು ಹೇಳುತ್ತಾರೆ 'ಗಾರ್ಗಿ, ಅಕ್ಷರವಾದ ಈ ಬ್ರಹ್ಮವನ್ನು ಅರಿಯದೆ ಯಾವನು ದೇಹವನ್ನು ತ್ಯಜಿಸುವನೋ ಅವನು ಕೃಪಣ–ದೀನನು'.

ಉಪನಿಷತ್ತುಗಳಲ್ಲಿ ಕೆಲವೆಡೆ ಬ್ರಹ್ಮವನ್ನು ಸಗುಣವನ್ನಾಗಿಯೂ ಕೆಲವೆಡೆಯಲ್ಲಿ ನಿರ್ಗುಣವನ್ನಾಗಿಯೂ ವರ್ಣಿಸಿದೆ.

**ಸರ್ವಕರ್ಮಾಸರ್ವಕಾಮಃ ಸರ್ವಗಂಧಃ ಸರ್ವರಸಃ** (ಛಾಂ. ೩–೧೪–೨) ಇತ್ಯಾದಿ ಸ್ಥಳಗಳಲ್ಲಿ ಉಪಾಸನಾರ್ಥವಾಗಿ ಸಗುಣಬ್ರಹ್ಮವನ್ನು ವರ್ಣಿಸಿದ್ದಾರೆ. ಪುರುಷಸೂಕ್ತದಲ್ಲಿಯೂ **''ಸಹಸ್ರಶೀರ್ಷಾಪುರುಷಃ। ಸಹಸ್ರಾಕ್ಷಃ ಸಹಸ್ರಪಾತ್''** ಎಂದು ವರ್ಣನೆ ಇದೆ. ಇದೆಲ್ಲವೂ ಉಪಾಧಿಸಹಿತವಾದ ಬ್ರಹ್ಮದ ವರ್ಣನೆ. **''ಅಶಬ್ದಮಸ್ಪರ್ಶಮರೂಪಮವ್ಯಯಂ''** (ಕಠ ೧–೩–೧೫), **''ಅಸ್ಥೂಲಮನಣು ಅಹ್ರಸ್ವಮದೀರ್ಘಮ್''** (ಬೃಹ. ೩–೮–೮) ಮುಂತಾದದ್ದು ಉಪಾಧಿರಹಿತವಾದ ಬ್ರಹ್ಮದ ನಿರ್ಗುಣಸ್ವರೂಪವರ್ಣನೆ. ಸೋಪಾಧಿಕವಾದ ಬ್ರಹ್ಮವು ಉಪಾಸನೆಗೆಂದೂ ನಿರುಪಾಧಿಕವಾದ ಬ್ರಹ್ಮದ ವರ್ಣನೆ ಸ್ವರೂಪವನ್ನು ತಿಳಿಸುವುದಕ್ಕಾಗಿಯೂ ಇವೆ. ಇವುಗಳಲ್ಲಿ ನಿರ್ಗುಣ ಸ್ವರೂಪದ ವರ್ಣನೆಯು ಕೇವಲ ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿಯೂ ಬಂದಿವೆಯೆಂಬುದು ಸ್ಫುಟವಾಗಿ ತಿಳಿದು ಬರುತ್ತದೆ. ಏಕೆಂದರೆ, ಸುಷುಪ್ತಿಸಮಾಧಿಗಳಲ್ಲಿ ನಾಮರೂಪ ಪ್ರಪಂಚವರ್ಜಿತವಾದ ಆತ್ಮತತ್ತ್ವವು ಪ್ರಕಾಶಿಸುತ್ತದೆ. ಆಗ ಮನಸ್ಸು, ಇಂದ್ರಿಯಗಳ ಹಾವಳಿ ಇರುವುದಿಲ್ಲ. ಹಿಂದೆ ಸ್ವಪ್ನ ಜಾಗ್ರತ್ತುಗಳಲ್ಲಿ ತೋರುವ ಸಮಸ್ತ ವಸ್ತು ಪ್ರಪಂಚವೂ ಮಿಥ್ಯೆಯೆಂದು ವಿವರಿಸಲಾಗಿದೆ. ಆದ್ದರಿಂದ ಉಪಾಧಿಗಳು ತಾತ್ತ್ವಿಕವಾದವಲ್ಲ. ಉಪಾಸನೆಯು ಸೋಪಾಧಿಕವಾದ ಬ್ರಹ್ಮವನ್ನು ಕುರಿತು ನಡೆಯುತ್ತದೆ. ಉಪಾಸನೆಯಿಂದ ಚಿತ್ತಶುದ್ಧಿಯಾಗುವುದೇ ಹೊರತು ಆತ್ಮಜ್ಞಾನವಾಗುವುದಿಲ್ಲ. ಉಪಾಸನೆಯೇ ಪ್ರಧಾನವೆಂದು ಹೇಳತಕ್ಕವರ ಮತವನ್ನು ಈ ಶ್ಲೋಕದಲ್ಲಿ ದೂಷಿಸಲಾಗಿದೆ.

**ಅತೋ ವಕ್ಷ್ಯಾಮ್ಯಕಾರ್ಪಣ್ಯಮಜಾತಿ ಸಮತಾಂ ಗತಮ್ ।**
**ಯಥಾ ನ ಜಾಯತೇ ಕಿಂಚಿಜ್ಜಾಯಮಾನಂ ಸಮಂತತಃ ॥೨॥**

**ಅತಃ** = ಆದ್ದರಿಂದ, **ಅಕಾರ್ಪಣ್ಯಂ** = ಕಾರ್ಪಣ್ಯರಹಿತವಾದದ್ದೂ, **ಅಜಾತಿ** = ಜನ್ಮವಿಲ್ಲದ್ದೂ, **ಸಮತಾಂ ಗತಂ** = ಸರ್ವತ್ರ ಸಮಭಾವವನ್ನು ಹೊಂದಿರತಕ್ಕದ್ದೂ ಆದ ಬ್ರಹ್ಮವನ್ನು **ವಕ್ಷ್ಯಾಮಿ** = ಹೇಳುವೆನು. **ಜಾಯಮಾನಂ** = ಹುಟ್ಟುತ್ತಿರುವುದಾಗಿ ಅವಿದ್ಯೆಯಿಂದ ತೋರಿದರೂ, **ಕಿಂಚಿತ್** = ಯಾವುದೂ, **ಸಮಂತತಃ** = ಸರ್ವವಿಧದಲ್ಲಿಯೂ, **ಯಥಾ ನ ಜಾಯತೇ** = ಯಾವ ಪ್ರಕಾರದಲ್ಲಿ ಹುಟ್ಟುವುದೇ ಇಲ್ಲವೋ (**ತಥಾ** = ಆ ಪ್ರಕಾರವನ್ನು) **ವಕ್ಷ್ಯಾಮಿ** = ಹೇಳುವೆನು. (**ಶೃಣು** = ಕೇಳು)

ಕಾರ್ಪಣ್ಯವೆಂದರೆ ಅಲ್ಪತೆ, ಅಜ್ಞತೆ, ದೈನ್ಯ. ಬ್ರಹ್ಮವು ಹುಟ್ಟುತ್ತದೆ, ರೂಪಾಂತರ ಹೊಂದುತ್ತದೆ, ಜೀವಭಾವವನ್ನು ಪಡೆಯುತ್ತದೆ ಎಂದು ಹೇಳಿದರೆ ಬ್ರಹ್ಮದಲ್ಲಿಯೇ ಕಾರ್ಪಣ್ಯವನ್ನು ಹೊರಿಸಿದಂತಾಯಿತು. ಆಗ ಹಾಗೆ ಹೇಳತಕ್ಕವನೇ ಕೃಪಣನಾಗುತ್ತಾನೆ! ಬ್ರಹ್ಮವಾದರೋ ಭೂಮಾ, ಅಮೃತ. **"ಯೋ ವೈ ಭೂಮಾ ತದಮೃತಮ್"** (ಛಾಂ. ೭–೨೪–೧), ಇಂತಹ ಬ್ರಹ್ಮವನ್ನರಿತವನು ದೀನನಲ್ಲ, ಕೃಪಣನಲ್ಲ. ಅದಕ್ಕೆ ಜನ್ಮ (ಹುಟ್ಟು) ಎಂಬುದೇ ಇಲ್ಲ. ಅದು ಸರ್ವಾತ್ಮನಾ ಸಮತೆಯನ್ನು ಹೊಂದಿದ್ದು. ಎಂದರೆ ಅವಯವರಹಿತವಾದದ್ದು. ಅವಯವವಿದ್ದರೆ ರೂಪಾಂತರವನ್ನು ಪಡೆದು ಹುಟ್ಟಬಹುದು. ಅವಯವವಿಲ್ಲದ್ದು ರೂಪಾಂತರವನ್ನು ಪಡೆಯುವುದೇ ಇಲ್ಲ. ಸರ್ವವೂ ಬ್ರಹ್ಮವಾದ್ದರಿಂದ ಯಾವುದೂ ಹುಟ್ಟುವುದಿಲ್ಲ. ಹುಟ್ಟುವಂತೆ ತೋರುವುದು ಅವಿದ್ಯೆಯಿಂದ. ಸರ್ವವೂ ಬ್ರಹ್ಮವೇ ಆದ್ದರಿಂದ ಈ ಜಗತ್ತಿನಲ್ಲಿ ಯಾವುದೂ ಹುಟ್ಟುವುದಿಲ್ಲ. ಈ ಜಗತ್ತಿನಲ್ಲಿ ಸರ್ವ ಪ್ರಕಾರದ ವಸ್ತುಗಳೂ ಭ್ರಮೆಯಿಂದ ಹುಟ್ಟಿದಂತೆ ತೋರುತ್ತವೆ. ಇದೆಲ್ಲವನ್ನೂ ಮುಂದೆ ಉಪಪಾದಿಸುತ್ತೇವೆ.

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಿಷಯವೇನೆಂದರೆ, ಮನುಷ್ಯನು ಅವಿದ್ಯಾವಶನಾಗಿ ತನ್ನ ಆತ್ಮಸ್ವರೂಪವನ್ನು ಅರಿಯದೆ "ನಾನು ಹುಟ್ಟಿದ್ದೇನೆ. ಸಂಸಾರದಲ್ಲಿ ಬಳಲಿ ದೀನನಾಗಿದ್ದೇನೆ. ಆದ್ದರಿಂದ ದೇವತೋಪಾಸನೆಯನ್ನು ಮಾಡಿ ಬ್ರಹ್ಮವನ್ನು ಪಡೆದು ಮುಕ್ತನಾಗಬೇಕು" ಎಂದುಕೊಂಡಿರುತ್ತಾನೆ. ಆದರೆ ಬ್ರಹ್ಮವು ನಿತ್ಯಪ್ರಾಪ್ತವಾಗಿಯೇ ಇದೆ. ನಾನು ಹುಟ್ಟಿದ್ದೇನೆ, ಜಗತ್ತು ಎದುರಿಗೆ ಪ್ರತ್ಯಕ್ಷವಾಗಿದೆ, ಬ್ರಹ್ಮ ಒಂದೇ ಇರುವುದರಿಂದ ಅದು ಜಗತ್ತಾಗಿ ಪರಿಣಮಿಸಿದೆ ಎಂದು ತಿಳಿದಿರುವುದೂ ಭ್ರಾಂತಿಯೇ. ಈ ವಿಷಯವನ್ನು ವಿಸ್ತಾರವಾಗಿ ಮುಂದೆ ಪ್ರತಿಪಾದಿಸಲಾಗುತ್ತದೆ.

**ಆತ್ಮಾಹ್ಯಾಕಾಶವಜ್ಜೀವೈರ್ಘಟಾಕಾಶೈರಿವೋದಿತಃ ।**
**ಘಟಾದಿವಚ್ಚ ಸಂಘಾತೈರ್ಜಾತಾವೇತನ್ನಿದರ್ಶನಮ್ ॥೩॥**

**ಆತ್ಮಾ** = ಪರಮಾತ್ಮನು, **ಆಕಾಶವತ್** = ಮಹಾಕಾಶದಂತೆ ಸರ್ವವ್ಯಾಪಿಯಾಗಿ ಇದ್ದಾನೆ. **ಹಿ** = ಅಲ್ಲವೆ? ಆತನು **ಘಟಾಕಾಶೈರಿವ** = ಘಟಾಕಾಶಗಳಿಂದ ಮಹಾಕಾಶದಂತೆ, **ಜೀವೈಃ** = ಜೀವಗಳ ರೂಪದಿಂದ **ಉದಿತಃ** = ಉತ್ಪನ್ನನಾಗಿದ್ದಾನೆಂದು, (**ಉಕ್ತಃ** = ಉಕ್ತನಾಗಿದ್ದಾನೆ.) **ಘಟಾದಿವತ್ ಚ** = ಆಕಾಶದಿಂದ ಘಟಾದಿಗಳಂತೆಯೇ, **ಸಂಘಾತೈಃ** = ಪೃಥಿವೀ, ಜಲ, ಶರೀರಾದಿ ಸಂಘಾತಗಳ ರೂಪದಿಂದ, (ಆತ್ಮನು ಉತ್ಪನ್ನನಾಗಿದ್ದಾನೆ) **ಜಾತೌ** = ಜೀವರೂ ಪೃಥಿವೀ ಶರೀರಾದಿಗಳೂ ಉತ್ಪನ್ನರಾಗಿದ್ದಾರೆ ಎಂಬ ಮಂದಬುದ್ಧಿಗಳ ಪಕ್ಷದಲ್ಲಿ, **ಏತತ್** = ಇದು, **ನಿದರ್ಶನಂ** = ದೃಷ್ಟಾಂತವು.

ಜೀವರು ಹುಟ್ಟುತ್ತಾರೆ, ಪೃಥಿವೀ ಜಲಾದಿಗಳೂ ಹುಟ್ಟುತ್ತವೆ, ಪ್ರಾಣಿಗಳ ದೇಹಗಳೂ ಇಂದ್ರಿಯಗಳೂ ಜನಿಸುತ್ತವೆ ಎಂದು ಮಂದಬುದ್ಧಿಗಳು ತಿಳಿದಿದ್ದಾರೆ. ಅವರ ಮತದಂತೆಯೇ ಹೇಳುವುದಾದರೆ, ಮಹಾಕಾಶದಿಂದ ಘಟಾಕಾಶಗಳು ಹುಟ್ಟುವಂತೆ ಪರಮಾತ್ಮನಿಂದ ಜೀವರು ಜನಿಸಿದ್ದಾರೆ ಎನ್ನಬಹುದು! ಘಟಾಕಾಶಗಳು ವಾಸ್ತವವಾಗಿ ಹುಟ್ಟುವುದಿಲ್ಲ. ಘಟಗಳು ಉಪಾಧಿಯಾದ್ದರಿಂದ ಅವುಗಳಲ್ಲಿ ಅನೇಕ ಚಿಕ್ಕ ಆಕಾಶಗಳಿವೆಯೆಂದೂ ಅವು ಹುಟ್ಟಿದವೆಂದೂ ಅಜ್ಞರಿಗೆ ಪ್ರತೀತಿಯಾಗಬಹುದು. ಹಾಗೆಯೇ ಶರೀರಗಳೂ ಅಂತಃಕರಣಗಳೂ ಉಪಾಧಿಗಳಾದ್ದರಿಂದ ಜೀವರು ಹುಟ್ಟಿದಂತೆ ತೋರುತ್ತದೆ. ಉಪಾಧಿವಿಶಿಷ್ಟನಾದ ಪರಮಾತ್ಮನೇ ಜೀವನೆನಿಸಿದ್ದಾನೆ. **''ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ''** ಇತ್ಯಾದಿ ಶ್ರುತಿಗಳಿಂದ ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ ಮುಂತಾದ ಸಂಘಾತಗಳು ನಿಜವಾಗಿಯೂ ಹುಟ್ಟುತ್ತವೆಯೆಂದೂ ಹಾಗೆಯೇ ಪಂಚಭೂತಗಳಿಂದ ಶರೀರಗಳೂ ಇಂದ್ರಿಯ ಅಂತಃಕರಣ ಮುಂತಾದವು ಹುಟ್ಟುತ್ತವೆಯೆಂದು ಅಜ್ಞರು ಭಾವಿಸುತ್ತಾರೆ. ಅವು ಯಾವುವೂ ಹೊಸದಾಗಿ ಜನಿಸುವುದಿಲ್ಲ. ಹಗ್ಗವು ಹಾವಾಗಿ ಕಾಣಿಸಿದರೆ ಹಾವು ಹೊಸದಾಗಿ ಹುಟ್ಟುತ್ತದೆಯೆ? ಹಾಗೆ ಅನಾದಿಯಾದ ಅವಿದ್ಯೆಯಿಂದ ಆಕಾಶ, ವಾಯು, ಶರೀರ, ಇಂದ್ರಿಯ ಮುಂತಾದ ಸಂಪಾತಗಳು ಹುಟ್ಟಿದಂತೆ ಭ್ರಾಂತಿಯಿಂದ ತೋರುತ್ತಿವೆಯೆಂದೇ ವೇದಾಂತದ ಸಿದ್ಧಾಂತವಿದೆ. ಆತ್ಮನೊಬ್ಬನೇ ಸದಾ ಇರತಕ್ಕವನು. ಅವನಲ್ಲಿ ಯಾವ ವಿಕಾರಗಳೂ ಆಗುವುದಿಲ್ಲ. ತೋರುವ ಇತರ ವಸ್ತುಗಳೆಲ್ಲವೂ ಭ್ರಾಂತಿಕಲ್ಪಿತವಾದವು.

**''ತತ್ಸೃಷ್ಟ್ವಾ ತದೇವಾನುಪ್ರಾವಿಶತ್''** (ತೈತ್ತಿ ೨–೬) **''ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ''** (ಛಾಂ. ೬–೩–೨) ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನೇ ದೇಹವನ್ನು ಸೃಷ್ಟಿಸಿ ಅದರೊಳಗೆ

ಜೀವರೂಪದಿಂದ ಪ್ರವೇಶಿಸಿದನು ಎಂದು ಹೇಳಿದೆ. **"ಯಥಾ ಪ್ರದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ"** (ಮುಂ.೨-೧-೨) ಇತ್ಯಾದಿ ಶ್ರುತಿಗಳಲ್ಲಿ ಉರಿಯುವ ಅಗ್ನಿಯಿಂದ ಕಿಡಿಗಳು ಹೊರಡುವಂತೆ ಪರಮಾತ್ಮನಿಂದ ಜೀವಗಳು ಹೊರಬರುತ್ತವೆ ಎಂದು ವರ್ಣನೆ ಇದೆ. ಇದರಿಂದ ಜೀವಗಳು ಆತ್ಮನಿಂದ ಹುಟ್ಟುತ್ತವೆಯೆಂದು ಕೆಲವರು ಭ್ರಮಿಸಿದ್ದಾರೆ. ಜೀವದ ಉತ್ಪತ್ತಿಯನ್ನು ಮಂದಬುದ್ಧಿಗಳಿಗಾಗಿ ಶ್ರುತಿಯು ಹೇಳಿದೆ.

**ಘಟಾದಿಷು ಪ್ರಲೀನೇಷು ಘಟಾಕಾಶಾದಯೋ ಯಥಾ ।**
**ಆಕಾಶೇ ಸಂಪ್ರಲೀಯಂತೇ ತದ್ವಜ್ಜೀವಾ ಇಹಾತ್ಮನಿ ॥೪॥**

**ಘಟಾದಿಷು** = ಗಡಿಗೆ ಮುಂತಾದ ಉಪಾಧಿಗಳು, **ಪ್ರಲೀನೇಷು** = ಇಲ್ಲವಾದಾಗ, **ಯಥಾ** = ಹೇಗೆ, **ಘಟಾಕಾಶಾದಯಃ** = ಘಟಾಕಾಶವೇ ಮೊದಲಾದವು, **ಆಕಾಶೇ** = ಆಕಾಶದಲ್ಲಿ, **ಸಂಪ್ರಲೀಯಂತೇ** = ಸೇರಿ ಅಡಗಿ ಹೋಗುತ್ತವೆಯೋ, **ತದ್ವತ್** = ಹಾಗೆಯೇ, ಪ್ರಕೃತದಲ್ಲಿಯೂ, **ಜೀವಾಃ** = ಜೀವಗಳು, **ಆತ್ಮನಿ** = ಪರಮಾತ್ಮನಲ್ಲಿ, **ಸಂಪ್ರಲೀಯಂತೇ** = ಸೇರಿಹೋಗುತ್ತವೆ.

ಘಟವು ಹುಟ್ಟಿದಾಗ ಘಟಾಕಾಶವು ಹುಟ್ಟುತ್ತದೆ. ಘಟವು ನಷ್ಟವಾದಾಗ ಘಟಾಕಾಶವು ಮಹಾಕಾಶದಲ್ಲಿ ಸೇರಿಹೋಗುತ್ತದೆ. ಹಾಗೆಯೇ ದೇಹ ಹುಟ್ಟಿದಾಗ ಜೀವದ ಉತ್ಪತ್ತಿಯೆಂದೂ ದೇಹವು ಅಳಿದಾಗ ಜೀವವು ಹೋಯಿತೆಂದೂ ಹೇಳುತ್ತೇವೆ. ಇದು ವ್ಯವಹಾರ ಮಾತ್ರ. ಜೀವವು ಹುಟ್ಟುವುದೂ ಇಲ್ಲ. ಸಾಯುವುದೂ ಇಲ್ಲ.

**ಯಥೈಕಸ್ಮಿನ್ ಘಟಾಕಾಶೇ ರಜೋ ಧೂಮಾದಿಭಿರ್ಯುತೇ ।**
**ನ ಸರ್ವೇ ಸಂಪ್ರಯುಜ್ಯಂತೇ ತದ್ವಜ್ಜೀವಾಃ ಸುಖಾದಿಭಿಃ ॥೫॥**

**ಏಕಸ್ಮಿನ್ ಘಟಾಕಾಶೇ** = ಒಂದು ಘಟಾಕಾಶವು **ಯಥಾ** = ಹೇಗೆ **ರಜೋಧೂಮಾದಿಭಿಃ** = ಧೂಳಿ, ಹೊಗೆ ಮುಂತಾದವುಗಳಿಂದ, **ಯುತೇ** = ಕೂಡಿದ್ದರೆ, **ಸರ್ವೇ** = ಎಲ್ಲ ಘಟಾಕಾಶಗಳೂ, **ನ ಸಂಪ್ರಯುಜ್ಯಂತೇ** = ಧೂಮಾದಿಗಳಿಂದ ಕೂಡಿಕೊಳ್ಳುವುದಿಲ್ಲವೋ, **ತದ್ವತ್** = ಹಾಗೆಯೇ, **ಜೀವಾಃ** = ಎಲ್ಲ ಜೀವಗಳೂ, **ಸುಖಾದಿಭಿಃ** = ಸುಖದುಃಖಾದಿಗಳಿಂದ, **ನ ಸಂಪ್ರಯುಜ್ಯಂತೇ** = ಕೂಡಿಕೊಳ್ಳುವುದಿಲ್ಲ.

ಸರ್ವದೇಹಗಳಲ್ಲಿಯೂ ಒಬ್ಬನೇ ಆತ್ಮನಿದ್ದಾನೆಂದೂ ಆತನೇ ಜೀವನೆಂದೂ ಹೇಳಿದರೆ ಒಂದು ಆಕ್ಷೇಪ ಹುಟ್ಟುತ್ತದೆ. ಒಬ್ಬ ಮನುಷ್ಯನಿಗೆ ಯಾವುದೋ ನಿಮಿತ್ತದಿಂದ ಸುಖವಾದರೆ ಅದೇ ಕ್ಷಣದಲ್ಲಿ ಎಲ್ಲ ಮನುಷ್ಯರಿಗೂ ಸುಖವಾಗಬೇಕು.

ಒಬ್ಬನಿಗೆ ತಲೆನೋವು ಬಂದರೆ ಎಲ್ಲರಿಗೂ ಬರಬೇಕು. ಹೀಗೆ ಎಲ್ಲರಿಗೂ ಸುಖ ದುಃಖಾದಿಗಳು ಏಕಕಾಲದಲ್ಲಿ ಸಂಭವಿಸಬೇಕಾಗುತ್ತದೆ. ಒಬ್ಬನೇ ಆತ್ಮನಾದರೆ ಹಾಗೇಕೆ ಆಗುವುದಿಲ್ಲ? ಈ ಆಕ್ಷೇಪಕ್ಕೆ ಸಮಾಧಾನ ಹೀಗೆ – ಎಲ್ಲ ಘಟ ಗಳಲ್ಲಿಯೂ ಒಂದೇ ಆಕಾಶವಿರುತ್ತದೆ. ಒಂದು ಘಟದಲ್ಲಿ ಹೊಗೆಯೋ ನೀರೋ ಹಾಲೋ ತುಂಬಿಕೊಂಡರೆ ಇತರ ಎಲ್ಲ ಘಟಗಳ ಆಕಾಶದಲ್ಲಿಯೂ ಅವು ತುಂಬಿ ಕೊಳ್ಳುವುದಿಲ್ಲ. ಏಕೆಂದರೆ, ಆಕಾಶವು ಒಂದೇ ಆದರೂ ಉಪಾಧಿಗಳಾದ ಘಟ ಗಳು ಬೇರೆಬೇರೆಯಾಗಿರುತ್ತವೆ. ಹಾಗೆಯೇ ಜೀವಾತ್ಮನಿಗೆ ಉಪಾಧಿಗಳಾದ ದೇಹ, ಅಂತಃಕರಣಗಳು ಪ್ರತಿಯೊಬ್ಬ ಮನುಷ್ಯನಲ್ಲಿಯೂ ಬೇರೆ ಬೇರೆ ಯಾಗಿರುತ್ತವೆ. ವಸ್ತುತಃ ಸುಖದುಃಖಾದಿ ಭೋಗಗಳು ಒಂದೇ ದೇಹದಲ್ಲಿಯೂ ಆತ್ಮನಿಗಲ್ಲ. ಭೋಗವನ್ನು ಅನುಭವಿಸತಕ್ಕದ್ದು ಅಂತಃಕರಣ. ಅದೂ ಅವಿದ್ಯೆಯಿಂದ ಆರೋಪಿತವಾದದ್ದು. ದ್ವೈತಿಗಳ ದೃಷ್ಟಿಯಿಂದ ಶಂಕಾಸಮಾಧಾನಗಳು ಬಂದಿವೆ.

**ರೂಪಕಾರ್ಯಸಮಾಖ್ಯಾಶ್ಚ ಭಿದ್ಯಂತೇ ತತ್ರ ತತ್ರ ವೈ ।**
**ಆಕಾಶಸ್ಯ ನ ಭೇದೋಽಸ್ತಿ ತದ್ವಜ್ಜೀವೇಷು ನಿರ್ಣಯಃ ॥೬॥**

**ರೂಪಕಾರ್ಯಸಮಾಖ್ಯಾಃ** = (ಆಕಾಶವು ಒಂದೇ ಆದರೂ) ಅದರ ಅಲ್ಪತ್ವಮಹತ್ತ್ವಾದಿ ರೂಪ, ಕಾರ್ಯ, ನಾಮಗಳು, **ತತ್ರ ತತ್ರ** = ಬೇರ ಬೇರೆ ವ್ಯವಹಾರಗಳಲ್ಲಿ, **ಭಿದ್ಯಂತೇ** = ವಿಭಿನ್ನವಾಗುತ್ತವೆ. **ಆಕಾಶಸ್ಯ** = ಆಕಾಶದಲ್ಲಾದರೋ, **ಭೇದಃ** = ವ್ಯತ್ಯಾಸವು, **ನ ಅಸ್ತಿ** = ಇರುವುದಿಲ್ಲ. **ತದ್ವತ್** = ಹಾಗೆಯೇ (ಆತ್ಮನು ಒಬ್ಬನೇ ಆದರೂ) **ಜೀವೇಷು** = ಜೀವಾತ್ಮಗಳಲ್ಲಿ ರೂಪಕಾರ್ಯಾದಿಗಳು, **ಭಿದ್ಯಂತೇ** = ಬೇರೆ ಬೇರೆಯಾಗುತ್ತವೆ. **ಇತಿ** = ಹೀಗೆಂದು **ನಿರ್ಣಯಃ** = ಪ್ರಾಜ್ಞರ ನಿರ್ಣಯವಿದೆ.

ಲೋಕದಲ್ಲಿ ನಾನಾ ಬಗೆಯ ಜೀವಿಗಳಿದ್ದಾರೆ. ಅವುಗಳಲ್ಲಿ ಇರುವ ಜೀವಾತ್ಮರು ಅಸಂಖ್ಯಾತರಾಗುತ್ತಾರೆ. ಅವರ ರೂಪ, ಕ್ರಿಯೆ, ನಾಮಗಳು ವಿಭಿನ್ನವಾಗಿವೆ. ಇರುವ ಆತ್ಮನು ಒಬ್ಬನೇ ಆದರೆ ಇವೆಲ್ಲವೂ ಘಟಿಸುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರ ಹೀಗೆ – ಮಹಾಕಾಶವು ಒಂದೇ ಎಂಬುದು ಸರ್ವರಿಗೂ ಗೊತ್ತಿದೆ. ಆದರೂ ಉಪಾಧಿಭೇದಗಳಿಂದ ನಾಮರೂಪಕ್ರಿಯೆಗಳು ವಿಭಿನ್ನವಾಗು ತ್ತವೆ. ಘಟ, ಕರಕ (ಹೂಜಿ), ಗೃಹ ಮುಂತಾದ ಉಪಾಧಿಗಳಲ್ಲಿ ಆಕಾಶವಿದೆ ಯಷ್ಟೆ. ಇವುಗಳಲ್ಲಿರುವ ಆಕಾಶವು ಅಲ್ಪತ್ವ, ಮಹತ್ತ್ವಾದಿ ರೂಪಗಳನ್ನೂ ಘಟಾಕಾಶ, ಕರಕಾಕಾಶ, ಗೃಹಾಕಾಶ ಮುಂತಾದ ನಾಮಗಳನ್ನೂ ಪಡೆಯುತ್ತದೆ. ಘಟಾಕಾಶವು ಜಲವನ್ನು ತರುವುದಕ್ಕೂ ಕರಕಾಕಾಶವು ನೀರನ್ನು ತುಂಬುವುದಕ್ಕೂ ಗೃಹಾಕಾಶವು ಜನರ ವಾಸಕ್ಕೂ, ಮಲಗುವುದು ಮುಂತಾದ ಕ್ರಿಯೆಗಳಿಗೂ

ಉಪಯುಕ್ತವಾಗುತ್ತವೆ. ಘಟಾದಿಗಳು ಉಪಾಧಿಗಳಾದ್ದರಿಂದ ಅವುಗಳಲ್ಲಿರುವ ಆಕಾಶವು ಜಲಾಹರಣಾದಿಕ್ರಿಯೆಗೆ ಉಪಯುಕ್ತವಾಗಿದೆ. ಮಹಾಕಾಶವು ಒಂದೇ ಆದರೂ ಘಟಾಕಾಶ ಮುಂತಾದ ಹೆಸರುಗಳನ್ನೂ ಚಿಕ್ಕದು ದೊಡ್ಡದು ಎಂಬ ರೂಪಗಳನ್ನೂ ಬೇರೆ ಬೇರೆ ಕ್ರಿಯೆಗಳನ್ನೂ ಉಪಾಧಿನಿಮಿತ್ತವಾಗಿ ಪಡೆದಿದೆ. ಅದೇ ರೀತಿಯಲ್ಲಿ ಆತ್ಮನು ಒಬ್ಬನೇ ಆದರೂ ದೇಹ, ಅಂತಃಕರಣ ಮುಂತಾದ ಉಪಾಧಿಗಳಿಂದ ರೂಪಕ್ರಿಯಾನಾಮಗಳನ್ನು ನಾನಾ ವಿಧವಾಗಿ ಪಡೆಯುತ್ತಾನೆ. ಇದು ಪ್ರಾಜ್ಞರಾದ ಮುನಿಜನರು ಅಂಗೀಕರಿಸಿದ ವಿಷಯವಾಗಿದೆ.

**ನಾಽಽಕಾಶಸ್ಯ ಘಟಾಕಾಶೋ ವಿಕಾರಾವಯವೌ ಯಥಾ ।**
**ನೈವಾತ್ಮನಃ ಸದಾ ಜೀವೋ ವಿಕಾರಾವಯವೌ ತಥಾ ॥೭॥**

**ಘಟಾಕಾಶಃ** = ಘಟಾಕಾಶವು, **ಆಕಾಶಸ್ಯ** = ಮಹಾಕಾಶದ **ವಿಕಾರಾವ–ಯವೌ ಯಥಾ ನ** = ವಿಕಾರವಾಗಲಿ ಅವಯವವಾಗಲಿ ಹೇಗೆ ಅಲ್ಲವೋ, **ತಥಾ** = ಹಾಗೆಯೇ **ಜೀವಃ** = ಜೀವನು, **ಆತ್ಮನಃ** = ಪರಮಾತ್ಮನ, ವಿಕಾರವಾಗಲಿ ಅವಯವವಾಗಲಿ, **ಸದಾ** = ಯಾವಾಗಲೂ, **ನೈವ** = ಅಲ್ಲವೇ ಅಲ್ಲ.

ವಿಕಾರವೆಂದರೆ ರೂಪಾಂತರ. ಚಿನ್ನದ ಗಟ್ಟಿಗೆ ಪದಕ, ಹಾರ ಮುಂತಾದವು ವಿಕಾರಗಳು. ಅವಯವವೆಂದರೆ ಒಂದು ತುಂಡು, ಒಂದು ಭಾಗ. ಕೊಂಬೆ, ಬೇರು ಮುಂತಾದವು ಮರದ ಅವಯವಗಳು. ಕೈಕಾಲುಗಳು ದೇಹದ ಅವಯವಗಳು. ಹಾಗೆ ಘಟಾಕಾಶ, ಗೃಹಾಕಾಶ ಮುಂತಾದವು ಮಹಾಕಾಶದ ವಿಕಾರಗಳೂ ಅಲ್ಲ, ಅವಯವಗಳೂ ಅಲ್ಲ. ಆಕಾಶವನ್ನು ಕರಗಿಸಿ ವಿಕಾರ ಮಾಡಲು ಶಕ್ಯವಿಲ್ಲ. ಅಥವಾ ಆಕಾಶವನ್ನು ಕತ್ತರಿಸಿ ತುಂಡು ಮಾಡಲು ಶಕ್ಯವಿಲ್ಲ. ಘಟಾಕಾಶಾದಿಗಳು ಮಹಾಕಾಶವೇ ಆಗಿವೆ. ಘಟ, ಗೃಹ ಮುಂತಾದ ಉಪಾಧಿಗಳಿಂದ ಬೇರೆ ಬೇರೆಯಾಗಿರುವಂತೆ ತೋರುತ್ತವೆ. ಹಾಗೆಯೇ ಜೀವಾತ್ಮನೂ ಪರಮಾತ್ಮನೇ ಆಗಿದ್ದಾನೆ. ದೇಹ, ಇಂದ್ರಿಯ, ಅಂತಃಕರಣ ಮುಂತಾದ ಉಪಾಧಿಗಳಿಂದ ಇವನು ಅನ್ಯನೋ ಎಂಬಂತೆ ತೋರುತ್ತಾನೆ. ಆದ್ದರಿಂದಲೇ **ತತ್ತ್ವಮಸಿ** = ನೀನು ಬ್ರಹ್ಮವಾಗಿದ್ದೀಯೆ, **ಅಹಂ ಬ್ರಹ್ಮಾಸ್ಮಿ** = ನಾನು ಬ್ರಹ್ಮವಾಗಿದ್ದೇನೆ ಎಂದೇ ಶ್ರುತಿಗಳು ಹೇಳುತ್ತವೆ. ನೀನು ಮುಂದೆ ಬ್ರಹ್ಮವಾಗಬೇಕು, ನಾನು ಬ್ರಹ್ಮವಾಗಬೇಕಾಗಿದೆ ಎಂದು ಶ್ರುತಿಗಳು ಹೇಳಿಲ್ಲ. ಅವಿದ್ಯೆಯಿಂದ ಜೀವನು 'ನಾನು ಬ್ರಹ್ಮವಲ್ಲ' ಎಂದು ತಪ್ಪಾಗಿ ತಿಳಿದು ಕೊಂಡಿದ್ದಾನೆ. ನಾವು ಆಕಾಶದ ದೃಷ್ಟಾಂತವನ್ನು ಕೊಟ್ಟದ್ದು ಸರಿಯಾಗಿದೆ.

**ಯಥಾ ಭವತಿ ಬಾಲಾನಾಂ ಗಗನಂ ಮಲಿನಂ ಮಲೈಃ ।**
**ತಥಾ ಭವತ್ಯಬುದ್ಧಾನಾಮಾತ್ಮಾಽಪಿ ಮಲಿನೋ ಮಲೈಃ ॥೮॥**

**ಬಾಲಾನಾಂ** = ಬಾಲಕರಂತೆ ವಿಚಾರಶೂನ್ಯರಾದ ಜನರಿಗೆ, **ಗಗನಂ** = ಶುಭ್ರವಾದ ಆಕಾಶವು, **ಮಲಿನೈಃ** = ಮಲಿನವಾದ ಧೂಳಿ, ಹೊಗೆ ಮುಂತಾದವುಗಳಿಂದ, **ಮಲಿನಂ** = ಮಲಿನವಾಗಿ, **ಭವತಿ** = ಇದೆ ಎಂದು ತೋರುತ್ತದೆಯೋ, **ತಥಾ** = ಹಾಗೆಯೇ, **ಅಬುದ್ಧಾನಾಂ** = ತತ್ತ್ವವನ್ನರಿಯದ ಅಜ್ಞಾನಿಗಳಿಗೆ, **ಆತ್ಮಾऽಪಿ** = ಪ್ರತ್ಯಗಾತ್ಮನೂ ಸಹ, **ಮಲೈಃ** = ಮಲಗಳಂತಿರುವ ಕಷ್ಟ, ಕರ್ಮಫಲಗಳಾದ ರೋಗಾದಿಗಳಿಂದ **ಮಲಿನಃ** = ಕ್ಲೇಶವನ್ನನುಭವಿಸತಕ್ಕವನು, **ಭವತಿ** = ಆಗಿದ್ದಾನೆಂದು ಕಾಣುತ್ತದೆ.

ಜೀವನು ಪರಮಾತ್ಮನ ವಿಕಾರವಾಗಲಿ, ಅವಯವವಾಗಲಿ ಅಲ್ಲವೆಂಬುದನ್ನು ಒಪ್ಪೋಣ. ಆದರೆ ಪರಮಾತ್ಮನೇ ಜೀವನೆಂಬುದನ್ನು ಹೇಳುವುದು ಯುಕ್ತವಲ್ಲ. ಪರಮಾತ್ಮನು ನಿತ್ಯಶುದ್ಧಬುದ್ಧಮುಕ್ತನಾದವನು. ಬಡಜೀವವಾದರೋ ಕಷ್ಟಕಾರ್ಪಣ್ಯ, ದಡ್ಡತನ ಮುಂತಾದವುಗಳಿಂದ ಬಳಲುತ್ತಲೇ ಇರುತ್ತದೆ. ಆದ್ದರಿಂದ ಜೀವಾತ್ಮರು ಪರಮಾತ್ಮನಿಗಿಂತ ಬೇರೆಯವರೆಂಬ ದ್ವೈತಮತವೇ ಯುಕ್ತವೆಂದು ಕೆಲವರು ವಾದಿಸಬಹುದು. ಅವರಿಗೆ ಹೇಳುವ ಉತ್ತರವಿದು–

ಆಕಾಶವು ರೂಪರಹಿತವಾದದ್ದು. ಅದಕ್ಕೆ ಅವಯವಗಳೂ ಇಲ್ಲ. ಆದಕ್ಕೆ ಕೊಳೆಯನ್ನು ಅಂಟಿಸಲು ಶಕ್ಯವೇ ಇಲ್ಲ. ಧೂಳಿ, ಹೊಗೆ ಮುಂತಾದವು ಘಟಪಟಾದಿಗಳಂತೆ ಆಕಾಶದಲ್ಲಿ ಹರಡಿಕೊಂಡು ತಾವೇ ಕಾಣಿಸುತ್ತವೆಯೇ ಹೊರತು, ಆಕಾಶಕ್ಕೆ ಎಂದಿಗೂ ಅಂಟುವುದಿಲ್ಲ. ವಿವೇಚನೆಯಿಲ್ಲದವರು ಆಕಾಶವು ಮಲಿನವಾಗಿದೆಯೆಂದು ಹೇಳುತ್ತಾರೆ. ಹಾಗೆಯೇ ವಿಜ್ಞಾತೃವೂ ಪರಮಶುದ್ಧನೂ ಆದ ಪ್ರತ್ಯಗಾತ್ಮನಿಗೆ ಯಾವ ಕ್ಲೇಶವೂ ಆಗುವುದಿಲ್ಲ. ಕರ್ಮಫಲಗಳೂ ಅಂಟುವುದಿಲ್ಲ, ರೋಗವೂ ಮುಟ್ಟುವುದಿಲ್ಲ. ಕ್ಲೇಶಾದಿಗಳಾಗುವುದು ಮನುಷ್ಯನ ಅಂತಃಕರಣಕ್ಕೆ ದೇಹದಲ್ಲಿರುವ ಪ್ರತ್ಯಗಾತ್ಮನಿಗಲ್ಲ. ಯಾರು ಗುರುಮುಖದಿಂದ ಉಪನಿಷತ್ತು ಮುಂತಾದ ಸದ್ಗ್ರಂಥಗಳನ್ನು ಕ್ರಮವಾಗಿ ಅಧ್ಯಯನ ಮಾಡಿಲ್ಲವೋ ಅಂತಹ ವಿವೇಕಶೂನ್ಯರಿಗೆ ಮಾತ್ರ ಜೀವನು ಬೇರೆ, ಅವನು ಕ್ಲೇಶಾದಿಗಳನ್ನು ಅನುಭವಿಸುತ್ತಾನೆ ಎಂದು ತೋರುತ್ತದೆ.

**ಮರಣೇ ಸಂಭವೇ ಚೈವ ಗತ್ಯಾಗಮನಯೋರಪಿ ।**
**ಸ್ಥಿತೌ ಸರ್ವಶರೀರೇಷು ಆಕಾಶೇನಾವಿಲಕ್ಷಣಃ ॥೯॥**

**ಸರ್ವಶರೀರೇಷು** = ಎಲ್ಲ ಶರೀರಗಳಲ್ಲಿಯೂ (ಆತ್ಮನು), **ಮರಣೇ** = ಸಾವಿನಲ್ಲಿ, **ಸಂಭವೇ** = ಹುಟ್ಟಿನಲ್ಲಿ, **ಗತ್ಯಾಗಮನಯೋರಪಿ** = ಗಮನಾ–ಗಮನಗಳ ವಿಷಯದಲ್ಲಿ, **ಸ್ಥಿತೌ** = ಒಂದೇ ಕಡೆ ನಿಂತಿರುವ ವಿಷಯದಲ್ಲಿ, **ಆಕಾಶೇನ** = ಘಟಾಕಾಶದೊಡನೆ, **ಅವಿಲಕ್ಷಣಃ** = ಸಮಾನನಾಗಿರುತ್ತಾನೆ.

ದೇಹದಲ್ಲಿರುವ ಪ್ರತ್ಯಗಾತ್ಮನು ಘಟಾಕಾಶಕ್ಕೆ ಸದೃಶನೆಂದು ಹೇಳಬಹುದು. ಘಟವು ಒಡೆದು ನಾಶವಾದರೆ ಆಕಾಶವು ನಾಶವಾಗುವುದಿಲ್ಲ. ಘಟವು ಹುಟ್ಟಿದರೆ ಅದರೊಳಗಿನ ಆಕಾಶವು ಹುಟ್ಟಿ ಬರುವುದಿಲ್ಲ. ಗಡಿಗೆಯನ್ನೇ ಒಯ್ದರೆ ಅದರೊಳಗಿನ ಆಕಾಶವು ಹೋಗುವುದೂ ಇಲ್ಲ. ಗಡಿಗೆಯನ್ನು ತಂದರೆ ಆಕಾಶವು ಬರುವುದಿಲ್ಲ. ಗಡಿಗೆಯು ನಿಂತರೆ ಆಕಾಶವು ನಿಂತುಕೊಳ್ಳುವುದಿಲ್ಲ. ಹಾಗೆಯೇ ದೇಹವು ಸತ್ತರೆ ಒಳಗಿರುವ ಆತ್ಮವು ಸಾಯುವುದಿಲ್ಲ, ಹುಟ್ಟುವುದಿಲ್ಲ, ಹೋಗುವುದೂ ಇಲ್ಲ. ಬರುವುದೂ ಇಲ್ಲ. ನಿಂತುಕೊಳ್ಳುವುದೂ ಇಲ್ಲ. ಎಲ್ಲ ವಿಧದಲ್ಲಿಯೂ ಘಟಾಕಾಶಕ್ಕೆ ಸದೃಶನಾಗಿಯೇ ಆತ್ಮನು ಇರುತ್ತಾನೆ. ಮನುಷ್ಯನು ಸತ್ತ ಮೇಲೆ ಪುಣ್ಯವಂತನಾದರೆ ಸ್ವರ್ಗಕ್ಕೆ ಹೋಗುತ್ತಾನೆ. ಪಾಪಿಯಾದರೆ ನರಕಕ್ಕೆ ಹೋಗುತ್ತಾನೆ ಮುಂತಾದ ಹೇಳಿಕೆಗಳೆಲ್ಲವೂ ವ್ಯವಹಾರಸಿದ್ಧಿಗಾಗಿ ಅವಿದ್ಯೆಯಿಂದ ಕಲ್ಪಿತವಾದವು.

**ಸಂಘತಾಃ ಸ್ವಪ್ನವತ್ಸರ್ವೇ ಆತ್ಮಮಾಯಾವಿಸರ್ಜಿತಾಃ ।**
**ಆಧಿಕ್ಯೇ ಸರ್ವಸಾಮ್ಯೇವಾ ನೋಪಪತ್ತಿರ್ಹಿ ವಿದ್ಯತೇ ॥೧೦॥**

**ಸರ್ವೇ** = ಸಮಸ್ತ, **ಸಂಘತಾಃ** = ದೇಹಾದಿ ಸಂಘಾತಗಳು **ಸ್ವಪ್ನವತ್** = ಸ್ವಪ್ನದಲ್ಲಿ ಕಾಣುವ ದೇಹಗಳಂತೆ, ಆತ್ಮನ ಮಾಯೆಯಿಂದ (ಅವಿದ್ಯೆಯಿಂದ) ಹೊರಗೆ ಕಾಣಿಸತಕ್ಕವುಗಳಾಗಿವೆ. **ಆಧಿಕ್ಯೇ** = ಒಂದಕ್ಕಿಂತ ಇನ್ನೊಂದು ಅಧಿಕ ವಾಗಿರಲಿ, **ವಾ** = ಅಥವಾ, **ಸರ್ವಸಾಮ್ಯೇ** = ಎಲ್ಲವೂ ಸಮವಾಗಿರಲಿ, **ಉಪಪತ್ತಿಃ** = ಅವು ಸದ್ವಸ್ತುಗಳೆಂಬುದಕ್ಕೆ ಹೇತುವು, **ನ ದೃಶ್ಯತೇ** = ಕಾಣುವುದಿಲ್ಲವಷ್ಟೆ.

ಆಕಾಶದಲ್ಲಿ ಭೇದವಿಲ್ಲವಾದರೂ ಅದಕ್ಕೆ ಉಪಾಧಿಗಳಾದ ಘಟಾದಿ ಪದಾರ್ಥಗಳು ಸತ್ಯವಾಗಬಹುದಷ್ಟೆ. ಹಾಗೆ ಆತ್ಮಭೇದವಿಲ್ಲದಿದ್ದರೂ ದೇಹಾದಿ ಸಂಘಾತಗಳು ಸತ್ಯವಾದರೆ ಅದ್ವೈತಕ್ಕೆ ಹಾನಿಯಾಗುತ್ತದೆ ಎಂದು ಶಂಕಿಸ ಬಹುದು. ಸಂಘಾತವೆಂದರೆ ದೇಹೇಂದ್ರಿಯಾದಿಗಳ ಸಮೂಹ. ಈ ಶಂಕೆಗೆ ಸಮಾಧಾನ ಹೀಗೆ – ಘಟಾದಿಗಳೂ ದೇಹಾದಿ ಸಮಸ್ತವಸ್ತುಗಳೂ ಸ್ವಪ್ನದೃಶ್ಯಗಳ ಹಾಗೆ ಮಿಥ್ಯೆಯಾದವು. ಐಂದ್ರಜಾಲಿಕನು ತೋರಿಸುವ ಇಂದ್ರಜಾಲದ ವಸ್ತು ಗಳಂತೆ ಆತ್ಮನ ಮಾಯೆಯಿಂದ–ಅವಿದ್ಯೆಯಿಂದ ತೋರತಕ್ಕವು. ಪರಮಾರ್ಥ ದಲ್ಲಿ ದೇಹಾದಿ ಸಂಘಾತಗಳೂ ಇಲ್ಲ. ಪಂಚಭೂತಗಳೂ ಇಲ್ಲ. ಇಂದ್ರಾದಿ ದೇವತೆಗಳ ದೇಹಗಳೂ ಮಿಥ್ಯೆಯಾದವು. ಉತ್ತಮವಾದ ದೇಹ, ಕೆಳದರ್ಜೆಯ ದೇಹ ಎಂಬ ವ್ಯತ್ಯಾಸವಾವುದೂ ಮಿಥ್ಯಾ ವಸ್ತುಗಳಲ್ಲಿಲ್ಲ. ಭೇದ ಮಾಡಲು

ಕಾರಣವೂ ಇಲ್ಲ. ಆದ್ದರಿಂದ ಸಕಲೋಪಾಧಿಗಳೂ ಎಲ್ಲ ದೃಶ್ಯ ವಸ್ತುಗಳೂ ಮಿಥ್ಯೆಯೇ ಸರಿ. ಅದ್ವೈತವು ನಿರ್ಬಾಧವಾಗಿರುತ್ತದೆ.

**ರಸಾದಯೋ ಹಿ ಯೇ ಕೋಶಾ ವ್ಯಾಖ್ಯಾತಾ ತೈತ್ತಿರೀಯಕೇ ।**
**ತೇಷಾಮಾತ್ಮಾ ಪರೋ ಜೀವಃ ಖಂ ಯಥಾ ಸಂಪ್ರಕಾಶಿತಃ ॥೧೧॥**

**ತೈತ್ತಿರೀಯಕೇ** = ತೈತ್ತಿರೀಯ ಬ್ರಹ್ಮವಲ್ಲಿಯಲ್ಲಿ, **ರಸಾದಯಃ** = ಅನ್ನರಸಮಯ, ಪ್ರಾಣಮಯವೇ ಮೊದಲಾದ, **ಯೇ** = ಯಾವ **ಕೋಶಾಃ** = ಪಂಚಕೋಶಗಳು, **ವ್ಯಾಖ್ಯಾತಾಃ** = ಪಕ್ಷಪುಚ್ಛಾದಿಗಳ ಪ್ರದರ್ಶನದೊಂದಿಗೆ ಸ್ಪಷ್ಟವಾಗಿ ಉಕ್ತವಾಗಿವೆಯೋ, **ತೇಷಾಂ** = ಆ ಪಂಚಕೋಶಗಳಿಗೆ, **ಪರಃ** = ಅನ್ಯನೂ ಸರ್ವಾಂತರನೂ ಆದವನು, **ಆತ್ಮಾ** = ಆತ್ಮನೆಂದೂ, ಆತನೇ **ಜೀವಃ** = ಸರ್ವರ ಜೀವನಕ್ಕೆ ನಿಮಿತ್ತನೆಂದೂ, **ಖಂ ಯಥಾ** = ಆಕಾಶವು ಹೇಗಿದೆಯೋ ಹಾಗೆ ಇದ್ದಾನೆಂದೂ, **ಸಂಪ್ರಕಾಶಿತಃ** = **"ಆತ್ಮಾಹ್ಯಾಕಾಶವತ್...."** ಇತ್ಯಾದಿ ಶ್ಲೋಕಗಳಿಂದ ವರ್ಣಿತನಾಗಿದ್ದಾನೆ (ಗೌ.ಕಾ. ೩-೩).

ಜೀವನು ಉತ್ಪತ್ತಿಲಯಗಮನಾಗಮನಾದಿ ದೋಷಗಳಿಲ್ಲದ ಅದ್ವಯಬ್ರಹ್ಮ ತತ್ತ್ವವೆಂದು ಹೇಳಿದ್ದಾಯಿತು. ಇದೆಲ್ಲವೂ ಶ್ರುತಿಪ್ರಮಾಣಸಿದ್ಧವೆಂದು ಈಗ ಪ್ರತಿಪಾದಿಸಲಾಗುವುದು. ತೈತ್ತಿರೀಯ ಬ್ರಹ್ಮವಲ್ಲಿಯ ಆರಂಭದಲ್ಲಿ ಪಂಚಕೋಶಗಳ ವರ್ಣನೆ ಬಂದಿದೆ.

ಖಡ್ಗಕ್ಕೆ ಆವರಣವಾದ ಒರೆಗೆ ಕೋಶವೆಂದು ಹೆಸರು. ಹೀಗೆ ಆಂತರವಾದ ವಸ್ತುವಿಗೆ ಆವರಣದಂತಿರುವ ಬಾಹ್ಯವಸ್ತುವನ್ನು ಇಲ್ಲಿ ಕೋಶವೆಂದು ಕರೆದಿದ್ದಾರೆ. ಬಾಹ್ಯವಾಗಿ ಕಾಣಿಸುವ ದೇಹವು ಅನ್ನರಸಮಯಕೋಶ. ಇದರೊಳಗಿನದು ಪ್ರಾಣಮಯ ಕೋಶ. ಅದರೊಳಗಿನವು ಕ್ರಮವಾಗಿ ಮನೋಮಯ, ವಿಜ್ಞಾನ ಮಯ, ಆನಂದಮಯಕೋಶಗಳು. ಈ ಪಂಚಕೋಶಗಳ ಒಳಗೆ ಸರ್ವಾಂತರ ವಾಗಿ ಇರತಕ್ಕವನು ಆತ್ಮ. ಆತನೇ ಆನಂದ. ಅವನೇ ಸರ್ವರ ಜೀವನಕ್ಕೆ ಕಾರಣನಾದ್ದರಿಂದ ಜೀವ ಎನಿಸಿದ್ದಾನೆ. **"ಯೇನ ಜಾತಾನಿ ಜೀವಂತಿ"** (ತೈತ್ತಿ ೩-೧) ಎಂದು ಶ್ರುತಿ ಇದೆ. ಈ ಆತ್ಮನು ಸರ್ವಾಂತರನೆಂದು ಬೃಹದಾರಣ್ಯಕ ದಲ್ಲಿಯೂ ಹೇಳಿದೆ **"ಯ ಆತ್ಮಾ ಸರ್ವಾಂತರಃ"** (ಬೃಹ. ೨-೫-೧). ಈ ಆತ್ಮನು ಯಾರೆಂದರೆ **"ಸತ್ಯಂ ಜ್ಞಾನಮನಂತಂ ಬ್ರಹ್ಮ"** (ತೈತ್ತಿ ೨-೧) ಎಂದು ಹಿಂದೆ ಪ್ರಕೃತವಾದದ್ದು.

ಬ್ರಹ್ಮವಲ್ಲಿಯ ಈ ವಾಕ್ಯಗಳನ್ನು ಗಮನಿಸಬೇಕು –

**೧. ಅನ್ನಾತ್ ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ ।**

**೨. ಅನ್ಯೋಽಂತರ ಆತ್ಮಾ ಪ್ರಾಣಮಯಃ ।**

**೩. ಅನ್ಯೋಂತರ ಆತ್ಮಾ ಮನೋಮಯಃ ।**

**೪. ಅನ್ಯೋಽಂತರ ಆತ್ಮಾ ವಿಜ್ಞಾನಮಯಃ ।**

**೫. ಅನ್ಯೋಽಂತರ ಆತ್ಮಾ ಆನಂದಮಯಃ ।**

ಈ ಪಂಚಕೋಶಗಳಾದ ಮೇಲೆ '**ಆನಂದ ಆತ್ಮಾ**' ಎಂದು ಹೇಳಿದೆ. ಆನಂದ ಮಯನು ಆನಂದದ ಕೋಶ. ಆನಂದ ಎಂಬುದೇ "**ಸತ್ಯಂ ಜ್ಞಾನಮನಂತಂ ಬ್ರಹ್ಮ**" ಎಂದು ತಿಳಿಯಬೇಕು. ಇದೇ ದೇಹದಲ್ಲಿ ಸರ್ವಾಂತರ. ಇದೇ ದೇಹದಲ್ಲಿ ಜೀವ.

**ದ್ವಯೋರ್ದ್ವಯೋರ್ಮಧುಜ್ಞಾನೇ ಪರಂ ಬ್ರಹ್ಮ ಪ್ರಕಾಶಿತಮ್ ।**
**ಪೃಥಿವ್ಯಾಮುದರೇ ಚೈವ ಯಥಾಽಽಕಾಶಃ ಪ್ರಕಾಶಿತಃ ॥೧೨॥**

**ಮಧುಜ್ಞಾನೇ** = ಬೃಹದಾರಣ್ಯಕೋಪನಿಷತ್ತಿನ ಮಧುಬ್ರಾಹ್ಮಣದಲ್ಲಿ (ಬೃಹ. ೨-೫-೧), **ದ್ವಯೋಃ ದ್ವಯೋಃ** = ಅಧಿದೈವ-ಅಧ್ಯಾತ್ಮಗಳೆಂಬ ಎರಡು ಸ್ಥಾನಗಳಲ್ಲಿ ಮತ್ತೆ ಮತ್ತೆ **ಪೃಥಿವ್ಯಾಮುದರೇಚೈವ** = ಪೃಥ್ವಿಯಲ್ಲಿಯೂ ಉದರದಲ್ಲಿಯೂ ಇರುವ, **ಆಕಾಶಃ ಯಥಾ** = ಆಕಾಶವು ಹೇಗೆ ಒಂದೇ ಆಗಿದೆಯೋ ಹಾಗೆ, **ಪರಂಬ್ರಹ್ಮ** = ಪರಬ್ರಹ್ಮವು, **ಪ್ರಕಾಶಿತಂ** = ಆ ಪರಬ್ರಹ್ಮವೇ ಈ ಜೀವ, ಬ್ರಹ್ಮವೇ ಈ ಜೀವ ಎಂದು ತಿಳಿಸಲ್ಪಟ್ಟಿದೆ.

**ತಾತ್ಪರ್ಯ** : ಜೀವಾತ್ಮನೇ ಪರಬ್ರಹ್ಮವೆಂದೂ ಅವರಲ್ಲಿ ಭೇದವಿಲ್ಲವೆಂದೂ ಬೃಹದಾರಣ್ಯಕದ ಮಧುಬ್ರಾಹ್ಮಣದಲ್ಲಿ ಪುನಃ ಪುನಃ ತಿಳಿಸಿದೆ. ಘಟಾಕಾಶ ಮಹಾಕಾಶಗಳಿಗೆ ಹೇಗೆ ಭೇದವಿಲ್ಲವೋ ಹಾಗೆಯೇ, ಪೃಥಿವೀ ಮುಂತಾದ ಅಧಿದೈವದಲ್ಲಿರುವ ತೇಜೋಮಯನಾದ ಪರಮಪುರುಷನಿಗೂ ಅಧ್ಯಾತ್ಮವಾದ ನಮ್ಮ ಉದರದಲ್ಲಿರುವ ಜೀವನಿಗೂ ಭೇದವಿಲ್ಲ, ಅವನೇ ಇವನು ಎಂದು ಬೃಹದಾರಣ್ಯಕವೂ ಬೋಧಿಸಿದೆ.

**ವಿವರಣೆ** : ಮಧುವೆಂದರೆ ಜೇನುತುಪ್ಪ, ಅಮೃತ. ಅದರಂತೆ ಆನಂದಕರವಾದದ್ದು ಬ್ರಹ್ಮವಿದ್ಯೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಇಲ್ಲಿ ಮಧುವೆಂದು ಕರೆಯಲಾಗಿದೆ. ಈ ಬ್ರಹ್ಮವಿದ್ಯೆಯನ್ನು ಪ್ರತಿಪಾದಿಸುವ ಬ್ರಾಹ್ಮಣಕ್ಕೆ ಮಧುಬ್ರಾಹ್ಮಣ ಎಂದು ಹೆಸರು. ಬೃಹದಾರಣ್ಯಕದಲ್ಲಿರುವ ಈ ಮಧುಬ್ರಾಹ್ಮಣದಲ್ಲಿ (ಬೃಹ.೨-೫-೧) ಹೀಗಿದೆ -

**"ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಮ್"** (೧).

**ಅರ್ಥ** : ಪೃಥಿವೀ ಎಂಬ ಉಪಾಧಿಯಲ್ಲಿ ತೇಜೋಮಯನೂ ಅಮೃತಮಯನೂ ಆದ ಯಾವ ಪುರುಷನಿದ್ದಾನೋ ಮತ್ತು ಅಧ್ಯಾತ್ಮದಲ್ಲಿ ಶಾರೀರನಾದ ತೇಜೋಮಯನೂ ಅಮೃತಮಯನೂ ಆದ ಯಾವ ಪುರುಷನಿದ್ದಾನೋ ಈತನೇ ಈ ಜೀವಾತ್ಮನು ಇವನೇ ಬ್ರಹ್ಮ. ಸರ್ವವೂ ಬ್ರಹ್ಮವೇ.

ಹೀಗೆಯೇ ಪಂಚಭೂತಗಳಲ್ಲಿ, ಆದಿತ್ಯನಲ್ಲಿ, ಚಂದ್ರನಲ್ಲಿ, ದಿಕ್ಕುಗಳಲ್ಲಿ, ವಿದ್ಯುತ್ತಿನಲ್ಲಿ, ಮೇಘದಲ್ಲಿ, ಧರ್ಮದಲ್ಲಿ, ಸತ್ಯದಲ್ಲಿ, ಮನುಷ್ಯಾದಿ ಸರ್ವ ಪ್ರಾಣಿಗಳಲ್ಲಿರುವ ಜೀವಾತ್ಮ ಧರ್ಮದಲ್ಲಿ, ಸತ್ಯದಲ್ಲಿ, ಮನುಷ್ಯಾದಿ ಸರ್ವ ಪ್ರಾಣಿಗಳಲ್ಲಿರುವ ಬ್ರಹ್ಮಜ್ಞಾನಿ ಇವರೆಲ್ಲರೂ ಬ್ರಹ್ಮವೇ. **'ಬ್ರಹ್ಮೇದಂ ಸರ್ವಮ್'** ಎಂದು ಇಲ್ಲಿ ಹದಿನಾಲ್ಕು ಸಲ ಬಂದಿದೆ! ಏಕೆಂದರೆ, ಮನುಷ್ಯನು ಅಲ್ಪಜ್ಞನಾಗಿ ನಾನಾ ಕಷ್ಟಗಳನ್ನು ಅನುಭವಿಸುತ್ತಾನೆ. ಹುಲಿ, ಕರಡಿ ಮುಂತಾದ ಕ್ರಿಮಿಕೀಟ ಗಳೂ ಬ್ರಹ್ಮವೇ ಎಂದು ಹೇಳಿದರೆ ಜನರಿಗೆ ನಂಬಿಕೆ ಬರುವುದಿಲ್ಲ. ಇವೆಲ್ಲವೂ ಬೇರೆ ಬೇರೆ ಜೀವಗಳು ಎಂದು ಜನರಲ್ಲಿ ಪ್ರಬಲವಾದ ವಿಶ್ವಾಸವು ಇದ್ದು ಬಿಟ್ಟಿದೆ. ಅದನ್ನು ಹೋಗಲಾಡಿಸುವುದಕ್ಕಾಗಿ ಶ್ರುತಿಯು ಕಾರುಣ್ಯದಿಂದ ಮತ್ತೆ ಮತ್ತೆ ಸರ್ವಜೀವಗಳೂ ಬ್ರಹ್ಮವೇ ಎಂದು ಒತ್ತಿ ಹೇಳುತ್ತದೆ. ಛಾಂದೋಗ್ಯದಲ್ಲಿ ಉದ್ದಾಲಕ ಮಹರ್ಷಿಯು ತನ್ನ ಮಗನಾದ ಶ್ವೇತಕೇತುವಿಗೆ **"ತತ್ ತ್ವಮಸಿ"** ಆ ಬ್ರಹ್ಮವೇ ನೀನು ಎಂದು ಒಂಬತ್ತು ಸಲ ಉಪದೇಶಿಸುತ್ತಾನೆ. ಇದೆಲ್ಲವೂ ಜನರಲ್ಲಿ ಮೂಡಿರುವ ದ್ವೈತಬುದ್ಧಿಯನ್ನು ಹೋಗಲಾಡಿಸುವುದಕ್ಕಾಗಿ. ಈ ಅದ್ವೈತವನ್ನು ವಿಷ್ಣುಪುರಾಣ, ಗರುಡಪುರಾಣ, ಭಾಗವತ ಮುಂತಾದ ಇತರ ಪ್ರಾಚೀನ ಗ್ರಂಥಗಳಲ್ಲಿಯೂ ಅನೇಕ ಸ್ಥಳಗಳಲ್ಲಿ ಋಷಿಗಳು ಉಪದೇಶಿಸಿದ್ದಾರೆ.

**ಜೀವಾತ್ಮನೋರನನ್ಯತ್ವಮಭೇದೇನ ಪ್ರಶಸ್ಯತೇ ।**
**ನಾನಾತ್ವಂ ನಿಂದ್ಯತೇ ಯಚ್ಚ ತದೇವಂ ಹಿ ಸಮಂಜಸಮ್** ॥೧೩॥

**ಜೀವಾತ್ಮನೋಃ** = ಜೀವ ಮತ್ತು ಪರಮಾತ್ಮ ಇವರಿಗೆ **ಅನನ್ಯತ್ವಂ** = ನಾವು ಉಪಪಾದಿಸಿದಂತೆ ಐಕ್ಯವು, **ಅಭೇದೇನ** = ಜೀವಾತ್ಮರಿಗೆ ಅಭೇದವಿದೆ ಯೆಂದು ಹೇಳುವುದರ ಮೂಲಕ, ವೇದದಿಂದಲೂ ವ್ಯಾಸಾದಿಮುನಿಗಳಿಂದಲೂ, **ಪ್ರಶಸ್ಯತೇ** = ಸ್ತುತಿಸಲ್ಪಟ್ಟಿದೆ. **ಯಚ್ಚ** = ಮತ್ತು ಯಾವ, **ನಾನಾತ್ವಂ** = ಜೀವಾತ್ಮರು ಪರಸ್ಪರ ಅನ್ಯರು ಎಂಬ ದ್ವೈತವು, **ನಿಂದ್ಯತೇ** = ನಿಂದಿಸಲ್ಪಡುತ್ತ

ದೆಯೋ **ತತ್** = ಅದೂ ಸಹ, **ಏವಂ** = ಅದ್ವೈತವು ಶಾಸ್ತ್ರೀಯವಾದದ್ದು ದ್ವೈತವು ಅಶಾಸ್ತ್ರೀಯವಾದದ್ದು ಎಂಬುದು. **ಸಮಂಜಸಂ ಹಿ** = ಸಂಗತವಾಗಿ ಹೊಂದಿಕೊಳ್ಳುತ್ತದೆಯಲ್ಲವೆ?

ಘಟಾಕಾಶವೇ ಮುಂತಾದ ದೃಷ್ಟಾಂತವನ್ನಾಶ್ರಯಿಸಿದ ಯುಕ್ತಿಯಿಂದಲೂ, ತೈತ್ತಿರೀಯಾದಿ ಶ್ರುತಿವಾಕ್ಯಗಳಿಂದಲೂ ಜೀವಾತ್ಮನೂ ಪರಮಾತ್ಮನೂ ಭಿನ್ನರಲ್ಲ, ಉಪಾಧಿ ಭೇದದಿಂದ ಭಿನ್ನರಾಗಿ ತೋರುತ್ತಾರೆ, ವಸ್ತುತಃ ಭೇದವಿಲ್ಲ, ಅದ್ವೈತವೇ ಶಾಸ್ತ್ರೀಯವೆಂದು ಹೇಳಿದ್ದೇವೆ. ಆದ್ದರಿಂದಲೇ ಶಾಸ್ತ್ರೀಯ ಗ್ರಂಥಗಳಲ್ಲಿ ಅದ್ವೈತದ ಸ್ತುತಿಯೂ ದ್ವೈತದ ನಿಂದೆಯೂ ಸ್ಪಷ್ಟವಾಗಿ ನಿರೂಪಿತವಾಗಿವೆ. ಹೇಗೆಂದರೆ –

**ಅದ್ವೈತದ ಸ್ತುತಿ –**

೧. **ಸ ಯೋ ಹ ವೈ ತತ್ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ** (ಮುಂ. ೩–೨–೯)

೨. **ಯ ಏವಂ ವೇದ ಅಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ** (ಬೃಹ. ೧–೪–೧೦)

೩. **ಇದಂ ಸರ್ವಂ ಯದಯಮಾತ್ಮಾ** (ಬೃಹ. ೨–೪–೬)

**ದ್ವೈತನಿಂದೆ**

೧. **ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ** (ಕಠ ೨–೧–೧೦).

೨. **ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹ–ಮಸ್ಮೀತಿ ನ ಸ ವೇದ** (ಬೃಹ. ೧–೪–೧೦).

೩. **ದ್ವಿತೀಯಾದ್ವೈ ಭಯಂ ಭವತಿ** (ಬೃಹ. ೧–೪–೨) ಇತ್ಯಾದಿ.

೧. **ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸು ದುರ್ಲಭಃ ॥**
(ಗೀತಾ. ೭-೧೯)

೨. **ಅಹಂ ಬ್ರಹ್ಮ ಪರಂ ಜ್ಯೋತಿರ್ವಿಷ್ಣುರಿತ್ಯೇವ ಚಿಂತಯೇತ್ ।**
**ಬ್ರಹ್ಮಾತ್ಮನೋರ್ಯದೇಕತ್ವಂ ಸ ಯೋಗಶ್ಚೋತ್ತಮೋ ಮತಃ ॥**
(ಗರುಡಪುರಾಣ, ಆಚಾರಖಂಡ)

೩. **ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ।**
(ವಿಷ್ಣುಪುರಾಣ ೬-೭-೯೫)

ಜೀವಾತ್ಮ ಪರಮಾತ್ಮರು ಭಿನ್ನರೆಂಬ ಭಾವನೆ ಅವಿದ್ಯಾಜನ್ಯವಾದದ್ದು.

**ಜೀವಾತ್ಮನೋಃ ಪೃಥಕ್ತ್ವಂ ಯತ್ ಪ್ರಾಗುತ್ಪತ್ತೇಃ ಪ್ರಕಾಶಿತಮ್ ।**
**ಭವಿಷ್ಯದ್ವೃತ್ತ್ಯಾ ಗೌಣಂ ತನ್ಮುಖ್ಯತ್ವಂ ಹಿ ನ ಯುಜ್ಯತೇ ॥೧೪॥**

**ಉತ್ಪತ್ತೇಃ ಪ್ರಾಕ್** = ಉತ್ಪತ್ತ್ಯರ್ಥಕವಾದ ಉಪನಿಷದ್ವಾಕ್ಯಗಳಿಗೆ ಪೂರ್ವದಲ್ಲಿಯೇ, **ಜೀವಾತ್ಮನೋಃ** = ಜೀವ ಮತ್ತು ಪರಮಾತ್ಮ ಇವರ **ಯತ್** = ಯಾವ, **ಪೃಥಕ್ತ್ವಂ** = ಭಿನ್ನತೆಯು, **ಪ್ರಕಾಶಿತಂ** = ಪ್ರಕಾಶಿತವಾಗಿದೆಯೋ **ತತ್** = ಅದು, **ಭವಿಷ್ಯದ್ವೃತ್ತ್ಯಾ** = ಮುಂದೆ ಹೇಳುವ ಏಕತ್ತ್ವಕ್ಕೆ ಅನುರೋಧವಾಗಿ, **ಗೌಣಂ** = ಗೌಣವೆಂದು (ಮುಖ್ಯವಲ್ಲವೆಂದು) ತಿಳಿಯಬೇಕು. ಭೇದಶ್ರುತಿಗೆ **ಮುಖ್ಯತ್ವಂ** = ಪ್ರಾಧಾನ್ಯವು, **ನ ಹಿ ಯುಜ್ಯತೇ** = ಯುಕ್ತವಾದದ್ದಲ್ಲ.

ಉಪನಿಷತ್ತುಗಳಲ್ಲಿ **"ಯತೋ ವಾ ಇಮಾನಿ ಭೂತಾನಿ ಜಾಯಂತೇ"** (ತೈತ್ತಿ. ೩–೧), **"ತಸ್ಮಾದಾತ್ಮನ ಆಕಾಶಃ ಸಂಭೂತಃ"** (ತೈತ್ತಿ. ೩–೧), **"ತತ್ತೇಜೋಽಸೃಜತ"** (ಛಾಂ. ೬–೩–೩) ಮುಂತಾದ ವಾಕ್ಯಗಳು ನಾನಾ ವಸ್ತುಗಳ ಉತ್ಪತ್ತಿಯನ್ನು ಹೇಳುತ್ತವೆ. ಕರ್ಮಕಾಂಡದಲ್ಲಿ ಸ್ವರ್ಗಕಾಮ, ಪುತ್ರಕಾಮ, ಆಯುಷ್ಕಾಮ ಮೊದಲಾದವರು ಬೇರೆ ಬೇರೆ ಯಾಗಗಳನ್ನು ಮಾಡಬೇಕೆಂದು ಹೇಳಿದೆ. **ತ್ರಿಯಂಬಕಂ ಯಜಾಮಹೇ, ನಮೋ ರುದ್ರೇಭ್ಯಃ** ಇತ್ಯಾದಿ ವಚನಗಳಿವೆ. ಇವೆಲ್ಲವೂ ದ್ವೈತವನ್ನು ಬೋಧಿಸುತ್ತವೆ. ಹೀಗಿರುವಾಗ **"ಏಕಮೇವಾ-ದ್ವಿತೀಯಮ್ ಸ ಆತ್ಮಾ ತತ್ತ್ವಮಸಿ"** ಮುಂತಾದವುಗಳೇ ಪ್ರಧಾನವೆಂದು ಹೇಳುವುದು ಹೇಗೆ?

ಅದು ಸರಿಯಲ್ಲ. ಕರ್ಮಕಾಂಡದಲ್ಲಿ ಲೋಕವ್ಯವಹಾರಸಿದ್ಧಿಗಾಗಿ ದ್ವೈತವು ಅಪೇಕ್ಷಿತವಾಗಿದೆ. ಜನರು ಅಜ್ಞಾನದಿಂದ ದ್ವೈತವನ್ನೇ ನಂಬಿ ವ್ಯವಹರಿಸುತ್ತಾರೆ. ಅವರಿಗೆ ಹೆಂಡತಿ, ಮಕ್ಕಳು, ಹಣ, ಅಧಿಕಾರ ಮುಂತಾದವುಗಳ ಆವಶ್ಯಕತೆ ಇರುವುದರಿಂದಲೂ ಭಕ್ತಿ, ಪೂಜೆ ಮುಂತಾದ್ದನ್ನು ಅವರು ಅವಲಂಬಿಸಬೇಕಾದ್ದರಿಂದಲೂ ಅವರಿಗೆ ಒಂದು ಮಾರ್ಗವನ್ನು ಕರ್ಮಕಾಂಡವು ಬೋಧಿಸುತ್ತದೆ. ಅವರ ಪರಮ ಶ್ರೇಯಸ್ಸಿಗಾಗಿ ಉಪನಿಷತ್ತುಗಳು ದ್ವೈತವನ್ನು ಅನುವಾದಿಸಿ ಅದ್ವಯಾತ್ಮನನ್ನೇ ವಿಶೇಷವಾಗಿ ಬೋಧಿಸಿವೆ. ದ್ವೈತವನ್ನು ನಿಂದಿಸಿಯೂ ಇವೆ. ಭವಿಷ್ಯತ್ತಿನಲ್ಲಿ ಅದ್ವೈತಕ್ಕೆ ಅನುಗುಣವಾಗಿ ಈ ದ್ವೈತವನ್ನು ಹೊಂದಿಸಿಕೊಳ್ಳಬೇಕು. ಹೇಗೆಂದರೆ, "**ಓದನಂ ಪಚತಿ** = ಅನ್ನವನ್ನು ಬೇಯಿಸುತ್ತಾನೆ" ಎನ್ನುತ್ತಾರೆ. ಜನರು ಅನ್ನವನ್ನು ಬೇಯಿಸುವುದಿಲ್ಲ, ಅಕ್ಕಿಯನ್ನು ಬೇಯಿಸಿ ಅನ್ನವಾಗುವಂತೆ ಮಾಡುತ್ತಾರೆ. ಮೊದಲು ಅಕ್ಕಿ ಇದ್ದರೆ ಅನ್ನವನ್ನು ಮಾಡಬಹುದು.

ಹಾಗೆಯೇ ಮೊದಲು ದ್ವೈತಬುದ್ಧಿ ಇದ್ದರೆ ಆಮೇಲೆ ಅದ್ವೈತ ಬುದ್ಧಿಯನ್ನು ಉಂಟು ಮಾಡಬಹುದು. ಅನ್ನವನ್ನು ಮಾಡುವುದಕ್ಕಾಗಿ ಅಕ್ಕಿಯನ್ನು ತರಬೇಕು. ಅಕ್ಕಿ ಗೌಣ, ಅನ್ನವು ಮುಖ್ಯ. ದ್ವೈತವು ಗೌಣ, ಅದ್ವೈತವು ಮುಖ್ಯ. 'ಬಟ್ಟೆಯನ್ನು ನೇಯುತ್ತಾನೆ' ಬಟ್ಟೆಯನ್ನು ನೇಯಬೇಕಾದ್ದಿಲ್ಲ. ನೂಲನ್ನು ನೇಯ್ದು ಬಟ್ಟೆಯನ್ನು ತಯಾರಿಸುತ್ತಾನೆ ಎಂದು ಅಭಿಪ್ರಾಯ. 'ಹಗ್ಗವನ್ನು ಹೊಸೆಯುತ್ತಾನೆ' ಹಗ್ಗವನ್ನು ಮತ್ತೆ ಹೊಸೆಯುವುದಿಲ್ಲ. ನಾರನ್ನು ಹೊಸೆದು ಹಗ್ಗವನ್ನು ಮಾಡುತ್ತಾನೆ. ನಾರು ಗೌಣ, ಹಗ್ಗ ಮುಖ್ಯ.

**''ಸಿದ್ಧಂ ಸಾಧ್ಯಾಯ ಉಪಯುಜ್ಯತೇ''** ಎಂದು ನ್ಯಾಯವಿದೆ. ಸಿದ್ಧವಾದ ಅಕ್ಕಿಯನ್ನು ಮನೆಗೆ ತಂದು ಸಾಧ್ಯವಾದ ಅನ್ನವನ್ನು ಮಾಡಲು ಉಪಯೋಗಿಸುತ್ತಾರೆ. ಹಾಗೆಯೇ ಶ್ರುತಿಯು ಲೋಕಸಿದ್ಧವಾದ ದ್ವೈತವನ್ನು ಅನುವಾದಿಸಿ ಸಾಧ್ಯವಾದ ಅದ್ವೈತ ಬುದ್ಧಿಯನ್ನುಂಟು ಮಾಡುತ್ತದೆ. ದ್ವೈತವು ಲೋಕದಲ್ಲಿ ಸಿದ್ಧ. ಅದ್ವೈತವು ಸಾಧ್ಯ.

**ಮೃಲ್ಲೋಹವಿಸ್ಫುಲಿಂಗಾದ್ಯೈಃ ಸೃಷ್ಟಿರ್ಯಾ ಚೋದಿತಾನ್ಯಥಾ ।**
**ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಂಚನ ॥೧೫॥**

ಮೃತ್ತಿಕೆ, ಲೋಹ, ಬೆಂಕಿಕಿಡಿ ಮುಂತಾದ ದೃಷ್ಟಾಂತಗಳಿಂದ ಜಗತ್ತಿನ ಸೃಷ್ಟಿಪ್ರಕಾರವು ಬೇರೆ ಬೇರೆ ವಿಧವಾಗಿ ಪ್ರತಿಪಾದಿತವಾಗಿದೆ. ಅದು ಜೀವ ಪರಮಾತ್ಮರಲ್ಲಿ ಐಕ್ಯವನ್ನು ಪ್ರತಿಪಾದಿಸುವುದಕ್ಕಾಗಿ ಅನುಸರಿಸಿದ ಒಂದು ಉಪಾಯವೇ ಹೊರತು ಬೇರೆಯಲ್ಲ. ಯಾವ ಪ್ರಕಾರದಲ್ಲಿಯೂ ಉತ್ಪತ್ತಿಜನ್ಯವಾದ ಭೇದವೆಂಬುದಿಲ್ಲ.

**ಟಿಪ್ಪಣಿ : ವಿಸ್ಫುಲಿಂಗ** = ಬೆಂಕಿಯ ಕಿಡಿ. **ಅವತಾರ** = ಬುದ್ಧಿಯನ್ನು ಏಕತ್ವದ ಕಡೆಗೆ ತರುವುದು.

ಈಗೊಂದು ಪ್ರಶ್ನೆ ಹುಟ್ಟುತ್ತದೆ. **''ಏಕಮೇವಾದ್ವಿತೀಯಂ ಬ್ರಹ್ಮ''** ಇತ್ಯಾದಿ ಶ್ರುತಿಗಳಿಂದ ಹಿಂದೆ ಹೇಳಿದಂತೆ **'ಉತ್ಪತ್ತೇಃ ಪ್ರಾಗಜಂ ಸರ್ವಂ'** ಎಂಬುದು ಸರಿ. ಜಗತ್ತಿನ ಉತ್ಪತ್ತಿಯಾದ ಮೇಲೆ ಅಸಂಖ್ಯಾತ ವಸ್ತುಗಳೂ ಜೀವಗಳೂ ಉತ್ಪನ್ನವಾದವು ಎನ್ನುವುದು ಸರಿಯಲ್ಲವೆ? ಮೃಲ್ಲೋಹಾದಿಗಳಿಂದ ನಾನಾ ಪ್ರಕಾರವಾಗಿ ನಾನಾ ಬಗೆಯ ಸೃಷ್ಟಿಯಾಯಿತೆಂದು ಶ್ರುತಿವಾಕ್ಯಗಳೇ ಹೇಳುತ್ತವೆ. ಉದಾಹರಣೆಗೆ–

೧. **ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್** (ಛಾಂ. ೬–೧–೪)

೨. **ಯಥಾ ಸೋಮ್ಯ ಏಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್** (ಛಾಂ. ೬–೧–೫)

೩. **ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾಃ** (ಬೃಹ. ೨–೧–೨೦)

೪. **ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ, ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ** (ಮುಂ. ೧–೧–೭)

ಇತ್ಯಾದಿ ಶ್ರುತಿಗಳು ಜಗತ್ತಿನ ಉತ್ಪತ್ತಿಯನ್ನು ಹೇಳುವುದರಿಂದ ಉತ್ಪತ್ತಿಯಾದ ಮೇಲೆ ದ್ವೈತವೇ ಸರ್ವತ್ರ ಸತ್ಯವೆನ್ನಬಹುದಲ್ಲವೆ?

ಹಾಗಲ್ಲ; ಇವೆಲ್ಲ ವಸ್ತುಗಳೂ ಸ್ವಪ್ನದೃಶ್ಯಗಳಂತೆ ಮಾಯಾಕಲ್ಪಿತಗಳಾಗಿವೆ ಯೆಂದು ಸಮಾಧಾನವನ್ನು ಹೇಳಿದ್ದಾಗಿದೆ. ಈ ವಿಭಿನ್ನ ಸೃಷ್ಟಿಶ್ರುತಿಗಳ ಆಶಯವೇ ಬೇರೆಯಾದದ್ದು. ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಲಭಿಸುತ್ತದೆ ಎಂಬುದನ್ನು ಪ್ರತಿಪಾದಿಸಿ ಏಕಾತ್ಮಜ್ಞಾನದ ಶ್ರೇಷ್ಠತೆಯನ್ನೂ ಅದರಿಂದ ಆಗುವ ಕೃತಕೃತ್ಯತೆಯನ್ನು ತಿಳಿಸುವುದು ಒಂದು ಪ್ರಯೋಜನ. ನಾನಾ ವಿಧದಲ್ಲಿ ಸೃಷ್ಟಿಯನ್ನು ಹೇಳಿದ್ದರಿಂದ ಸೃಷ್ಟಿಯಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ. ಇದೆಲ್ಲವೂ ಮಿಥ್ಯೆಯೆಂದು ತಿಳಿಸುವುದೇ ತಾತ್ಪರ್ಯವಾಗಿದೆ. ಸೃಷ್ಟಿಯು ಸತ್ಯವಾದರೆ ಅದಕ್ಕೊಂದು ಕ್ರಮ ವಿರುತ್ತದೆ. ಮಾಯಾಕಲ್ಪಿತಕ್ಕೆ ಕ್ರಮವಿರುವುದಿಲ್ಲ. ಕನಸು ಒಂದಾನೊಂದು ಕ್ರಮವನ್ನು ಅನುಸರಿಸುವುದಿಲ್ಲ. ಆದ್ದರಿಂದ ವಿಭಿನ್ನ ರೀತಿಯಲ್ಲಿ ಜಗದುತ್ಪತ್ತಿಯನ್ನು ಶ್ರುತಿಯು ಹೇಳಿರುವುದರಿಂದ ಜಗದುತ್ಪತ್ತಿಯಲ್ಲಿ ಅದಕ್ಕೆ ತಾತ್ಪರ್ಯವಿಲ್ಲವೆಂದೂ ಅದ್ವೈತ ಪ್ರತಿಪಾದನೆಯಲ್ಲಿಯೇ ಮುಖ್ಯ ತಾತ್ಪರ್ಯವಿದೆಯೆಂದೂ ತಿಳಿಯಬೇಕು.

**ಆಶ್ರಮಾಸ್ತ್ರಿವಿಧಾ ಹೀನಮಧ್ಯಮೋತ್ಕೃಷ್ಟ ದೃಷ್ಟಯಃ ।**
**ಉಪಾಸನೋಪದಿಷ್ಟೇಯಂ ತದರ್ಥಮನುಕಂಪಯಾ ॥೧೬॥**

**ಆಶ್ರಮಾಃ** = ಸಂನ್ಯಾಸಾಶ್ರಮಿಗಳೇ ಮೊದಲಾದ ಸನ್ಮಾರ್ಗಗಾಮಿಗಳು, **ಹೀನಮಧ್ಯಮೋತ್ಕೃಷ್ಟ ದೃಷ್ಟಯಃ** = ಹೀನ–ಮಧ್ಯಮ–ಉತ್ತಮ ದೃಷ್ಟಿಗಳೆಂದು, **ತ್ರಿವಿಧಾಃ** = ಮೂರು ಬಗೆಯವರಾಗಿರುತ್ತಾರೆ. **ತದರ್ಥಂ** = ಅಂಥವರಿ ಗೋಸ್ಕರ, **ಇಯಮುಪಾಸನಾ** = ಈ ಉಪಾಸನಾವಿಧಿಯು, **ಅನುಕಂಪಯಾ** = ಕಾರುಣ್ಯದಿಂದ, **ಉಪದಿಷ್ಟಾ** = ಉಪದೇಶಿಸಲ್ಪಟ್ಟಿದೆ.

ನಿತ್ಯಶುದ್ಧಬುದ್ಧಸ್ವರೂಪನಾದ ಆತ್ಮನೊಬ್ಬನೇ ಪರಮಾರ್ಥವೆಂದೂ ಉಳಿದುದೆಲ್ಲವೂ ಅಸತ್ ಎಂದೂ ಆದರೆ, **'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'** (ಬೃಹ. ೨–೪–೫), **ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ** (ಛಾಂ.೮–೭–೧) ಎಂದು

ಉಪಾಸನೆಗಳನ್ನು ಅಗ್ನಿ ಹೋತ್ರಾದಿಕರ್ಮಗಳನ್ನು ಶ್ರುತಿಯು ಏಕೆ ವಿಧಿಸಿದೆ? ಧರ್ಮಶಾಸ್ತ್ರಗಳೂ ನಾನಾ ದೇವತಾ ಪೂಜೆಗಳನ್ನು ವಿಧಿಸಲು ಕಾರಣವೇನು? ಒಬ್ಬನೇ ಆತ್ಮನು ಪರಮಾರ್ಥನಾಗಿರುವಾಗ, ಉಪಾಸ್ಯನು ಯಾರು? ಉಪಾಸಕನು ಯಾರು? ಕರ್ತನು ಯಾರು? ಭೋಕ್ತನು ಯಾರು? ಕರ್ಮ ಯಾವುದು? ಪೂಜ್ಯ ಪೂಜಕರು ಯಾರು? ಭೇದವೇ ಇಲ್ಲದಾಗ ಇದೆಲ್ಲವೂ ಅಸಂಗತವಾಗುವುದಿಲ್ಲವೆ?

ಈ ಸಂಶಯಕ್ಕೆ ಸಮಾಧಾನವೇನೆಂದರೆ–ಸನ್ಮಾರ್ಗದಲ್ಲಿ ಹೋಗತಕ್ಕವರು ಇದ್ದಾರಷ್ಟೆ. ಇವರನ್ನು ಅಲ್ಪ ದೃಷ್ಟಿಯವರು, ಮಧ್ಯಮ ದೃಷ್ಟಿಯವರು, ಉತ್ತಮ ದೃಷ್ಟಿಯವರು ಎಂದು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು. ಇಹ ಲೋಕದ ಸುಖವನ್ನೇ ಮುಖ್ಯವನ್ನಾಗಿಟ್ಟುಕೊಂಡವರು ಅಲ್ಪ ದೃಷ್ಟಿಯವರು ಅಥವಾ ಮಂದ ದೃಷ್ಟಿಯವರು. ಇಹಪರಗಳೆರಡನ್ನೂ ಗಮನದಲ್ಲಿಟ್ಟುಕೊಂಡವರು ಮಧ್ಯಮ ದೃಷ್ಟಿಯವರು. ಇವರಿಗೆ ದ್ವೈತವಾಸನೆ ಇನ್ನೂ ಉಳಿದುಕೊಂಡಿರುತ್ತದೆ. ಇಂತಹ ಜನರಿಗಾಗಿ ಉಪಾಸನೆ, ಪೂಜೆ, ಕರ್ಮ ಇವು ಅವಶ್ಯಕ. ಇಹಪರಗಳೆರಡೂ ಅನಿತ್ಯವಾದವೆಂದೂ ಇವು ಪರಮಾರ್ಥವಲ್ಲವೆಂದೂ ನಿಶ್ಚಯಿಸಿ ಅವುಗಳಲ್ಲಿ ಆಸೆಯನ್ನು ತೊರೆದು ಮೋಕ್ಷಾಪೇಕ್ಷಿಗಳಾದವರು ಉತ್ತಮ ದೃಷ್ಟಿಯವರು. ಇಂತಹ ಉತ್ತಮಾಧಿಕಾರಿಗಳಿಗಾಗಿ ಕೃಪಾಳುವಾದ ವೇದವು ಅನುಕಂಪೆಯಿಂದ ಇವರಿಗೆ ಏಕತ್ವದೃಷ್ಟಿಯನ್ನು ತರುವುದಕ್ಕಾಗಿ **''ಏಕಮೇವಾ–ದ್ವಿತೀಯಂ ಬ್ರಹ್ಮ, ಸರ್ವಂ ಖಲ್ವಿದಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ''** ಎಂದು ಪುನಃ ಪುನಃ ಎಂದು ಉಪದೇಶಿಸುತ್ತದೆ.

**ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥** (ಕೇನ. ೬)

''ಯಾವುದನ್ನು ಮನಸ್ಸಿನಿಂದ ಮನನ ಮಾಡಲು ಶಕ್ಯವಿಲ್ಲವೋ ಮನಸ್ಸನ್ನೇ ಯಾವುದು ಮನನ ಮಾಡುವುದೆಂದು ಜ್ಞಾನಿಗಳು ಹೇಳುತ್ತಾರೋ ಅದೇ ಬ್ರಹ್ಮವೆಂದು ನೀನು ತಿಳಿ. ಜನರು ಉಪಾಸನೆ ಮಾಡತಕ್ಕ ಈ ದೇವತೆ ಬ್ರಹ್ಮವಲ್ಲ'' ಇವೇ ಮೊದಲಾದ ವೇದವಾಕ್ಯಗಳು ಉಪಾಸನೆಗೆ ಶಕ್ಯವಾದದ್ದು ಬ್ರಹ್ಮವಲ್ಲವೆಂದು ಸ್ಪಷ್ಟವಾಗಿ ತಿಳಿಸಿರುತ್ತವೆ.

**ಸ್ವಸಿದ್ಧಾಂತವ್ಯವಸ್ಥಾಸು ದ್ವೈತಿನೋ ನಿಶ್ಚಿತಾ ದೃಢಮ್ ।**
**ಪರಸ್ಪರಂ ವಿರುಧ್ಯಂತೇ ತೈರಯಂ ನ ವಿರುಧ್ಯತೇ ॥೧೭॥**

**ಸ್ವಸಿದ್ಧಾಂತವ್ಯವಸ್ಥಾಸು** = ತಮ್ಮ ತಮ್ಮ ಸಿದ್ಧಾಂತಗಳನ್ನು ರಚಿಸುವ ನಿಯಮಗಳಲ್ಲಿ, **ದ್ವೈತಿನಃ** = ದ್ವೈತವಾದಿಗಳು, **ದೃಢಂ** = ಬಲವಾಗಿ,

**ನಿಶ್ಚಿತಾಃ** = ಹೀಗೆಯೇ ವಸ್ತುವಿಭಾಗ, ಇದೇ ಪರಮಾರ್ಥ–ಎಂದು ನಿಶ್ಚಯವನ್ನು ತಳೆದಿದ್ದಾರೆ. ಆದ್ದರಿಂದ **ಪರಸ್ಪರಂ** = ಪರಸ್ಪರ, **ವಿರುಧ್ಯಂತೇ** = ವಿರುದ್ಧವಾಗಿ ಹೇಳುತ್ತ ಜಗಳ ಮಾಡುತ್ತಾರೆ. ಆದರೆ **ಅಯಂ** = ಈ ಅದ್ವೈತ ಸಿದ್ಧಾಂತವು, **ತೈಃ** = ಅನ್ಯೋನ್ಯ ವಿರೋಧಿಗಳಾದ ದ್ವೈತ ಪಕ್ಷಗಳಿಗೆ, **ನ ವಿರುಧ್ಯತೇ** = ವಿರುದ್ಧ ವಾಗುವುದಿಲ್ಲ.

ವೇದಶಾಸ್ತ್ರಗಳಿಂದಲೂ ಹಿಂದೆ ಹೇಳಿದ ಉಪಪತ್ತಿಗಳಿಂದಲೂ ಸಿದ್ಧಾಂತಿಸಿದ ಅದ್ವಯಾತ್ಮ ದರ್ಶನವೇ ಸಮ್ಯಗ್ ದರ್ಶನವಾಗಿದೆ. ಉಳಿದ ದ್ವೈತ ದರ್ಶನ ಗಳೆಲ್ಲವೂ ಮಿಥ್ಯಾದರ್ಶನಗಳು. ಅವು ತಮ್ಮದೇ ಪರಮ ಸಿದ್ಧಾಂತವೆಂದು ಇತರ ದ್ವೈತ ದರ್ಶನಗಳೊಡನೆ ಜಗಳವಾಡಿ ರಾಗದ್ವೇಷಾದಿಗಳನ್ನುಂಟು ಮಾಡತಕ್ಕವು. ನಮ್ಮ ವೈದಿಕ ದರ್ಶನವಾದ ಅದ್ವೈತ ಸಿದ್ಧಾಂತವಾದರೋ ಇತರ ದರ್ಶನ ಗಳೆಲ್ಲವೂ ತನ್ನ ಅವಯವಗಳೆಂದೂ ತನ್ನ ಅಂಶಗಳೆಂದೂ ತನ್ನ ಬಳಿಗೆ ಬರುವ ಸೋಪಾನಗಳೆಂದೂ ಭಾವಿಸುವುದರಿಂದ ಇದಕ್ಕೆ ಅವುಗಳೊಡನೆ ವಿರೋಧವೂ ಇಲ್ಲ, ದ್ವೇಷವೂ ಇಲ್ಲ. ಸಾಂಖ್ಯಾದಿ ದ್ವೈತದರ್ಶನಗಳಲ್ಲಿ ಅನ್ಯೋನ್ಯ ವಿರೋಧ ವಿರುವುದಕ್ಕೆ ಕೆಲವು ನಿದರ್ಶನಗಳು.

೧. ಸಾಂಖ್ಯರು ತ್ರಿಗುಣಾತ್ಮಕವಾದ ಪ್ರಕೃತಿಯು ಜೀವಾತ್ಮರಿಗೆ ಸುಖ ದುಃಖಭೋಗಗಳನ್ನು ಉಂಟು ಮಾಡುವುದಕ್ಕಾಗಿ ಜಗತ್ತಾಗಿಯೂ ಪ್ರಾಣಿ ಶರೀರವಾಗಿಯೂ ಪರಿಣಮಿಸುತ್ತದೆ. ಆತ್ಮನು ನಿರಂಜನನಾದ್ದರಿಂದ ಅವನಲ್ಲಿ ಯಾವ ಗುಣಗಳೂ ಇರುವುದಿಲ್ಲ. ಜಗತ್ತಿನ ಉಪಾದಾನಕಾರಣ ಪ್ರಕೃತಿ.

೨. ವೈಶೇಷಿಕರು – ಪರಮಾಣುಗಳು ದ್ವ್ಯಣುಕಾದಿ ರೂಪದಿಂದ ಜಗತ್ತನ್ನು ನಿರ್ಮಿಸುತ್ತವೆ. ಬುದ್ಧಿ, ಸುಖ, ದುಃಖ ಮುಂತಾದ ಒಂಬತ್ತು ವಿಶೇಷ ಗುಣಗಳು ಆತ್ಮನಲ್ಲಿರುತ್ತವೆ. ಸಾಂಖ್ಯರದು ಸತ್ಕಾರ್ಯವಾದ. ಇವರದು ಅಸತ್ಕಾರ್ಯವಾದ.

೩. ಬೌದ್ಧರು – ಪಂಚಸ್ಕಂಧಗಳೇ ಆತ್ಮ. ಬೇರೆ ಆತ್ಮನಿಲ್ಲ. ಈಶ್ವರನೂ ಇಲ್ಲ. ಇವರಲ್ಲಿಯೇ ಸೌತ್ರಾಂತಿಕ, ವೈಭಾಷಿಕ ಮುಂತಾದ ಒಳಭೇದಗಳಿದ್ದು ಪರಸ್ಪರ ಹೊಂದಾಣಿಕೆ ಇಲ್ಲ.

೪. ಜೈನರು – ಜೀವ, ಅಜೀವ ಎಂದು ಪದಾರ್ಥಗಳು ಎರಡು ವಿಧ. ಕರ್ಮಗಳು ಅಣುರೂಪಗಳಾಗಿ ದೇಹಕ್ಕೆ ಅಂಟಿಕೊಳ್ಳುತ್ತವೆ. ಆತ್ಮನು ದೇಹದ ಪ್ರಮಾಣದಲ್ಲಿದ್ದು ದೇಹವನ್ನು ವ್ಯಾಪಿಸಿಕೊಳ್ಳುತ್ತಾನೆ. ಆತ್ಮನಿಗೆ ಸಂಕೋಚ ವಿಕಾಸ ಶಕ್ತಿಗಳುಂಟು. ಮನುಷ್ಯ ದೇಹವು ಬೆಳೆದಂತೆ ಅವನೂ ಬೆಳೆದು ದೇಹವನ್ನು ವ್ಯಾಪಿಸಿಕೊಳ್ಳುತ್ತಾನೆ. ಆತ್ಮನು ಮಧ್ಯಮ ಪ್ರಮಾಣದವನು.

ಈ ಪ್ರಕಾರವಾಗಿ ದ್ವೈತಿಗಳಲ್ಲಿ ತುಂಬ ಮತಭೇದಗಳಿವೆ. ಅದ್ವೈತ ಸಿದ್ಧಾಂತವಾದರೋ "ದೇಹದಲ್ಲಿ ಕಣ್ಣು, ಕೈ, ಕಾಲು ಮುಂತಾದ ಅವಯವ ಗಳಿದ್ದಂತೆ ಈ ಮತಗಳು ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತವೆ. ನಮಗೆ ಉಪಯುಕ್ತವಾದವನ್ನು ಗ್ರಹಿಸಿದರಾಯಿತು. ಅದ್ವೈತದ ಕಟ್ಟಡಕ್ಕೆ ಇಟ್ಟಿಗೆ, ಕಬ್ಬಿಣ, ಮರ ಎಲ್ಲವೂ ಬೇಕು" ಎಂದು ಶಾಂತವಾಗಿರುತ್ತದೆ.

**ಅದ್ವೈತಂ ಪರಮಾರ್ಥೋ ಹಿ ದ್ವೈತಂ ತದ್ಭೇದ ಉಚ್ಯತೇ ।**
**ತೇಷಾಮುಭಯಥಾ ದ್ವೈತಂ ತೇನಾಯಂ ನ ವಿರುಧ್ಯತೇ ॥೧೮॥**

**ಹಿ** = ಏಕೆಂದರೆ, **ಅದ್ವೈತಂ** = ಅದ್ವೈತವು ನಮಗೆ ಪರಮಾರ್ಥವಾಗಿದೆ. **ದ್ವೈತಂ** = ದ್ವೈತವು, **ತದ್ಭೇದಃ** = ಅದ್ವೈತದಿಂದಾದ ಭೇದ ಎಂದರೆ ಅದ್ವೈತದ ಕಾರ್ಯವೆಂದು **ಉಚ್ಯತೇ** = ಉಕ್ತವಾಗಿದೆ. **ತೇಷಾಂ** = ದ್ವೈತ ವಾದಿಗಳಿಗೆ, **ಉಭಯಥಾ** = ಪರಮಾರ್ಥ ಅಪರಮಾರ್ಥಗಳೆರಡೂ **ದ್ವೈತಂ** = ದ್ವೈತವೇ ಆಗಿದೆ. **ತೇನ** = ಈ ಕಾರಣದಿಂದ, **ಅಯಂ** = ನಮ್ಮ ಈ ಅದ್ವೈತಪಕ್ಷವು, **ನ ವಿರುಧ್ಯತೇ** = ವಿರುದ್ಧವಾಗುವುದಿಲ್ಲ.

**"ಸೋಮ್ಯೇದಮಗ್ರ ಆಸಿದೇಕಮೇವಾದ್ವಿತೀಯಂ । ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ । ತತ್ತೇಜೋಽಸೃಜತ"** (ಛಾಂ. 6-12-2) ಇತ್ಯಾದಿ ಶ್ರುತಿಪ್ರಾಮಾಣ್ಯದಿಂದ ಸಮಸ್ತ ದ್ವೈತವೂ ಅದ್ವೈತಾತ್ಮನಿಂದ ಹುಟ್ಟಿದೆಯೆಂದು ದೃಢವಾಗಿ ತಿಳಿದಿದೆ. ಇದರಿಂದ ಅದ್ವೈತವೇ ಪರಮಾರ್ಥ ವೆಂದೂ ಅದೇ ದ್ವೈತಕ್ಕೆ ಕಾರಣವೆಂದೂ ದ್ವೈತವು ಅದ್ವೈತದ ಕಾರ್ಯವೆಂದೂ ಸ್ಫುಟವಾಗುತ್ತದೆ. ಸಮಾಧಿಯಲ್ಲಿಯೂ ಮೂರ್ಛೆಯಲ್ಲಿಯೂ ಸುಷುಪ್ತಿಯಲ್ಲಿಯೂ ಚಿತ್ತಸ್ಪಂದನವಿಲ್ಲದ್ದರಿಂದ ದ್ವೈತವು ಇರುವುದಿಲ್ಲ. ಜಾಗ್ರತ್ ಸ್ವಪ್ನಗಳಲ್ಲಿ ಚಿತ್ತ ಸ್ಪಂದನವಿರುವುದರಿಂದ ದ್ವೈತವು ಗೋಚರಿಸುತ್ತದೆ. ಕಾರಣವಾದ ಅದ್ವೈತವು ತನ್ನ ಕಾರ್ಯವಾದ ದ್ವೈತದೊಡನೆ ವಿರೋಧಿಸುವುದು ಯುಕ್ತವೂ ಅಲ್ಲ. ದ್ವೈತ ವಾದರೋ ಅಜ್ಞಾನದಿಂದ ಕಲ್ಪಿತವಾದದ್ದು; ಪರಮಾರ್ಥವಲ್ಲ ಮತ್ತು ವ್ಯವಹಾರ ಸಿದ್ಧಿಗಾಗಿ ಉಪಾಸನಾವಿಧಿಯೂ ಕರ್ಮಕಾಂಡಗಳ ಸಾರ್ಥಕ್ಯಕ್ಕಾಗಿ ದ್ವೈತದ ಉಪಯೋಗವೂ ಉಂಟು. ಆದ್ದರಿಂದ ಅದ್ವೈತವು ದ್ವೈತವನ್ನು ವಿರೋಧಿಸು ವುದೇ* ಇಲ್ಲ. ದ್ವೈತಿಗಳಿಗೆ ದ್ವೈತವೇ ಪರಮಾರ್ಥ- ಅಪರಮಾರ್ಥ (ವ್ಯವಹಾರಾರ್ಥ)ಗಳೆರಡೂ ಆಗಿರುವುದರಿಂದ ಹಿಂದೆ ಹೇಳಿದಂತೆ ಅವರು ಕಲಹ

* ಅದ್ವೈತಿಗಳು ದ್ವೈತಿಗಳೊಡನೆ ವಾದಕ್ಕೆ ಇಳಿಯಬಾರದು ಎಂಬ ನೀತಿಯು ಇಲ್ಲಿ ಸೂಚಿತವಾಗಿದೆ.

ಮಾಡುತ್ತಾರೆ. ಆದ್ದರಿಂದ ಅದ್ವೈತವೇ ಸಮ್ಯಗ್ ದರ್ಶನ. **''ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ''** ॥

**ಮಾಯಯಾ ಭಿದ್ಯತೇ ಹ್ಯೇತನ್ನಾನ್ಯಥಾಽಜಂ ಕಥಂಚನ ।**
**ತತ್ತ್ವತೋ ಭಿದ್ಯಮಾನೇ ಹಿ ಮರ್ತ್ಯತಾಮಮೃತಂ ವ್ರಜೇತ್ ॥೧೯॥**

**ಏತತ್ ಅಜಂ** = ಈ ಜನ್ಮರಹಿತವಾದ ಬ್ರಹ್ಮವು, **ಮಾಯಯಾ** = ಮಾಯಾಶಕ್ತಿಯಿಂದ, **ಭಿದ್ಯತೇ ಹಿ** = ವಿಭಿನ್ನವಾಗಿ ದ್ವೈತವಾಗುತ್ತದೆಯಲ್ಲವೆ? **ಅನ್ಯಥಾ** = ಬೇರೆ ರೀತಿಯಲ್ಲಿ ಸಹಜವಾಗಿ, **ಕಥಂಚನ** = ಯಾವ ರೀತಿ ಯಲ್ಲಿಯೂ ಎಂದಿಗೂ, **ನ** = ದ್ವೈತವಾಗುವುದಿಲ್ಲ. **ತತ್ತ್ವತಃ** = ಪರಮಾರ್ಥ ವಾಗಿ, **ಭಿದ್ಯಮಾನೇ** = ವಿಭಿನ್ನವಾಗಿ ದ್ವೈತವಾದಲ್ಲಿ, **ಅಮೃತಂ** = ಅಮೃತ ವಾದ (ಶಾಶ್ವತವಾದ) ಬ್ರಹ್ಮವು, **ಮರ್ತ್ಯತಾಂ** = ಸಾವನ್ನು, **ವ್ರಜೇತ್** = ಪಡೆದುಬಿಟ್ಟೀತು!

ಪರಮಾರ್ಥವಾದ ಅದ್ವೈತವು ದ್ವೈತವಾಗುವುದಾದರೆ, ದ್ವೈತವೂ ಪರಮಾರ್ಥವೇ ಆಗುತ್ತದೆಯಲ್ಲವೆ? ಮಣ್ಣಿನಿಂದ ಹುಟ್ಟಿದ್ದು ಮಣ್ಣೇ ಆಗಬೇಕು. ಚಿನ್ನದಿಂದ ಹುಟ್ಟಿದ್ದು ಚಿನ್ನವೇ ಆಗಬೇಕು! ದ್ವೈತವು ಪರಮಾರ್ಥವಲ್ಲವೆಂದು ಹೇಗೆ ಹೇಳಿದಿರಿ? ಎಂದು ಶಂಕೆ.

ಸಾಂಖ್ಯಮತದ ಸತ್ಕಾರ್ಯವಾದದಂತೆ ಮಣ್ಣು ಗಡಿಗೆಯಾಗಿ ಪರಿಣಮಿಸ ಬೇಕಾದರೆ ಮಣ್ಣು ಸಾವಯವವಾಗಿರುತ್ತದೆ. ಅವಯವಗಳಿದ್ದರೆ ಮಾತ್ರ ವಸ್ತು ಇನ್ನೊಂದಾಗಿ ಪರಿಣಮಿಸುತ್ತದೆ. ತಾರ್ಕಿಕರ ಅಸತ್ ಕಾರ್ಯವಾದದಲ್ಲಿಯೂ ಮಣ್ಣಿ ನಿಂದ ಗಡಿಗೆ ಹುಟ್ಟಬೇಕಾದರೆ ಮಣ್ಣು ಸಾವಯವವಾಗಿರುತ್ತದೆ. ಯಾವ ವಸ್ತುವೇ ಆಗಲಿ ಪರಿಣಾಮದಿಂದ ರೂಪಾಂತರ ಹೊಂದಿದರೂ ಅಥವಾ ಆ ವಸ್ತುವಿನಿಂದ ಇನ್ನೊಂದು ವಸ್ತು ಹುಟ್ಟಿದರೂ ಮೂಲ ವಸ್ತುವು ಅವಯವ ವಿಶಿಷ್ಟವಾಗಲೇ ಬೇಕು. ಅವಯವವುಳ್ಳದ್ದು ಎಂದಿಗೂ ಶಾಶ್ವತವಾದದ್ದಲ್ಲ. ಅದಕ್ಕೆ ನಾಶವಿದ್ದೇ ಇರುತ್ತದೆ. ಆದ್ದರಿಂದ ಪರಮಾರ್ಥವಾದ ಬ್ರಹ್ಮದಿಂದ ದ್ವೈತ ಪ್ರಪಂಚವು ವಸ್ತುತಃ ಪರಿಣಮಿಸಿದ್ದೂ ಅಲ್ಲ, ಹುಟ್ಟಿದ್ದೂ ಅಲ್ಲ. ಮಾಯೆಯಿಂದ ದ್ವೈತ ಪ್ರಪಂಚದಂತೆ ತೋರುತ್ತದೆ. ಒಂದೇ ಹಗ್ಗವು ಭ್ರಾಂತಿಯಿಂದ ಹಾವಿನಂತೆ, ದೊಣ್ಣೆ ಯಂತೆ, ಮಾಲೆಯಂತೆ, ನೀರಿನ ಹರಿವಿನಂತೆ ತೋರಬಹುದು. ಹಾಗೆಯೇ ಅದ್ವೈತಬ್ರಹ್ಮವೇ ಜಗದ್ರೂಪದಲ್ಲಿ ಅಜ್ಞರಿಗೆ ತೋರುತ್ತದೆ ಎಂದು ವೇದಾಂತ ಸಿದ್ಧಾಂತವಿದೆ. ವೇದಾಂತವು ವಿವರ್ತವಾದವನ್ನೊಪ್ಪಿದೆ. ತನ್ನ ಸ್ವರೂಪವನ್ನು ಬದಲಿಸದೆ ಅನ್ಯರೂಪದಿಂದ ತೋರುವುದಕ್ಕೆ ವಿವರ್ತವೆಂದು ಹೆಸರು.

ರಜ್ಜುಸರ್ಪ ಇದಕ್ಕೆ ಉದಾಹರಣೆ. ಹಗ್ಗವು ತನ್ನ ಸ್ವರೂಪವನ್ನು ಬದಲಿಸದೆಯೇ ಸರ್ಪ ಸ್ವರೂಪದಲ್ಲಿ ತೋರುತ್ತದೆ. ಸಾಂಖ್ಯರು ಪರಿಣಾಮವಾದವನ್ನು ಅಂಗೀಕರಿಸುತ್ತಾರೆ. ಸ್ವಸ್ವರೂಪವನ್ನು ಬದಲಾಯಿಸಿ ರೂಪಾಂತರದಲ್ಲಿ ತೋರುವುದು ಪರಿಣಾಮ. ಹಾಲು ಮೊಸರಾಗುವುದು ಉದಾಹರಣೆ. ಇದು ಸತ್ಕಾರ್ಯವಾದ.

ತಾರ್ಕಿಕರು ಹೊಸ ವಸ್ತುವೇ ಕಾರಣದಿಂದ ಹುಟ್ಟುತ್ತದೆ ಎನ್ನುತ್ತಾರೆ. ಮಣ್ಣು ತನ್ನ ಸ್ವರೂಪವನ್ನು ಕಳೆದುಕೊಂಡ ಮೇಲೆ ಗಡಿಗೆ ಹುಟ್ಟುತ್ತದೆ.ಇದು ಅಸತ್ಕಾರ್ಯವಾದ ಅಥವಾ ಆರಂಭವಾದ.

ಪ್ರಕೃತ ಏನಾಯಿತೆಂದರೆ, ಅದ್ವೈತದಿಂದ ದ್ವೈತವು ಪರಮಾರ್ಥವಾಗಿ ಹುಟ್ಟಿಲ್ಲ. ಮಾಯೆಯಿಂದ ದ್ವೈತವಾಗಿದೆಯೆಂಬಂತೆ ತೋರುತ್ತದೆ. ಆದ್ದರಿಂದ ದ್ವೈತವು ಪರಮಾರ್ಥವಲ್ಲ. ಇದು ವಿವರ್ತವಾದ.

**ಅಜಾತಸ್ಯೈವ ಭಾವಸ್ಯ ಜಾತಿಮಿಚ್ಛಂತಿ ವಾದಿನಃ ।**
**ಅಜಾತೋಹ್ಯಮೃತೋ ಭಾವೋ ಮರ್ತ್ಯತಾಂ ಕಥಮೇಷ್ಯತಿ ॥೨೦॥**

**ಅಜಾತಸ್ಯೈವ** = ಜನ್ಮವನ್ನೇ ಪಡೆಯದ, **ಭಾವಸ್ಯ** = ಆತ್ಮತತ್ತ್ವಕ್ಕೆ **ವಾದಿನಃ** = ಕೆಲವು ವಾದಿಗಳು, **ಜಾತಿಂ** = ಜನ್ಮವನ್ನು, **ಇಚ್ಛಂತಿ** = ಅಂಗೀಕರಿಸುತ್ತಾರೆ. **ಅಜಾತಃ** = ಜನ್ಮವಿಲ್ಲದ, **ಅಮೃತಃ** = ಸಾವಿಲ್ಲದ, **ಭಾವಃ** = ಆತ್ಮತತ್ತ್ವವು, **ಮರ್ತ್ಯತಾಂ** = ಮರಣವನ್ನು, **ಕಥಂ** = ಹೇಗೆ, **ಏಷ್ಯತಿ** = ಪಡೆಯುವುದು?

ಉಪನಿಷತ್ತುಗಳಿಗೆ ವ್ಯಾಖ್ಯಾನವನ್ನು ಬರೆದ ಕೆಲವು ವೇದಾಂತಿಗಳು ಎಂದೂ ಹುಟ್ಟನ್ನೇ ಕಾಣದೆ ಶಾಶ್ವತವಾಗಿರುವ ಆತ್ಮನಿಗೆ ಅನಂತರ ಉತ್ಪತ್ತಿ ಇದೆಯೆಂದು ಒಪ್ಪುತ್ತಾರೆ. ಅವರು ಹೀಗೆ ಹೇಳುವುದುಂಟು –

೧. ಬ್ರಹ್ಮದಿಂದ ಜೀವವು ಹುಟ್ಟಿದೆ, ಜೀವವು ಬ್ರಹ್ಮದ ವಿಕಾರ. ಆತನು ಒಂದು ದೃಷ್ಟಿಯಲ್ಲಿ ಬ್ರಹ್ಮಕ್ಕೆ ಭಿನ್ನನೂ ಹೌದು. ಇನ್ನೊಂದು ದೃಷ್ಟಿಯಲ್ಲಿ ಅಭಿನ್ನನೂ ಹೌದು.

೨. ಜೀವನು ಉಪಾಧಿವಿಶಿಷ್ಟನಾದಾಗ ಬ್ರಹ್ಮಕ್ಕಿಂತ ಭಿನ್ನನಾಗಿರುತ್ತಾನೆ. ಮುಕ್ತಿಯಲ್ಲಿ ಉಪಾಧಿರಹಿತನಾದಾಗ ಬ್ರಹ್ಮದಲ್ಲಿ ಸೇರಿ ಹೋಗುತ್ತಾನೆ.

೩. ಇನ್ನು ಕೆಲವರು ಬೆಂಕಿಯಿಂದ ಬೆಂಕಿಕಿಡಿಗಳು ಹುಟ್ಟುವಂತೆ ಆತ್ಮತತ್ತ್ವದಿಂದ ಸಿಡಿದು ಜೀವರು ಹುಟ್ಟಿದ್ದಾರೆಂದು ಹೇಳುತ್ತಾರೆ.

ಈ ಹರಟೆಮಲ್ಲರ ಅಭಿಪ್ರಾಯದಂತೆ ಆಗಿದ್ದರೆ, ಅಮೃತವಾದ ಬ್ರಹ್ಮತತ್ತ್ವಕ್ಕೆ

ಮರಣವಿದೆಯೆಂದು ಹೇಳಬೇಕಾದೀತು. **'ಜಾತಸ್ಯ ಮರಣಂ ಧ್ರುವಂ'** ಎಂಬ ನುಡಿ ಸತ್ಯವಾದದ್ದು. ಅಜಾತಕ್ಕೆ ಮರಣವಿಲ್ಲವೆಂಬುದು ಸತ್ಯವೇ ಸರಿ. ಬ್ರಹ್ಮವು ಜಾತವಲ್ಲ.

**ನ ಭವತ್ಯಮೃತಂ ಮರ್ತ್ಯಂ ನ ಮರ್ತ್ಯಮಮೃತಂ ತಥಾ ।**
**ಪ್ರಕೃತೇರನ್ಯಥಾ ಭಾವೋ ನ ಕಥಂಚಿದ್ ಭವಿಷ್ಯತಿ ॥೨೧॥**

ಸಾವಿಲ್ಲದ ಅಮೃತವು ಸಾವಿರುವ ಮರ್ತ್ಯವಾಗದು. ಹಾಗೆಯೇ ಸಾವಿರುವ ಮರ್ತ್ಯವು ಸಾವಿಲ್ಲದ ಅಮೃತವಾಗದು. ಆದ್ದರಿಂದ ಪ್ರಕೃತಿಸ್ವಭಾವವು ತನ್ನ ಸ್ವರೂಪವನ್ನು ಕಳೆದುಕೊಂಡು ಇನ್ನೊಂದು ಬಗೆಯಾಗುವುದು ಎಂದಿಗೂ ಘಟಿಸುವುದಿಲ್ಲ.

ಬೆಂಕಿಯು ತನ್ನ ಉಷ್ಣತೆಯನ್ನು ತ್ಯಜಿಸಿ ಶೀತಳವಾಗಿರುವುದು ಎಂದಿಗೂ ಆಗತಕ್ಕದ್ದಲ್ಲ. ಸ್ಥಿರನಾದ ಆತ್ಮನಿಂದ ನಶ್ವರವಾದ ಜಗತ್ತು ಹುಟ್ಟುವುದಿಲ್ಲ.

**ಸ್ವಭಾವೇನಾಮೃತೋ ಯಸ್ಯ ಭಾವೋ ಗಚ್ಛತಿ ಮರ್ತ್ಯತಾಮ್ ।**
**ಕೃತಕೇನಾಮೃತಸ್ತಸ್ಯ ಕಥಂ ಸ್ಥಾಸ್ಯತಿ ನಿಶ್ಚಲಃ ॥೨೨॥**

ಬ್ರಹ್ಮವು ಜೀವನಾಗಿ ಹುಟ್ಟುವುದಕ್ಕೆ ಮೊದಲು ಕಾರಣರೂಪದಿಂದ ಅನಾದಿಯೂ ಅಮೃತವೂ ಆಗಿತ್ತು. ಅನಂತರ ಜೀವನಾಗಿ ಹುಟ್ಟಿದ ಮೇಲೆ ಕಾರ್ಯ ರೂಪದಿಂದ ಮರ್ತ್ಯವಾಗುವುದು ಅದಕ್ಕೆ ಬರಬಹುದು. ಹೀಗೆ ಅವಸ್ಥಾಭೇದ ಗಳಿಂದ ಮೊದಲು ಅಮೃತವಾದದ್ದು ಕಾರ್ಯಾವಸ್ಥೆಯಲ್ಲಿ ಮರ್ತ್ಯವಾದರೆ ದೋಷ ವೇನು? ಎಂದು ವಾದಿಯ ಪ್ರಶ್ನೆ. ಅದಕ್ಕೆ ಉತ್ತರವಾಗಿ ಈ ಶ್ಲೋಕ ಬಂದಿದೆ.

**ಯಸ್ಯ** = ಯಾವ ವಾದಿಯ ಮತದಲ್ಲಿ, **ಸ್ವಭಾವೇನ** = ಸ್ವಭಾವ ದಿಂದಲೇ, **ಅಮೃತಃ** = ಮರಣರಹಿತವಾದ, **ಭಾವಃ** = ಬ್ರಹ್ಮವು, **ಮರ್ತ್ಯತಾಂ** = ಕಾರ್ಯಾವಸ್ಥೆಯಲ್ಲಿ ಮರಣವನ್ನು , **ಗಚ್ಛತಿ** = ಹೊಂದುತ್ತದೆಯೋ, **ತಸ್ಯ** = ಆ ವಾದಿಯ ಪ್ರಕಾರ, **ಕೃತಕೇನ** = ಕೃತಕವಾದ ಮರ್ತ್ಯಭಾವದಿಂದ, ಆ ಆತ್ಮನು, **ಅಚಲಃ** = ಸ್ಥಿರನಾದ, **ಅಮೃತಃ** = (ಮುಕ್ತ)ನಾದ ಅಮರನಾಗಿ, **ಕಥಂ ಸ್ಥಾಸ್ಯತಿ** = ಹೇಗೆ ಆಗುವನು?

ಅಮೃತವಾದ ಬ್ರಹ್ಮವೇ ಜೀವರಾಗಿಯೂ ಜಗತ್ತಾಗಿಯೂ ಹುಟ್ಟುತ್ತದೆ ಯೆಂಬ ವಿಚಿತ್ರವಾದಿಗಳಿದ್ದಾರೆ. ಅವಸ್ಥಾಭೇದದಿಂದ ಅಮರ್ತ್ಯವೂ ಮರ್ತ್ಯ ವಾಗುತ್ತದೆ ಯೆಂದು ಅವರ ಅಭಿಪ್ರಾಯ.

ಇದು ಸರ್ವಥಾ ಅಸತ್ಯ. ಆಗ ಮುಕ್ತನಾದವನಿಗೂ ಮತ್ತೆ ಜನ್ಮವಿದೆಯೆಂದು ಒಪ್ಪಬೇಕಾಗುತ್ತದೆ. ಅಜಾತವಾದ ಅಮೃತಕ್ಕೂ ಜನ್ಮವಿದೆಯೆಂದು ಹೇಳುವ ನಿಮ್ಮ

ಮತದಲ್ಲಿ ಜಾತವಾದ ಜೀವವು ಅಮೃತವಾಗುವುದು ಹೇಗೆ? ಅದಕ್ಕೇಕೆ ಮತ್ತೆ ಜನ್ಮವಿರುವುದಿಲ್ಲ? ಶಾಶ್ವತವಾದ ಮೋಕ್ಷವೇ ಇಲ್ಲವೆಂಬ ಪ್ರಸಂಗ ಒದಗುವುದರಿಂದ ಈ ಮತವು ಸರ್ವಥಾ ಖಂಡನೀಯವಾದದ್ದು.

**ಭೂತತೋಽಭೂತತೋ ವಾಪಿ ಸೃಜ್ಯಮಾನೇ ಸಮಾ ಶ್ರುತಿಃ ।**
**ನಿಶ್ಚಿತಂ ಯುಕ್ತಿಯುಕ್ತಂ ಚ ಯತ್ತದ್ ಭವತಿ ನೇತರತ್ ॥೨೨॥**

**ಭೂತತಃ** = ಪರಮಾರ್ಥವಾಗಿಯಾಗಲಿ, **ವಾಽಪಿ** = ಅಥವಾ, **ಅಭೂತತಃ** = ಅಪರಮಾರ್ಥವಾಗಿ ಮಾಯೆಯಿಂದಾಗಲಿ, **ಸೃಜ್ಯಮಾನೇ** = ಆಕಾಶ ವಾಯು ಮುಂತಾದವು ಸೃಷ್ಟಿಸಲ್ಪಡುವುದಾದರೂ, **ಶ್ರುತಿಃ** = ಶ್ರುತಿಯು, **ಸಮಾ** = ಸಮಾನವಾಗಿ ಹೊಂದಿಕೊಳ್ಳುತ್ತದೆ. ಆದರೆ **ಯತ್** = ಯಾವುದು, **ನಿಶ್ಚಿತಂ** = ಶ್ರುತಿಯಿಂದ ನಿರ್ಣೀತವಾಗಿದೆಯೋ ಮತ್ತು **ಯುಕ್ತಿಯುಕ್ತಂ ಚ** = ಯುಕ್ತಿಯುಕ್ತವಾಗಿದೆಯೋ, **ತತ್** = ಅದೇ, **ಭವತಿ** = ಶ್ರುತಿಯ ಅರ್ಥವಾಗಿರುತ್ತದೆ. **ಇತರತ್** = ಬೇರೆಯದು, **ನ** = ಅಲ್ಲ.

ಜಾತಬ್ರಹ್ಮವಾದಿಯ ಅಭಿಪ್ರಾಯ ಹೀಗೆ – ''**ಆತ್ಮನ ಆಕಾಶಃ ಸಂಭೂತ, ತತ್ತೇಜೋಽಸೃಜತ** ಇತ್ಯಾದಿ ಶ್ರುತಿಗಳು ಸ್ಪಷ್ಟವಾಗಿ ಸೃಷ್ಟಿಯಾಯಿತು ಎಂದು ಹೇಳುತ್ತವೆ, ಕಲ್ಪಿತವಾಯಿತು ಎಂದು ಹೇಳುವುದಿಲ್ಲ. ಆದ್ದರಿಂದ ಜಗತ್ತು, ಜೀವಗಳು ಮಾಯಾಕಲ್ಪಿತ ಎನ್ನುವುದು ಯುಕ್ತವಲ್ಲ'' ಎಂದು. ಅದಕ್ಕೆ ಉತ್ತರ ಹೀಗೆ ''ಹಾಗೆ ಹೇಳಲಾಗುವುದಿಲ್ಲ. ಸೃಜತಿ, ಸಂಭವತಿ, ಉತ್ಪದ್ಯತೇ–ಮುಂತಾದ ಶಬ್ದಗಳು ಉತ್ಪತ್ತಿ, ಪರಿಣಾಮ, ವಿವರ್ತ ಎಂಬ ಮೂರು ಅರ್ಥಗಳಲ್ಲಿಯೂ ಪ್ರಯುಕ್ತವಾಗುತ್ತವೆ''. ಉದಾ.:

ಉತ್ಪತ್ತಿ : **ಅತ್ಯಾಹಾರಃ ರೋಗಂ ಸೃಜತಿ, ಚೈತ್ರಸ್ಯ ದ್ವೌಪುತ್ರೌ ಸಂಜಾತೌ**

ಪರಿಣಾಮ : **ಮೃದಾ ಘಟಃ ಸಂಭವತಿ , ಸುವರ್ಣೇನ ಅಂಗುಲೀಯಕ–ಮುತ್ಪದ್ಯತೇ**

ವಿವರ್ತ : **ಐಂದ್ರಜಾಲಿಕೇನ ನಾಲಿಕೇರಾತ್ ಆಮ್ರಫಲಂ ಸೃಷ್ಟಂ, ಈಶ್ವರಸ್ಯ ಮಾಯಯಾ ಜಗದಿದಮುತ್ಪನ್ನಂ, ಮಾಯಯಾ ದೃಷ್ಟಮ್ ॥**
ಆದ್ದರಿಂದ ಸಂಭೂತ ಮುಂತಾದ ಶಬ್ದಗಳು ಮಾಯಾಕಲ್ಪಿತ ಎಂಬ ಅರ್ಥದಲ್ಲಿ ಪ್ರಯುಕ್ತವಾಗಬಹುದು. ಜಾತಬ್ರಹ್ಮವಾದವು ನಿರಾಧಾರವಾದದ್ದು.

**ನೇಹ ನಾನೇತಿ ಚಾಮ್ನಾಯಾದಿಂದ್ರೋ ಮಾಯಾಭಿರಿತ್ಯಪಿ ।**
**ಅಜಾಯಮಾನೋ ಬಹುಧಾ ಮಾಯಯಾ ಜಾಯತೇ ತು ಸಃ ॥೨೪॥**

**ನೇಹ ನಾನಾಸ್ತಿ ಕಿಂಚನ** (ಬೃಹ. ೪-೪-೧೯), **ಇಂದ್ರೋ ಮಾಯಾಭಿಃ ಪುರುರೂಪ ಈಯತೇ** (ಬೃಹ. ೨-೫-೧೯), **ಅಜಾಯಮಾನೋ ಬಹುಧಾ ವಿಜಾಯತೇ** (ತೈ. ಆ. ೩-೧೩) ಇತ್ಯಾದಿ ಶ್ರುತಿಗಳು ದ್ವೈತವನ್ನು ನಿಷೇಧಿಸುವುದರಿಂದ 'ಸಂಭೂತಃ, ಅಸೃಜತ' ಮುಂತಾದ ಶಬ್ದಗಳಿಗೆ ಅದ್ವೈತಪರವಾಗಿ ಕಲ್ಪಿತ ಮುಂತಾದ ಅರ್ಥವನ್ನೇ ಹೇಳಬೇಕು. ಮೇಲ್ಕಂಡ ಮೂರು ಶ್ರುತಿವಾಕ್ಯಗಳಿಗೆ ಕ್ರಮವಾಗಿ ಅರ್ಥ.

೧. **ಇಹ** = ಈ ಬ್ರಹ್ಮದಲ್ಲಿ, ನಾನಾ ಭೇದ ಎಂಬುದು, **ಕಿಂಚನ** = ಲವಮಾತ್ರವೂ, ನಾಸ್ತಿ= ಇಲ್ಲ.

೨. **ಇಂದ್ರಃ** = ಪರಮೇಶ್ವರನು, **ಮಾಯಾಭಿಃ** = ಅವಿದ್ಯೆಗಳಿಂದ, **ಪುರುರೂಪಃ** = ಬಹುರೂಪನಾಗಿ, ಈಯತೇ = ತಿಳಿಯಲ್ಪಡುತ್ತಾನೆ.

೩. **ಅಜಾಯಮಾನಃ** = ಪರಮೇಶ್ವರನು ತಾನು ಹುಟ್ಟದೇ ಇದ್ದರೂ, **ಬಹುಧಾ** = ಬಹುಪ್ರಕಾರವಾಗಿ, **ವಿಜಾಯತೇ** = ಹುಟ್ಟುತ್ತಾನೆ. ಹುಟ್ಟದೇ ಇದ್ದರೂ ಎಂಬುದು ವಿರುದ್ಧವಾದ್ದರಿಂದ **"ಮಾಯಯಾ ಜಾಯತೇ ತು ಸಃ"** ಆತನು ಮಾಯೆಯಿಂದ ಹುಟ್ಟುತ್ತಾನೆ-ಹುಟ್ಟಿದಂತೆ ಕಾಣಿಸುತ್ತಾನೆ ಎಂದರ್ಥ.

**ಸಂಭೂತೇರಪವಾದಾಚ್ಚ ಸಂಭವಃ ಪ್ರತಿಷಿಧ್ಯತೇ ।**
**ಕೋನ್ವೇನಂ ಜನಯೇದಿತಿ ಕಾರಣಂ ಪ್ರತಿಷಿಧ್ಯತೇ ॥೨೫॥**

**ಸಂಭೂತೇಃ** = ಉತ್ಪನ್ನನಾದ ಹಿರಣ್ಯಗರ್ಭನ ಉಪಾಸನೆಯನ್ನು, **ಅಪವಾದಾತ್** = ನಿಷೇಧಿಸಿರುವುದರಿಂದ, **ಸಂಭವಃ** = ಯಾವುದರ ಉತ್ಪತ್ತಿಯೂ, **ಪ್ರತಿಷಿಧ್ಯತೇ** = ನಿಷಿದ್ಧವೆಂದು ಗೊತ್ತಾಗುತ್ತದೆ. **ಕೋನ್ವೇನಂ ಜನಯೇದಿತಿ** = ಇವನನ್ನು ಉತ್ಪಾದಿಸತಕ್ಕವರಾದರೂ ಯಾರಿದ್ದಾರು? ಆದ್ದರಿಂದ ಉತ್ಪತ್ತಿಗೆ **ಕಾರಣಂ** = ಕಾರಣನಾದವನೂ **ಪ್ರತಿಷಿಧ್ಯತೇ** = ಇಲ್ಲವೆಂದು ನಿಷಿದ್ಧವಾಗುತ್ತದೆ.

ಈಶಾವಾಸ್ಯದ ಹನ್ನೆರಡನೆಯ ಮಂತ್ರ ಹೀಗಿದೆ -

**ಅಂಧಂ ತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥೨೬॥**

ಅರ್ಥ :- **ಅಸಂಭೂತಿಂ** = ಅವ್ಯಾಕೃತವಾದ ಮಾಯೆಯನ್ನು ಉಪಾಸನೆ ಮಾಡತಕ್ಕವರು ಅಂಧತಮಸ್ಸೆಂಬ ಜನನಮರಣರೂಪವಾದ ಸಂಸಾರವನ್ನು ಪಡೆಯುತ್ತಾರೆ. ಅದಕ್ಕಿಂತಲೂ ಅಧಿಕವಾದ ಅಂಧತಮಸ್ಸನ್ನು ಯಾರು ಸಂಭೂತಿಯಲ್ಲಿ ಆಸಕ್ತರಾಗಿದ್ದಾರೋ ಅವರು ಪಡೆಯುತ್ತಾರೆ.

ಇಲ್ಲಿ 'ಸಂಭೂತಿ' ಎಂದರೆ ಮಾಯೆಯಿಂದ ವ್ಯಾಕೃತನಾದ ಹಿರಣ್ಯಗರ್ಭನೆಂದು ಅರ್ಥ. ಅವನು ಮಾಯೆಯಿಂದ ಸಂಭವಿಸಿದವನು. ಅವನ ಉಪಾಸನೆಯನ್ನು ಮಾಡಿದರೆ ಸಂಸಾರವು ತಪ್ಪುವುದಿಲ್ಲವಾದ್ದರಿಂದ ಅವನ ಉಪಾಸನೆಯನ್ನು ನಿಷೇಧಿಸಿದಂತಾಯಿತು. ಅದಕ್ಕೆ ನಿಮಿತ್ತವೇನು? ಅವನು ಮಾಯಾಸಂಭೂತನಾಗಿರುವುದೇ ನಿಮಿತ್ತ. ಮಾಯಾಸಂಭವವೇ ನಿಷಿದ್ಧವಾದಾಗ ವಾಸ್ತವವಾದ ಸಂಭವವು ನಿಷಿದ್ಧವೆಂಬುದು ಸ್ವತಃ ಸಿದ್ಧವಾದದ್ದು. ಸಂಭವವು ನಿಷಿದ್ಧವೆಂದರೆ ಸಂಭವವೇ ಇಲ್ಲವೆಂದು ತಾತ್ಪರ್ಯ. ಸಗುಣಮೂರ್ತಿಗಳ ಉಪಾಸನೆಯಿಂದ ಮೋಕ್ಷ ದೊರೆಯುವುದಿಲ್ಲ ಎಂದು ಉಪನಿಷತ್ತಿನ ಆಶಯ.

**ಕೋನ್ವೇನಂ ಜನಯೇತ್** ಎಂಬ ಶ್ರುತಿವಾಕ್ಯದಿಂದ ಹಿರಣ್ಯಗರ್ಭನನ್ನೂ ಜೀವರನ್ನೂ ಜಗತ್ತನ್ನೂ ಉತ್ಪಾದಿಸುವ ಕಾರಣಪುರುಷನೂ (ಕರ್ತನೂ) ಇಲ್ಲವೆಂದು ಸಿದ್ಧವಾಗುತ್ತದೆ. **''ಜಾತ ಏವ ನ ಜಾಯತೇ । ಕೋನ್ವೇನಂ ಜನಯೇತ್ ಪುನಃ''** (ಬೃಹ.೩–೯–೨೮).

**ಸ ಏಷ ನೇತಿ ನೇತೀತಿ ವ್ಯಾಖ್ಯಾತಂ ನಿಹ್ನುತೇ ಯತಃ ।**
**ಸರ್ವಮಗ್ರಾಹ್ಯಭಾವೇನ ಹೇತುನಾಽಜಂ ಪ್ರಕಾಶತೇ ॥೨೬॥**

**ವ್ಯಾಖ್ಯಾತಂ** = ಆತ್ಮನು ಮೂರ್ತ, ಅಮೂರ್ತ ಎಂದು ಎರಡು ವಿಧ. ಈ ಪ್ರಕಾರವಾಗಿ ಶ್ರುತಿಯು ಆತ್ಮನನ್ನು ನಾನಾಪ್ರಕಾರವಾಗಿ ವರ್ಣಿಸಿ, ಆಮೇಲೆ ತಾನೇ ವರ್ಣಿಸಿದ **ಸರ್ವಂ** = ಸಮಸ್ತ ಆತ್ಮಸ್ವರೂಪವನ್ನು, **ಸ ಏಷಃ** = ಆತನು ಈ ಸ್ವರೂಪದವನು, **ನೇತಿ ನೇತಿ** = ಅಲ್ಲ, ಸರ್ವಥಾ ಅಲ್ಲ, **ಇತಿ** = ಹೀಗೆ, **ಅಗ್ರಾಹ್ಯಭಾವೇನ** = ಮನುಷ್ಯಬುದ್ಧಿಗೆ ಆತ್ಮಸ್ವರೂಪವು ನಿಲುಕದು ಎಂಬ **ಹೇತುನಾ** = ಕಾರಣದಿಂದ, **ನಿಹ್ನುತೇ ಯತಃ** = ಯಾವ ಕಾರಣದಿಂದ ನಿಷೇಧಿಸುತ್ತದೆಯೋ (**ಅತಃ** = ಆ ಕಾರಣದಿಂದ) **ಅಜಂ** = ಜನ್ಮರಹಿತವಾದ ಪರಬ್ರಹ್ಮವು, **ಪ್ರಕಾಶತೇ** = ಸ್ವಯಂಪ್ರಕಾಶವಾಗಿ ಬೆಳಗುತ್ತದೆ.

ಆತ್ಮನು ಅಜನೂ ಅದ್ವಯನೂ ಆಗಿದ್ದಾನೆಂದು ತಿಳಿಸಿಕೊಡುವುದೇ ಶ್ರುತಿಯ ಉದ್ದೇಶವಾಗಿದೆ. ಆತ್ಮನು ವಾಙ್ಮನಸಗಳಿಗೆ ಅಗೋಚರನೆಂದಿಷ್ಟೇ ಹೇಳಿದರೆ ಮನುಷ್ಯಬುದ್ಧಿಗೆ ಸಾಕಾಗುವುದಿಲ್ಲ. ಆದ್ದರಿಂದ ಮನುಷ್ಯಬುದ್ಧಿಗೆ ನಿಲುಕುವಷ್ಟನ್ನು ಬ್ರಹ್ಮದಲ್ಲಿ ಆರೋಪಿಸಿ, ಅನಂತರ ಅದೆಲ್ಲವೂ 'ನೇತಿ ನೇತಿ' ಎಂದು ಅಲ್ಲಗಳೆಯುವುದು ಅದ್ವಯಾತ್ಮವನ್ನು ಬೋಧಿಸುವ ಒಂದು ಉಪಾಯ. ಪಾತ್ರೆಯನ್ನು ಸ್ವಚ್ಛಗೊಳಿಸುವುದಕ್ಕಾಗಿ ಅದರ ಮೇಲೆ ಬೂದಿ, ಮಣ್ಣು ಶೀಗೆ ಪುಡಿಗಳನ್ನು ಎರಚಿ ಉಜ್ಜಿ ಆಮೇಲೆ ಎಲ್ಲವನ್ನೂ ನೀರಿನಿಂದ ತೊಳೆದುಬಿಟ್ಟರೆ ಪಾತ್ರೆ ಸ್ವಚ್ಛವಾಗಿ

ಪ್ರಕಾಶಿಸುತ್ತದೆ! ಶ್ರುತಿಯು ಸ್ವಯಂಪ್ರಕಾಶನಾದ ಶುದ್ಧಾತ್ಮನ ಸ್ವರೂಪವನ್ನು ತಿಳಿಸಿ ಕೊಡಲು ಆಶ್ರಯಿಸಿದ ಉಪಾಯ ಇದು. ಈ ಕಾರಣದಿಂದ ಶ್ರುತಿಯು ತಾನೇ ಹೇಳಿದ್ದನ್ನು ತಾನೇ ಅಲ್ಲಗಳೆಯುತ್ತದೆ.

ನಿರ್ವಿಶೇಷವಾದ ಅದ್ವಯಾತ್ಮವೇ ಪರಮಾರ್ಥವೆಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಸ್ಫುಟವಾಗಿ ತಿಳಿಸಲಾಗಿದೆ. ಶ್ರುತಿಯು ಇದು ಆತ್ಮನ ಸ್ವರೂಪವೆಂದು ಮೊದಲು ಹೇಳಿ ಅನಂತರ ನ–ನ ಎಂದು ಎರಡು ನಕಾರ ಗಳಿಂದ ತಾನು ವ್ಯಾಖ್ಯಾನಿಸಿದ್ದನ್ನೇ ಅನೇಕ ಸಲ ನಿಷೇಧಿಸುತ್ತ ಹೋಗಿದೆ. ನಿದರ್ಶನಕ್ಕಾಗಿ ಕೆಲವನ್ನಿಲ್ಲಿ ಬರೆಯಬಹುದು.

೧. **ದ್ವೇವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವ ಅಮೂರ್ತಂ ಚ** (ಬೃಹ.೨–೩–೧)

ಮೂರ್ತ, ಅಮೂರ್ತಗಳೆಂದು ಬ್ರಹ್ಮದ ರೂಪಗಳು ಎರಡು ಎಂದು ಹೇಳಿ ವಿಸ್ತಾರವಾಗಿ ಅವುಗಳನ್ನು ವಿವರಿಸಲಾಗಿದೆ. ಅನಂತರ – **ಅಥಾತ ಆದೇಶೋ ನೇತಿ ನೇತಿ** (ಬೃಹ. ೨–೩–೬) ಇದು ಬ್ರಹ್ಮದ ಸ್ವರೂಪ ಅಲ್ಲ– ಅಲ್ಲ ಎಂದು ನಿಷೇಧಿಸಿದೆ. **ಆದೇಶ** = ಸ್ವರೂಪನಿರ್ದೇಶ.

೨. **ಅಸ್ಥೂಲಮನಣು ಅಹ್ರಸ್ವಮದೀರ್ಘಮ್** (ಬೃಹ. ೩–೮–೮)

ಅಕ್ಷರಬ್ರಹ್ಮವು ಸ್ಥೂಲವಾದ್ದಲ್ಲ, ಅಣುವೂ ಅಲ್ಲ. ಹ್ರಸ್ವವಲ್ಲ, ದೀರ್ಘವಲ್ಲ ಎಂದು ವಿಶೇಷನಿಷೇಧರೂಪದಲ್ಲಿಯೇ ಅಕ್ಷರಬ್ರಹ್ಮದ ವರ್ಣನೆಯನ್ನು ಮಾಡಲಾಗಿದೆ. ಅನಂತರ **ಸ ಏಷ ನೇತಿ ನೇತ್ಯಾತ್ಮಾ** (೩–೯–೨೬) ಎಂದು ನಿರ್ವಿಶೇಷ ಬ್ರಹ್ಮವನ್ನೇ **'ನ–ನ'** ಎಂದು ಹೇಳಿದೆ.

೩. ಮುಂದೆ ಜನಕ ಯಾಜ್ಞವಲ್ಕ್ಯರ ಸಂವಾದದಲ್ಲಿ ಬ್ರಹ್ಮವು ವಿಶ್ವ,ತೈಜಸ, ಪ್ರಾಜ್ಞಸ್ವರೂಪವೆಂದು ತಿಳಿಸಿ **'ಸ ಏಷ ನೇತಿ ನೇತ್ಯಾತ್ಮಾ'** (ಬೃಹ. ೪–೨–೪) ಎಂದು ಎರಡು **ನ**ಶಬ್ದಗಳಿಂದ ಆ ಸ್ವರೂಪವನ್ನೂ ಅಲ್ಲಗಳೆದು ನಿರ್ವಿಶೇಷ ಬ್ರಹ್ಮವನ್ನೇ ಬೋಧಿಸಿದೆ.

೪. ಆತ್ಮಜ್ಞಾನದಿಂದ ಮೋಕ್ಷವಾಗುತ್ತದೆಯೆಂದು ಇನ್ನೊಂದು ಕಡೆಯಲ್ಲಿ ಹೇಳಿ ಕಾರ್ಯಕಾರಣಭಾವದಿಂದ ಆತ್ಮನ ಸ್ವರೂಪವನ್ನು ತಿಳಿಸಿ, ಅನಂತರ **'ಸ ಏಷ ನೇತಿ ನೇತ್ಯಾತ್ಮಾ'** (೪–೪–೨೨) ಎಂದು, ಸ್ವತಃ ಹೇಳಿದ ಆತ್ಮಸ್ವರೂಪವನ್ನೇ **ನ–ನ** ಎಂದು ನಿಷೇಧಿಸಿದೆ.

ಹೀಗೆ ವ್ಯಾಖ್ಯಾತವಾದ್ದನ್ನೇ ನಿಷೇಧಿಸಲು ಕಾರಣವೇನು? **'ಅಗ್ರಾಹ್ಯಭಾವೇನ ಹೇತುನಾ'** ಎಂದು ಕಾರಿಕೆಯಲ್ಲಿಯೇ ಸಮಾಧಾನವಿದೆ.

ಆತ್ಮವು ವರ್ಣನೆಗೆ ನಿಲುಕತಕ್ಕದ್ದಲ್ಲ. **'ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ'**. ಮಾತಿಗೂ ಮನಸ್ಸಿಗೂ ಸಹ ಗೋಚರವಾಗ ತಕ್ಕುದಲ್ಲವೆಂದು ತಿಳಿಸುವುದಕ್ಕಾಗಿ ಮತ್ತೆ ಮತ್ತೆ ನಿಷೇಧಿಸಲಾಗಿದೆ. ಬ್ರಹ್ಮದ ವಿಷಯದಲ್ಲಿ ಮೌನವೇ ಉಪದೇಶ. ತೀವ್ರವಾದ ಸಾಧನೆಯಿಂದ ಸ್ವತಃ ತಿಳಿಯಬೇಕಾದದ್ದು. ಅದು **ಸ್ವಯಂಪ್ರಕಾಶ**.

**ಸತೋ ಹಿ ಮಾಯಯಾ ಜನ್ಮ ಯುಜ್ಯತೇ ನ ತು ತತ್ತ್ವತಃ ।**
**ತತ್ತ್ವತೋ ಜಾಯತೇ ಯಸ್ಯ ಜಾತಂ ತಸ್ಯ ಹಿ ಜಾಯತೇ ॥**

**ಸತಃ** = ಎಂಬುದು ಪಂಚಮ್ಯಂತವೂ ಆಗಬಹುದು. ಷಷ್ಠ್ಯಂತವೂ ಆಗಬಹುದು. ಪಂಚಮ್ಯಂತವಾದಾಗ – **ಸತಃ** = ವಿದ್ಯಮಾನವಾದ ಆತ್ಮತತ್ತ್ವ ದಿಂದ, **ಜನ್ಮ** = ಜಗತ್ತಿನ ಜನ್ಮವು, **ಮಾಯಯಾ** = ಮಾಯೆಯಿಂದ ಆಗಿದೆ ಯೆಂಬುದು, **ಯುಜ್ಯತೇ** = ಯುಕ್ತವಾಗಿದೆ. **ನ ತು ತತ್ತ್ವತಃ** = ವಾಸ್ತವವಾಗಿ ಉತ್ಪತ್ತಿಯಾಗಿದೆಯೆಂಬದು ಯುಕ್ತವಲ್ಲ.

ಷಷ್ಠ್ಯಂತವಾದಾಗ – **ಸತಃ** = ಅದ್ವಯಾತ್ಮನಿಗೆ, **ಜನ್ಮ** = ಜಗದ್ರೂಪದಲ್ಲಿ ಜನ್ಮವು, **ಮಾಯಯಾ** = ಆತನ ಮಾಯೆಯಿಂದ ಆಗಿದೆಯೆಂದರೆ, **ಯುಜ್ಯತೇ** = ಯುಕ್ತವಾಗುತ್ತದೆ. **ನ ತು ತತ್ತ್ವತಃ** = ವಾಸ್ತವವಾಗಿ ಅದ್ವಯಾತ್ಮನೇ ಜಗತ್ತಾಗಿ ಹುಟ್ಟಿದ್ದಾನೆ ಎನ್ನುವುದು ಯುಕ್ತವಲ್ಲ.

**ಯಸ್ಯ** = ಯಾರ ಮತದಲ್ಲಿ, **ತತ್ತ್ವತೋ ಜಾಯತೇ** = ವಾಸ್ತವ ವಾಗಿಯೇ ಜಗತ್ತು ಹುಟ್ಟುತ್ತದೆಯೋ, **ತಸ್ಯ** = ಆತನ ಮತದಲ್ಲಿ, **ಜಾತಂ** = ಹುಟ್ಟಿರುವುದೇ, **ಜಾಯತೇ** = ಮತ್ತೆ ಹುಟ್ಟಬೇಕಾಗುತ್ತದೆ.

ಇದುವರೆಗೆ ಹೇಳಿದ ಪ್ರಮಾಣಗಳಿಂದಲೂ ಯುಕ್ತಿಗಳಿಂದಲೂ ಅದ್ವಯವೂ ಅಜವೂ ಆದ ಆತ್ಮ ಒಂದೇ ಸತ್ಯವಾಗಿ ಇದೆ. ಇನ್ನೊಂದು ವಸ್ತುವೇ ಇಲ್ಲ ಎಂದು ನಿರ್ಣೀತವಾಯಿತು. ಅಂತಹ ಆತ್ಮನು ಮಾನವ ಬುದ್ಧಿಗ್ರಾಹ್ಯನಲ್ಲ ವೆಂದು ಹಿಂದಿನ ಕಾರಿಕೆಯಲ್ಲಿ ಹೇಳಲಾಯಿತು. ಹಾಗಾದರೆ ಅಂತಹ ಆತ್ಮ ತತ್ತ್ವವು ಅಸತ್ ಎಂದೇ ಏಕೆ ಹೇಳಬಾರದು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಈ ಜಗತ್ತು ಕಣ್ಣೆದುರಿಗೆ ಇದೆಯಷ್ಟೆ. ಇದಕ್ಕೆ ಉತ್ಪತ್ತಿ ಯಾರಿಂದ? ಈ ಜಗತ್ತೇ ಇದಕ್ಕೆ ಕಾರಣವಾದ ವಸ್ತುವಿರಬೇಕೆಂಬುದನ್ನು ಸೂಚಿಸುತ್ತದೆ. ಅದೇ ನಾವು ಹೇಳಿದ ಅದ್ವಯಾತ್ಮ. ಅವನೇ ಜಗತ್ತಾಗಿ ಹುಟ್ಟಲಿಲ್ಲ. ಮಾಯೆಯಿಂದ ಜಗತ್ತನ್ನು ನಿರ್ಮಿಸಿದ್ದಾನೆ. ಮಾಯಾವಿಯು ತನ್ನ ಮಾಯೆಯಿಂದ ಆನೆ ಮುಂತಾದ್ದನ್ನು ಕಾಣಿಸುವಂತೆ ಆತ್ಮನು ಈ ಜಗತ್ತನ್ನು ಕಾಣಿಸಿದ್ದಾನೆ. ಹಾಗಾದರೆ ಆತ್ಮನ ಜನ್ಮ

ಯಾರಿಂದ? ಆತ್ಮನಿಗೆ ಜನ್ಮವೇ ಇಲ್ಲ. ಅವನು ಅಜ. ಆತ್ಮನು ಜನ್ಮರಹಿತನೆಂದೂ ಶಾಶ್ವತನೆಂದೂ ಶ್ರುತಿಗಳು ಮತ್ತೆ ಮತ್ತೆ ಸಾರಿ ಹೇಳಿವೆ. ಜಗತ್ತಿಗೆ ಜನ್ಮವಿರುವಂತೆ ಆತ್ಮನಿಗೂ ಜನ್ಮವಿರಬೇಕೆಂದು ಯಾರಾದರೂ ವಾದಿಸುವುದಾದರೆ, ಅವರ ಮತದಲ್ಲಿ ಉತ್ತರಕ್ಕೆ ನಿಲುಗಡೆಯೇ ಇಲ್ಲದೆ ಅವ್ಯವಸ್ಥೆಯಾದೀತು. ಆತ್ಮನಿಗೆ ಯಾರಿಂದ ಜನ್ಮ? ಅವನಿಗೆ ಯಾರಿಂದ? ಅವನಿಗೆ ಯಾರಿಂದ? ಈ ಪ್ರಶ್ನೆಗಳು ಹುಟ್ಟಿ ಅನವಸ್ಥೆಯಾಗುತ್ತದೆ. ಆತ್ಮನೇ ಜಗತ್ತಾಗಿ ಹುಟ್ಟಿದ್ದಾನೆಂಬುದು ಸರ್ವಥಾ ಅಯುಕ್ತವಾದ ಹೇಳಿಕೆ. ಯಾವುದು ಹುಟ್ಟುತ್ತದೆಯೋ ಅದಕ್ಕೆ ನಾಶವಿರಲೇ ಬೇಕೆಂಬುದು ನಿಯಮ. ಆಗ ಆತ್ಮನಿಗೆ ಸಾವನ್ನು ಹೇಳಬೇಕಾದೀತು. ಆತ್ಮನು ಯಾರಿಂದ ಹೇಗೆ ಹುಟ್ಟಿದ? ಆತ್ಮನ ಜನಕನು ಹೇಗೆ ಹುಟ್ಟಿದ? ಇತ್ಯಾದಿ ಪ್ರಶ್ನೆ ಗಳಿಗೆ ಈಗಲೂ ನಿಲುಗಡೆಯಿಲ್ಲದೆ ಹೋಗುತ್ತದೆ. ಆದ್ದರಿಂದ ಈ ಅಸಂಗತ ಮತಗಳೆಲ್ಲವೂ ಅಪ್ರಾಮಾಣಿಕವಾದವು. ನಾವು ಪ್ರತಿಪಾದಿಸಿದ ಅದ್ವಯಾತ್ಮ ವಾದವೇ ಯುಕ್ತವೂ ಸತ್ಯವೂ ಆದದ್ದು.

**ಅಸತೋ ಮಾಯಯಾ ಜನ್ಮ ತತ್ತ್ವತೋ ನೈವ ಯುಜ್ಯತೇ ।**
**ವಂಧ್ಯಾಪುತ್ರೋ ನ ತತ್ತ್ವೇನ ಮಾಯಯಾ ವಾಪಿ ಜಾಯತೇ ॥೨೮॥**

**ಅಸತಃ** = ಅಸತ್ತಿನಿಂದ (ಅಭಾವದಿಂದ) **ಜನ್ಮ** = ಜಗತ್ತಿನ ಉತ್ಪತ್ತಿಯು, **ಮಾಯಯಾ** = ಮಾಯೆಯಿಂದಾಗಲಿ, **ತತ್ತ್ವತಃ** = ಸತ್ಯವಾಗಿಯಾಗಲಿ, ನ **ಯುಜ್ಯತೇ** = ಯುಕ್ತವಲ್ಲ. **ವಂಧ್ಯಾಪುತ್ರಃ** = ಬಂಜೆಯ ಮಗನು, **ತತ್ತ್ವೇನ** = ವಾಸ್ತವವಾಗಿಯಾಗಲಿ, **ಮಾಯಯಾ ವಾಪಿ** = ಮಾಯೆಯಿಂದಾಗಲಿ, **ನ ಜಾಯತೇ** = ಹುಟ್ಟುವುದಿಲ್ಲ.

ಅಸದ್ವಾದಿಗಳಾದ ಬೌದ್ಧರ ಮತವನ್ನಿಲ್ಲಿ ದೂಷಿಸಿದೆ. ಅವರು ಆತ್ಮ ನನ್ನೊಪ್ಪುವುದಿಲ್ಲ. ಅಸತ್ ಎನಿಸಿದ ಅಭಾವಕ್ಕೆ ಶೂನ್ಯವೆಂದೂ ಹೆಸರಿದೆ. ಇಂತಹ ಅಸತ್ತಿನಿಂದ ಜಗತ್ತು ಹುಟ್ಟಿದೆ ಎನ್ನುತ್ತಾರೆ. ಇದು ಅಸಂಗತ. ಏನೂ ಇಲ್ಲದ ಶೂನ್ಯದಿಂದ ಒಂದು ವಸ್ತು ಹುಟ್ಟುತ್ತದೆ ಎನ್ನುವುದು ಅರ್ಥವಿಲ್ಲದ ನುಡಿ. ಅದು ಸತ್ಯವಾಗಿಯೂ ಹುಟ್ಟುವುದಿಲ್ಲ, ಮಾಯೆಯಿಂದಲೂ ಹುಟ್ಟಲಾರದು. ಬಂಜೆಗೆ ಮಗನು ಹುಟ್ಟಿದನೆಂಬ ಮಾತಿನಂತೆ ಈ ಮಾತು. ಮಾಯೆಯಿಂದಲಾಗಲಿ, ವಾಸ್ತವದಿಂದಾಗಲಿ ಬಂಜೆಗೆ ಮಗನು ಹುಟ್ಟುವುದಿಲ್ಲ. ಹುಟ್ಟಿದರೆ ಅವಳು ಬಂಜೆಯೇ ಅಲ್ಲ!

ಶೂನ್ಯದಿಂದ ಜಗತ್ತು ಹುಟ್ಟುತ್ತದೆಯೆಂಬ ಈ ಅಸದ್ವಾದವು ಅಸಂಗತ ವಾದದ್ದು. ಆಧುನಿಕ ವಿಜ್ಞಾನಶಾಸ್ತ್ರಕ್ಕೂ ವಿರುದ್ಧವಾದದ್ದು.

ದ್ರವ್ಯವೋ ಗುಣವೋ ಕ್ರಿಯೆಯೋ ಘಟತ್ವಾದಿ ಜಾತಿಯೋ ಇರುವಂತೆ ಒಂದು ವಸ್ತುರೂಪವಾದ ಪದಾರ್ಥಕ್ಕೆ ಸತತ್ತ್ವವೆಂದು ಹೆಸರು. ಅದೇ ಸತ್. ಹೀಗೆ ಯಾವ ವಸ್ತುರೂಪವೂ ಅಲ್ಲದ್ದು ಅತತ್ತ್ವವೆನ್ನಿಸುತ್ತದೆ. ಇದೇ ಅಸತ್. ಇದನ್ನು ಅಭಾವವೆಂದೂ ಶೂನ್ಯವೆಂದೂ ಹೇಳುತ್ತಾರೆ. ಅತತ್ತ್ವದಿಂದ ಸತತ್ತ್ವವು ಹುಟ್ಟುವು ದಿಲ್ಲ. ಅಸತ್ತಿನಿಂದ ಸತ್ ಹುಟ್ಟುವುದಿಲ್ಲ. ಅಭಾವದಿಂದ ಅಥವಾ ಶೂನ್ಯದಿಂದ ಯಾವ ವಸ್ತುವೂ ಹುಟ್ಟುವುದಿಲ್ಲವೆಂದು ತಾತ್ಪರ್ಯ. ಸದ್ವಸ್ತುವಿಗೆ ಮಾಯೆಯಿಂದಲೇ ಜನ್ಮವಾಗುತ್ತದೆ. ಹೇಗೆಂದರೆ –

**ಯಥಾ ಸ್ವಪ್ನೇ ದ್ವಯಾಭಾಸಂ ಸ್ಪಂದತೇ ಮಾಯಯಾ ಮನಃ ।**
**ತಥಾ ಜಾಗ್ರದ್ದ್ವಯಾಭಾಸಂ ಸ್ಪಂದತೇ ಮಾಯಯಾ ಮನಃ ॥೨೯॥**

**ಸ್ವಪ್ನೇ** = ಸ್ವಪ್ನದಲ್ಲಿ, **ಮನಃ** = ಮನಸ್ಸು, **ದ್ವಯಾಭಾಸಂ** = ದ್ವೈತ ರೂಪವಾಗಿ, **ಯಥಾ** = ಹೇಗೆ, **ಸ್ಪಂದತೇ** = ಕಾಣಿಸಿಕೊಳ್ಳುತ್ತದೆಯೋ, **ತಥಾ** = ಹಾಗೆಯೇ, **ಜಾಗ್ರದ್ದ್ವಯಾಭಾಸಂ** = ಜಾಗ್ರತ್ತಿನಲ್ಲಿಯೂ ದ್ವೈತ ರೂಪವಾಗಿ, **ಮನಃ** = ಮನಸ್ಸು, **ಮಾಯಯಾ** = ಮಾಯೆಯಿಂದ, **ಸ್ಪಂದತೇ** = ಕಾಣಿಸಿಕೊಳ್ಳುತ್ತದೆ.

ಅಧಿಷ್ಠಾನವಿಲ್ಲದೆ ಯಾವ ಭ್ರಾಂತಿಯೂ ಬರುವುದಿಲ್ಲ. ರಜ್ಜುಸರ್ಪಸ್ಥಳದಲ್ಲಿ ಹಗ್ಗವು ಅಧಿಷ್ಠಾನ. ಅದರಲ್ಲಿ ಹಾವಿನ ಭ್ರಾಂತಿ ಬಂದಿದೆ. ಹಾಗೆ ಸದ್ವಸ್ತುವೇ ಮಾಯೆಯಿಂದ ಮನಸ್ಸಾಗಿ ತೋರುತ್ತದೆ. ಈ ಮನಸ್ಸಿನಲ್ಲಿ ನಾನಾ ಸ್ವಪ್ನದೃಶ್ಯಗಳು ಮಾಯೆಯಿಂದ ಕಲ್ಪಿತವಾಗಿ ತೋರಿಸಿಕೊಳ್ಳುತ್ತವೆ. ಸ್ವಪ್ನದೃಶ್ಯಗಳನ್ನು ನೋಡಿ ತಿಳಿಯತಕ್ಕದ್ದು ಮನಸ್ಸು. ಅದು ಗ್ರಾಹಕ. ಮನಸ್ಸೇ ಸ್ವಪ್ನದೃಶ್ಯಗಳೂ ಆಗಿರುವುದ ರಿಂದ ಗ್ರಾಹ್ಯವೂ ಆಗುತ್ತದೆ. ಒಂದೇ ಮನಸ್ಸು ಗ್ರಾಹ್ಯಗ್ರಾಹಕಭಾವದಿಂದ ವರ್ತಿಸುತ್ತದೆ. ಸದ್ವಸ್ತುವೇ ಮಾಯೆಯಿಂದ ಮನಸ್ಸಾಗಿ ಮನೋದೃಶ್ಯವೂ ಆಗಿದೆ. ಈ ಎಲ್ಲ ಕಲ್ಪನೆಗಳಿಗೂ ಆಶ್ರಯವಾದದ್ದು ಸದ್ವಸ್ತುವೇ. ಹೀಗೆಯೇ ಜಾಗ್ರತ್ತಿ ನಲ್ಲಿಯೂ ಸದ್ವಸ್ತುವೇ ಮಾಯೆಯಿಂದ ಜಗತ್ತಾಗಿ ಮನಸ್ಸಾಗಿ ಜಗತ್ತನ್ನು ಅರಿಯು ತ್ತದೆ. ಇಂತಹ ಅದ್ಭುತವನ್ನು ಮಾಡಬಲ್ಲದ್ದು ಮಾಯೆ. ಅದು ಅಘಟಿತಘಟನಾ ಪಟೀಯಸೀ. ಈ ಅಭಿಪ್ರಾಯವು ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗಿ ಬಂದಿದೆ.

**ಅದ್ವಯಂ ಚ ದ್ವಯಾಭಾಸಂ ಮನಃ ಸ್ವಪ್ನೇ ನ ಸಂಶಯಃ ।**
**ಅದ್ವಯಂ ಚ ದ್ವಯಾಭಾಸಂ ತಥಾ ಜಾಗ್ರನ್ನ ಸಂಶಯಃ ॥೩೦॥**

**ಸ್ವಪ್ನೇ** = ಸ್ವಪ್ನದಲ್ಲಿ, **ಮನಃ** = ಮನಸ್ಸು, **ಅದ್ವಯಂ** = ಪರಮಾರ್ಥ ವಾದ ಆತ್ಮರೂಪದಿಂದ ಅದ್ವಯವೂ **ಚ** = ಮತ್ತು **ದ್ವಯಾಭಾಸಂ** = ದ್ವೈತದೃಶ್ಯವಾಗಿ ತೋರತಕ್ಕದ್ದೂ ಆಗಿದೆ. **ನ ಸಂಶಯಃ** = ಈ ವಿಷಯದಲ್ಲಿ

ಸಂಶಯವಿಲ್ಲ. **ತಥಾ** = ಹಾಗೆಯೇ, **ಜಾಗ್ರತ್** = ಜಾಗ್ರತ್ತಿನಲ್ಲಿ, ಮನಸ್ಸು **ಅದ್ವಯಂ** = ಅದ್ವಿತೀಯಾತ್ಮ ತತ್ತ್ವವೇ ಆಗಿದ್ದು, **ದ್ವಯಾಭಾಸಂ** = ದ್ವೈತ ರೂಪವಾದ ಜಗತ್ತಾಗಿದೆ. **ನ ಸಂಶಯಃ** = ಸಂಶಯವಿಲ್ಲ.

ಅದ್ವಿತೀಯಾತ್ಮನು ತನ್ನ ಮಾಯಾಶಕ್ತಿಯಿಂದ ತಾನೇ ಜಗತ್ತಾಗಿ ಜೀವನಾಗಿ ಮನಸ್ಸಾಗಿ ಜಗತ್ತನ್ನು ನೋಡುತ್ತ ನೋಡಿಸಿಕೊಳ್ಳುತ್ತ ಇದ್ದಾನೆ! ಎಂದು ತಾತ್ಪರ್ಯ. ಈ ಎಲ್ಲ ಚಮತ್ಕಾರಗಳಿಗೂ ಹೊಣೆಯಾದದ್ದು ಮಾಯೆ, ಅವಿದ್ಯೆ, ಅಜ್ಞಾನ.

**ಮನೋದೃಶ್ಯಮಿದಂ ದ್ವೈತಂ ಯತ್ಕಿಂಚಿತ್ ಸಚರಾಚರಮ್ ।**
**ಮನಸೋ ಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ ॥೩೧॥**

**ಸಚರಾಚರಂ** = ಚರಾಚರಾತ್ಮಕವಾದ, **ಇದಂ ದ್ವೈತಂ** = ಈ ದ್ವೈತ ವಾಗಿರುವ, **ಯತ್ಕಿಂಚಿತ್** = ಯಾವ ಯಾವುದಿದೆಯೋ ಅದೆಲ್ಲವೂ, **ಮನೋದೃಶ್ಯಂ** = ಮನೋವಿಕಲ್ಪಕ್ಕೆ ಗೋಚರವಾಗತಕ್ಕದ್ದಾಗಿದೆ. **ಮನಸಃ** = ಮನಸ್ಸಿನ, **ಏಮನೀಭಾವೇ** = ಲಯವಾದಾಗ, **ದ್ವೈತಂ** = ಈ ದ್ವೈತ ವಾವುದೂ, **ನೈವೋಪಲಭ್ಯತೇ** = ಗೋಚರಿಸುವುದೇ ಇಲ್ಲ.

ಮನಸ್ಸೇ ಈ ಜಗದ್ರೂಪದಿಂದ ವಿಕಲ್ಪಿತವಾಗಿದೆಯೆಂದು ಹೇಳಿದೆವಷ್ಟೆ. ಈ ಮನಸ್ಸೇ ಗ್ರಾಹ್ಯಗ್ರಾಹಕಭಾವವನ್ನು ಹೊಂದಿ ಗ್ರಾಹ್ಯವಾದ ದ್ವೈತವನ್ನು ಗ್ರಹಿಸುತ್ತದೆ ಎಂದೂ ಹೇಳಿದ್ದಾಯಿತು. ಇದಕ್ಕೆ ಪ್ರಮಾಣವೇನು? ಎಂಬ ಶಂಕೆಗೆ ಉತ್ತರವಿದು. ಈ ಜಗತ್ತೂ ಇದರಲ್ಲಿ ಕಾಣಿಸುವ ಸಮಸ್ತ ದ್ವೈತವೂ ಮನಸ್ಸಿಗೆ ಮಾತ್ರ ಗೋಚರವಾಗುತ್ತದೆ. ಮನಸ್ಸಿಲ್ಲದಿದ್ದರೆ–ಮನೋವ್ಯಾಪಾರವಿಲ್ಲದಿದ್ದರೆ ಯಾವ ದ್ವೈತವೂ ಇರುವುದೇ ಇಲ್ಲ. ಅಭ್ಯಾಸವೈರಾಗ್ಯಾದಿಯೋಗಬಲದಿಂದ ಮನೋವ್ಯಾಪಾರವನ್ನು ತಡೆದ ನಿರ್ವಿಕಲ್ಪಕ ಸಮಾಧಿಯಲ್ಲಿಯೂ ಸುಷುಪ್ತಿ ಯಲ್ಲಿಯೂ ಮನಸ್ಸು ವಿಲಯ ಹೊಂದಿರುತ್ತದೆ. ಆಗ ದ್ವೈತದ ಸುಳಿವೂ ಇರುವು ದಿಲ್ಲ. ಆದ್ದರಿಂದ ದ್ವೈತವೆಲ್ಲವೂ ಮನಃಕಲ್ಪಿತವಾದದ್ದು. ಮನಸ್ಸಿದ್ದರೆ ದ್ವೈತ ಜಗತ್ತು, ಮನಸ್ಸಿಲ್ಲದಿದ್ದರೆ ಅದಾವುದೂ ಇರುವುದಿಲ್ಲ. 'ಮನೋದೃಶ್ಯವಾದ ಈ ದ್ವೈತಪ್ರಪಂಚವೆಲ್ಲವೂ ಮನಸ್ಸು' ಎಂಬುದು ನಮ್ಮ ಪ್ರತಿಜ್ಞೆ, ಹೇತುವೇನೆಂದರೆ, ಮನಸ್ಸಿದ್ದರೆ ದ್ವೈತ ಪ್ರಪಂಚವಿರುತ್ತದೆ. ಇಲ್ಲದಿದ್ದರೆ ದ್ವೈತಪ್ರಪಂಚವಿರುವುದೇ ಇಲ್ಲ. ಆದ್ದರಿಂದ ಮನಸ್ಸೇ ದ್ವೈತವೆಂದು ಸಿದ್ಧಾಂತ.

**ಆತ್ಮಸತ್ಯಾನುಬೋಧೇನ ನ ಸಂಕಲ್ಪಯತೇ ಯದಾ ।**
**ಅಮನಸ್ತಾಂ ತದಾ ಯಾತಿ ಗ್ರಾಹ್ಯಾಭಾವೇ ತದಗ್ರಹಮ್ ॥೩೨॥**

**ಆತ್ಮಸತ್ಯಾನುಬೋಧೇನ** = ಆತ್ಮವೊಂದೇ ಸತ್ಯವಾದದ್ದು ಎಂದು ಗುರು

ಶಾಸ್ತ್ರೋಪದೇಶದಿಂದ ಜ್ಞಾನ ಉಂಟಾದೊಡನೆ **ಮನಃ** = ಮನಸ್ಸು, **ಯದಾ** = ಯಾವಾಗ, **ನ ಸಂಕಲ್ಪಯತೇ** = ಯಾವ ಸಂಕಲ್ಪವನ್ನೂ ಮಾಡುವುದೇ ಇಲ್ಲವೋ, **ತದಾ** = ಆಗ, **ಗ್ರಾಹ್ಯಾಭಾವೇ** = ಗ್ರಹಿಸಬೇಕಾದದ್ದು ಇಲ್ಲವಾಗಲು, **ತತ್** = ಆ ಮನಸ್ಸು, **ಅಗ್ರಹಂ** = ಗ್ರಾಹ್ಯವಿಲ್ಲದ್ದಾಗಿ, **ಅಮನಸ್ತಾಂ** = ಮನೋವ್ಯಾಪಾರರಾಹಿತ್ಯವನ್ನು, **ಯಾತಿ** = ಹೊಂದುತ್ತದೆ.

ಮನೋವ್ಯಾಪಾರವು ನಿಂತು ಹೋದಾಗ ದ್ವೈತವೇ ಇರುವುದಿಲ್ಲವೆಂದು ಹೇಳಿದ್ದಾಯಿತು. ನಿದ್ರಾ ಸಮಾಧಿಗಳಲ್ಲದೆ ಇನ್ನು ಯಾವಾಗ ಅದು ವ್ಯಾಪಾರ ರಹಿತವಾಗುತ್ತದೆ ಎಂಬುದನ್ನು ಇಲ್ಲಿ ಹೇಳಿದೆ. ಆತ್ಮ ಒಂದೇ ಸತ್ಯ. ಉಳಿದದ್ದು ಇಲ್ಲ. ಕಾಣಿಸಿದರೂ ಮಿಥ್ಯೆ ಎಂಬ ಜ್ಞಾನವು ಉತ್ತಮಾಧಿಕಾರಿಗೆ ಬರುತ್ತದೆ. ಆಗ ಯಾವ ಅಪೇಕ್ಷೆಯೂ ಮನಸ್ಸಿನಲ್ಲಿ ಇಲ್ಲವಾಗಿ, ಮನಸ್ಸು ತನ್ನ ವ್ಯಾಪಾರವೆಲ್ಲವನ್ನೂ ನಿಲ್ಲಿಸಿ ಬಿಡುತ್ತದೆ. ಸುಡಲು ಬೇಕಾದ ವಸ್ತುವಿಲ್ಲದಾಗ ಬೆಂಕಿಯು ತಾನಾಗಿ ಆರಿಹೋಗುವ ಹಾಗೆ, ಮನಸ್ಸು ನಿಃಸಂಕಲ್ಪವಾಗಿ ಬಿಡುತ್ತದೆ. **''ಮೃತ್ತಿಕೇತ್ಯೇವ ಸತ್ಯಂ''** ಎಂಬ ಶ್ರುತಿಯನ್ನು (ಛಾಂ. ೬-೧-೪) ಅನುಸರಿಸಿ, ಆತ್ಮದ ಸತ್ಯತೆಯನ್ನರಿತ ಮೇಲೆ ಆತನಿಗೆ ಯಾವ ಸಂಕಲ್ಪವೂ ಹುಟ್ಟುವುದೇ ಇಲ್ಲ. ಆ ಸ್ಥಿತಿಯಲ್ಲಿಯೂ ದ್ವೈತವಿರುವುದಿಲ್ಲ.

**ಅಕಲ್ಪಕಮಜಂ ಜ್ಞಾನಂ ಜ್ಞೇಯಾಭಿನ್ನಂ ಪ್ರಚಕ್ಷತೇ ।**
**ಬ್ರಹ್ಮಜ್ಞೇಯಮಜಂ ನಿತ್ಯಮಜೇನಾಜಂ ವಿಬುಧ್ಯತೇ ॥೩೩॥**

**ಅಕಲ್ಪಕಂ** = ಜ್ಞಾತೃ, ಕರಣಜ್ಞಾನ ಎಂಬ ವಿಕಲ್ಪವರ್ಜಿತವೂ **ಅಜಂ** = ಜನ್ಮವಿಲ್ಲದ ಅನಾದಿಯೂ ಆದ, **ಜ್ಞಾನಂ** = ಜ್ಞಪ್ತಿಯನ್ನು **ಜ್ಞೇಯಾಭಿನ್ನಂ** = ಜ್ಞೇಯವಾದ ಪರಬ್ರಹ್ಮಕ್ಕೆ ಅಭಿನ್ನವಾದದ್ದೆಂದು, **ಪ್ರಚಕ್ಷತೇ** = ಆತ್ಮಜ್ಞಾನಿಗಳು ಹೇಳುತ್ತಾರೆ. **ಬ್ರಹ್ಮಜ್ಞೇಯಂ** = ಬ್ರಹ್ಮವೆಂಬ ತಾನೇ ಜ್ಞೇಯವಾಗಿ ಉಳ್ಳ ಈ ಜ್ಞಪ್ತಿಯು **ಅಜಂ** = ಅಜವೂ, **ನಿತ್ಯಂ** = ಶಾಶ್ವತವೂ ಆದದ್ದು. **ಅಜೇನ** = ಆತ್ಮಸ್ವರೂಪವಾದ ಈ ಜ್ಞಾನದಿಂದ, **ಅಜಂ** = ತಾನೇ ಆದ ಆತ್ಮತತ್ತ್ವವು **ವಿಬುಧ್ಯತೇ** = ತಿಳಿಯಲ್ಪಡುತ್ತದೆ.

ಬಹಳ ಮುಖ್ಯವಾಗಿ ತಿಳಿಯಬೇಕಾದದ್ದು ಇದು. **''ಮನಸೈವೇದಮಾಪ್ತವ್ಯಂ''** (ಕಠ. ೨-೧-೧೧) ಎಂಬ ಶ್ರುತಿಯು ಮನಸ್ಸಿನಿಂದಲೇ ಈ ಬ್ರಹ್ಮವನ್ನು ತಿಳಿಯಬೇಕು ಎಂದು ಹೇಳುತ್ತದೆ. ಹಿಂದೆ ಹೇಳಿದಂತೆ ಮನಸ್ಸೂ ಈ ದ್ವೈತವೂ ಅಸತ್ ಆಗಿಬಿಟ್ಟರೆ, ಆತ್ಮತತ್ತ್ವವನ್ನು ತಿಳಿಯುವುದು ಹೇಗೆ? ನಿಜ. ಆತ್ಮ ಒಂದೇ ಸತ್ಯ. ಉಳಿದುದೆಲ್ಲವೂ ಮಿಥ್ಯೆ ಎಂದು

ನಿಶ್ಚಯವಾಗುವವರೆಗೆ ಮನಸ್ಸು ಆವಶ್ಯಕ. ಗುರ್ವನುಗ್ರಹದಿಂದ ಆತ್ಮನೊಬ್ಬನೇ ಸತ್ಯನೆಂಬ ಅರಿವು ಗಟ್ಟಿಯಾಗಿ ನಿಂತೊಡನೆ ಅವಿದ್ಯೆಯು ಕರಗಿ ಹೋದೊಡನೆ ಮನಸ್ಸೂ ಲಯವಾಗಿ ಆತ್ಮನೊಡನೆ ಸೇರಿಹೋಗುತ್ತದೆ. ಮನೋಲಯವಾದಾಗ ಶಾಶ್ವತವಾದ ಜ್ಞಪ್ತಿಯೊಂದೇ ಉಳಿಯುವುದು. ಇದು ಅಕಲ್ಪಕ. ಇದಕ್ಕೆ ಜ್ಞಾತೃವೂ ಇಲ್ಲ, ಜ್ಞಾನಸಾಧನವಾದ ಮನಸ್ಸೂ ಇಲ್ಲ. ಆತ್ಮನು ಜ್ಞಾನಸ್ವರೂಪನೆಂದು **'ವಿಜ್ಞಾನಮಾನಂದಂ ಬ್ರಹ್ಮ'** (ಬೃಹ. ೩–೯–೨೮(೭)).**'ಸತ್ಯಂ ಜ್ಞಾನಮನಂತಂ ಬ್ರಹ್ಮ'** (ತೈತ್ತಿ.೨–೧) ಮುಂತಾದ ಶ್ರುತಿಗಳು ಹೇಳಿವೆ. **''ನ ಹಿ ವಿಜ್ಞಾತು– ರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ''** (ಬೃಹ. ೪–೩–೩೦). ವಿಜ್ಞಾತೃ ವಾದ ಬ್ರಹ್ಮನಿಂದ ಜ್ಞಪ್ತಿಗೆ ಅಗಲುವಿಕೆಯೇ ಇಲ್ಲ. ಅಗ್ನಿಯಿಂದ ಉಷ್ಣತೆ ಹೇಗೆ ಬೇರೆಯಾಗಲಾರದೋ ಹಾಗೆ ಬ್ರಹ್ಮದೊಡನೆ ಜ್ಞಪ್ತಿಯಿದೆ ಎನ್ನಬಹುದು. ಜ್ಞಾನಕ್ಕೂ ಬ್ರಹ್ಮಕ್ಕೂ ಭೇದವಿಲ್ಲ. ಈ ಜ್ಞಾನವೇ ತನ್ನ ಸ್ವರೂಪವಾದ ಜ್ಞಾನಾತ್ಮಕ ಬ್ರಹ್ಮ ವನ್ನರಿಯುತ್ತದೆ! ಜ್ಞಪ್ತಿಯೇ ಬ್ರಹ್ಮ. ಜ್ಞಪ್ತಿಯೇ ಸ್ವಸ್ವರೂಪವಾದ–ತಾನೇ ಆದ ಜ್ಞಪ್ತಿ ಯನ್ನರಿಯುತ್ತದೆ! **ಆನಂದೋಬ್ರಹ್ಮೇತಿ ವ್ಯಜಾನಾತ್** (ತೈತ್ತಿ ೩–೬) ಆನಂದ ರೂಪವಾದ ಬ್ರಹ್ಮವು ಆನಂದಾತ್ಮಕವಾದ ಬ್ರಹ್ಮವನ್ನು ತಿಳಿದು ಆನಂದಿಸುತ್ತದೆ!

**ನಿಗೃಹೀತಸ್ಯ ಮನಸೋ ನಿರ್ವಿಕಲ್ಪಸ್ಯ ಧೀಮತಃ ।**
**ಪ್ರಚಾರಃ ಸ ತು ವಿಜ್ಞೇಯಃ ಸುಷುಪ್ತೇಽನ್ಯೋ ನ ತತ್ಸಮಃ ॥೩೪॥**

**ನಿರ್ವಿಕಲ್ಪಸ್ಯ** = ಸರ್ವವಿಕಲ್ಪಗಳನ್ನೂ ತ್ಯಜಿಸಿದ, **ಧೀಮತಃ** = ವಿವೇಕಶಾಲಿಯಾದ ಪುರುಷನ, **ನಿಗೃಹೀತಸ್ಯ** = ನಿರುದ್ಧವಾದ, **ಮನಸಃ** = ಮನಸ್ಸಿನ, **ಪ್ರಚಾರಃ** = ಯಾವ ವೃತ್ತಿಯುಂಟೋ, **ಸ ತು** = ಅದು **ವಿಜ್ಞೇಯಃ** = ಯಾವ ಸ್ವರೂಪದಲ್ಲಿರುತ್ತದೆಯೆಂಬುದು, ಅವಶ್ಯವಾಗಿ ತಿಳಿಯಬೇಕಾದದ್ದು. ಏಕೆಂದರೆ, **ಸುಷುಪ್ತೇ** = ಸುಷುಪ್ತಿ ಸ್ಥಿತಿಯಲ್ಲಿ, **ಅನ್ಯಃ** = ಮನೋವೃತ್ತಿಯು ಬೇರೆಯಾಗಿರುತ್ತದೆ. ಅದು, **ತತ್ಸಮಃ** = ಸಮಾಧಿಯ ಮನೋವೃತ್ತಿಗೆ ಸದೃಶ ವಾದದ್ದು, **ನ** = ಅಲ್ಲ.

**ತಾತ್ಪರ್ಯ :** ಆತ್ಮನೊಬ್ಬನೇ ಸತ್ಯನೆಂದು ತಿಳಿದ ವಿವೇಕಿಯು ಸರ್ವ ಸಂಕಲ್ಪ ವಿಕಲ್ಪಗಳನ್ನೂ ತ್ಯಜಿಸಿ ಸಮಾಧಿ ಸ್ಥಿತಿಯನ್ನು ಪಡೆದಾಗ ಮನಸ್ಸಿನ ಪರದಾಟವೆಲ್ಲವೂ ನಿಂತು ಹೋಗಿರುತ್ತದೆ. ಅವನು ಮನಸ್ಸನ್ನು ನಿರೋಧಿಸುತ್ತಾನೆ. ಆತನ ಮನಃಸ್ಥಿತಿ ಯಾವ ರೀತಿಯದೆಂಬುದು ಯೋಗಿಗೆ ಮಾತ್ರ ತಿಳಿದಿರುತ್ತದೆ. ಎಲ್ಲರಿಗೂ ಪ್ರಾಪ್ತವಾಗುವ ಸುಷುಪ್ತಿಯ ಮನಃಸ್ಥಿತಿ ಅದಲ್ಲ. ಅದಕ್ಕಿಂತ ಬೇರೆ ಯಾದದ್ದು ಸಮಾಧಿಯ ಮನಃಸ್ಥಿತಿ. ಅದನ್ನು ತಿಳಿಯಬೇಕು.

**ಟಿಪ್ಪಣಿ :** ಶ್ಲೋಕದಲ್ಲಿರುವ 'ನಿರ್ವಿಕಲ್ಪಸ್ಯ' ಎಂಬುದನ್ನು ಮನಸ್ಸಿಗೂ ವಿಶೇಷಣವಾಗಿ ಅನ್ವಯಿಸಬಹುದು. ಮನಸ್ಸು ನಿರುದ್ಧವಾದಾಗ ಮತ್ತು ಸುಷುಪ್ತಿಯಲ್ಲಿ ಮನಸ್ಸಿಗೆ ಚಲನೆ ಇರುವುದಿಲ್ಲ. ಆದ್ದರಿಂದ ಪ್ರಚಾರ ಶಬ್ದಕ್ಕೆ ವೃತ್ತಿ = ವರ್ತನೆ ಅಥವಾ ಸ್ಥಿತಿ ಎಂದು ಅರ್ಥವನ್ನು ಹೇಳಬಹುದು.

**ವಿವರಣೆ :** ಆತ್ಮಜ್ಞಾನಿಯು ಸಮಾಧಿಯಲ್ಲಿರುವಾಗ ಮನಸ್ಸಿಗೂ ಅಜ್ಞಾನಿಗಳ ಸುಷುಪ್ತಿಯಲ್ಲಿರುವ ಮನಸ್ಸಿಗೂ ವ್ಯತ್ಯಾಸವೇನು? ಉಭಯಮನಸ್ಸುಗಳಿಗೂ ಯಾವ ಬಗೆಯ ಜ್ಞಾನವೂ ಇರುವುದಿಲ್ಲವಷ್ಟೆ? ವ್ಯತ್ಯಾಸವಿದೆ. ಅಜ್ಞಾನಿಯಾದ ಸಂಸಾರಿಯ ಮನಸ್ಸು ಅವಿದ್ಯೆಯೆಂಬ ಅಂಧಕಾರದಲ್ಲಿ ತೊಳಲಾಡುತ್ತದೆ. ಅನರ್ಥಕಾರಿಗಳಾದ ನಾನಾ ಕರ್ಮಗಳಲ್ಲಿ ಪ್ರವೃತ್ತಿಯನ್ನುಂಟು ಮಾಡುವ ಜನ್ಮಾಂತರವಾಸನೆಗಳಿಂದ ತುಂಬಿರುತ್ತದೆ. ಜ್ಞಾನಿಯ ಮನಸ್ಸಾದರೋ ಪರಿಶುದ್ಧವಾದದ್ದು. ಅವಿದ್ಯಾ ಲೇಶವೂ ಅದರಲ್ಲಿರುವುದಿಲ್ಲ. ಕರ್ಮವಾಸನೆಗಳು ಸಂಪೂರ್ಣವಾಗಿ ನಾಶ ಹೊಂದಿರುತ್ತವೆ. ಆದ್ದರಿಂದ ಜ್ಞಾನಿಯ ಶುದ್ಧವಾದ ಮನಸ್ಸಿಗೂ ಅಜ್ಞಾನಿಯ ಮಲಿನವಾದ ಮನಸ್ಸಿಗೂ ಹೋಲಿಕೆ ಇಲ್ಲ. ಆದ್ದರಿಂದ ಜ್ಞಾನಿಯ ಮನಸ್ಸು ಸಮಾಧಿಯಲ್ಲಿ ಹೇಗಿರುತ್ತದೆಯೆಂಬುದು ತಿಳಿಯಬೇಕಾದದ್ದು. ಅದನ್ನು ಮುಂದಿನ ಕಾರಿಕೆಯಲ್ಲಿ ಹೇಳಲಾಗುವುದು.

**ಲೀಯತೇ ಹಿ ಸುಷುಪ್ತೇ ತನ್ನಿಗೃಹೀತಂ ನ ಲೀಯತೇ ।**
**ತದೇವ ನಿರ್ಭಯಂ ಬ್ರಹ್ಮ ಜ್ಞಾನಾಲೋಕಂ ಸಮಂತತಃ ॥೩೫॥**

**ಸುಷುಪ್ತೇ** = ಅಜ್ಞಾನಿಗಳ ಮನಸ್ಸು ಸುಷುಪ್ತಿಯಲ್ಲಿ, **ಲೀಯತೇ** = ಲಯವನ್ನು ಹೊಂದುತ್ತದೆ. **ತತ್** = ಆ ಮನಸ್ಸು, **ನಿಗೃಹೀತಂ** = ಸಮಾಧಿಯಲ್ಲಿ ಜ್ಞಾನಿಯಿಂದ ನಿರುದ್ಧವಾದಾಗ, **ನ ಲೀಯತೇ** = ಲಯವನ್ನು ಹೊಂದುವುದಿಲ್ಲ. **ತದೇವ** = ಲಯವಾಗದೆ ಶುದ್ಧವಾದ ಆ ಮನಸ್ಸೇ, **ನಿರ್ಭಯಂ** = ಭಯರಹಿತವಾದ, **ಬ್ರಹ್ಮ** = ಪರಬ್ರಹ್ಮವೆನಿಸುತ್ತದೆ. ಅದು **ಸಮಂತತಃ** = ಸರ್ವತ್ರ ವ್ಯಾಪಿಸಿದ, **ಜ್ಞಾನಾಲೋಕಂ** = ಜ್ಞಾನವೆಂಬ ಪ್ರಕಾಶವುಳ್ಳ ವಿಜ್ಞಾನಘನವಾಗಿರುತ್ತದೆ.

ಸಾಮಾನ್ಯ ಜನರ ಮನಸ್ಸು ಅವಿದ್ಯಾ ಅಸ್ಮಿತಾ ರಾಗದ್ವೇಷಾದಿ ದೋಷ ಗಳಿಂದ ದೂಷಿತವಾದದ್ದು. ಸುಷುಪ್ತಿಯಲ್ಲಿ ಆ ದೋಷಗಳು ಬೀಜರೂಪದಿಂದ ಇದ್ದೇ ಇರುತ್ತವೆ. ಮನಸ್ಸು ತಮೋರೂಪವನ್ನು ತಳೆದು ನಿಶ್ಶೇಷವಾಗಿ ಲಯ ಹೊಂದಿದಂತೆ ಇರುತ್ತದ. ಆದರೆ ಆತ್ಮಜ್ಞಾನಿಯ ಮನಸ್ಸು ದೋಷರಹಿತವಾದ್ದ ರಿಂದ ವಿಷಯ ಸಂಬಂಧವಿಲ್ಲದೆ ಸ್ವತಂತ್ರವಾಗಿ ಬ್ರಹ್ಮವೇ ಆಗಿಬಿಡುತ್ತದೆ. ಅದಕ್ಕೆ

ಅವಿದ್ಯಾ ಸ್ಪರ್ಶವೂ ಇರುವುದಿಲ್ಲ. ಇದೇ ಉಭಯಮನಸ್ಸುಗಳಿಗಿರುವ ಭೇದ ವೆಂದು ತಿಳಿಯಬೇಕು.

**ಅಜಮನಿದ್ರಮಸ್ವಪ್ನಮನಾಮಕಮರೂಪಕಮ್ ।**
**ಸಕೃದ್ವಿಭಾತಂ ಸರ್ವಜ್ಞಂ ನೋಪಚಾರಃ ಕಥಂಚನ ॥೩೬॥**

ಈ ಬ್ರಹ್ಮವು **ಅಜಂ** = ಜನ್ಮರಹಿತವಾದದ್ದು. ನಿದ್ರೆಸ್ವಪ್ನಗಳಿಲ್ಲದ್ದು. ನಾಮ ರೂಪರಹಿತವಾದದ್ದು. **ಸಕೃದ್ವಿಭಾತಂ** = ಒಂದೇ ಸಲ (ಸದಾ) ಭಾಸಮಾನ ವಾದದ್ದು. **ಸರ್ವಜ್ಞಂ** = ಸರ್ವವೂ ಜ್ಞಸ್ವರೂಪವೂ ಆದದ್ದು **ಕಥಂಚನ** = ಯಾವ ವಿಧದಲ್ಲಿಯೂ ಬ್ರಹ್ಮವೇ ಆದ ಬ್ರಹ್ಮಜ್ಞಾನಿಗೆ **ಉಪಚಾರಃ** = ಕರ್ತವ್ಯವು, **ನ** = ಇಲ್ಲ.

**ಅಜ** = ಆತ್ಮಸತ್ಯಾನುಬೋಧದಿಂದ ಅವಿದ್ಯೆಯು ತೊಲಗಿರುವುದರಿಂದ ಆತ್ಮಜ್ಞಾನಿಗೆ ಮತ್ತೆ ಜನ್ಮವಿಲ್ಲ. ಜನ್ಮಕ್ಕೆ ಅವಿದ್ಯೆಯೇ ನಿಮಿತ್ತ. ಅದು ಇಲ್ಲದಾಗ ಜನ್ಮವಿಲ್ಲ.

**ಅನಿದ್ರಂ** = ಅವಿದ್ಯೆಯೆಂಬ ಅನಾದಿಮಾಯೆಯೇ ನಿದ್ರೆ. ಜ್ಞಾನಿಗೆ ಈ ನಿದ್ರೆ ಇಲ್ಲ.

**ಅಸ್ವಪ್ನಂ** = ಅವಿದ್ಯಾನಿದ್ರೆಯಿಂದ ಜಾಗೃತನಾಗಿರುವುದರಿಂದ ಸ್ವಪ್ನವೂ ಇಲ್ಲ.

**ನಾಮರೂಪರಹಿತಂ** = ಸದ್ವಿತೀಯವೂ ಗುಣವಿಶಿಷ್ಟವೂ ಆದಾಗ ನಾಮರೂಪಗಳಿರಲು ಸಾಧ್ಯವಿದೆ. ಪ್ರಬೋಧದಿಂದ ದ್ವೈತವೇ ನಷ್ಟವಾದಾಗ ನಾಮರೂಪಗಳಿಗೆ ನಿಮಿತ್ತವೇ ಇರುವುದಿಲ್ಲ. **'ಯತೋ ವಾಚೋ ನಿವರ್ತಂತೇ। ಅಪ್ರಾಪ್ಯಮನಸಾ ಸಹ'** (ತೈತ್ತಿ ೨–೯).

**ಸಕೃದ್‌ವಿಭಾತಂ** = ಚಿದ್ರೂಪವೂ ಸ್ವಯಂಪ್ರಕಾಶವೂ ಆದ್ದರಿಂದ ಸದಾ ಪ್ರಕಾಶಿಸತಕ್ಕದ್ದು.

**ಸರ್ವಜ್ಞಂ** = ಅದ್ವಿತೀಯವಾದ್ದರಿಂದ ಸರ್ವವೂ ಬ್ರಹ್ಮವೇ. **'ತುರ್ಯಂ ತತ್ ಸರ್ವದೃಕ್ ಸದಾ'** (ಕಾರಿಕೆ ೧–೧೨)

ಅವಿದ್ಯಾನಾಶವಾದ್ದರಿಂದ ಬ್ರಹ್ಮಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲ. ಕರ್ಮವಿಲ್ಲ.

**ಸರ್ವಾಭಿಲಾಪವಿಗತಃ ಸರ್ವಚಿಂತಾಸಮುತ್ಥಿತಃ ।**
**ಸುಪ್ರಶಾಂತಃ ಸಕೃಜ್ಜ್ಯೋತಿಃ ಸಮಾಧಿರಚಲೋಽಭಯಃ ॥೩೭॥**

**ಸರ್ವಾಭಿಲಾಪವಿಗತಃ** = ಅಭಿಲಾಪವೆಂದರೆ ವಾಗುಚ್ಚಾರಣೆಗೆ ಬೇಕಾದ ಓಷ್ಠ ಜಿಹ್ವಾದಿಕರಣ. ಸಮಸ್ತಕರಣವರ್ಜಿತನಾದವನು ಆತ್ಮ. **ಸರ್ವಚಿಂತಾ ಸಮುತ್ಥಿತಃ** = ಚಿಂತಾ ಎಂದರೆ ಇಲ್ಲಿ ಬುದ್ಧಿ. ಅಂತಃಕರಣವೆಂದು ತಾತ್ಪರ್ಯ. ಸರ್ವ ಅಂತಃಕರಣಗಳಿಂದಲೂ ರಹಿತನಾದವನು. **ಸುಪ್ರಶಾಂತಃ** = ಸರ್ವ ವಿಶೇಷ ವರ್ಜಿತನಾದ್ದರಿಂದ ಸದಾ ಶಾಂತನು. **ಸಕೃಜ್ಜ್ಯೋತಿಃ** = ಸದಾ ಜ್ಯೋತಿಃ ಸ್ವರೂಪನು. **ಸಮಾಧಿಃ** = ಏಕಾಗ್ರಚಿತ್ತಕ್ಕೆ ಗೋಚರನಾದವನು. **ಅಚಲಃ** = ವಿಕ್ರಿಯಾರಹಿತ. ಈ ಆತ್ಮನು **ಅಭಯಃ** = ಭಯರಹಿತನು.

ಅಭಿಲಾಪ ಶಬ್ದದಿಂದ ಸರ್ವಕ್ರಿಯೆಗಳ ಕರಣಗಳನ್ನೂ ತೆಗೆದುಕೊಳ್ಳ ಬಹುದು. ಸರ್ವಬಾಹ್ಯಕರಣವರ್ಜನಾದವನು ಆತ್ಮ. ಚಿಂತಾಶಬ್ದದಿಂದ ಅಂತಃಕರಣವನ್ನು ಗ್ರಹಿಸಬೇಕು. ಆತ್ಮನು ಅಂತಃಕರಣವರ್ಜಿತ. ವಿಕಾರಾದಿ ಕ್ರಿಯೆ ಗಳಾವುವೂ ಇಲ್ಲದ್ದರಿಂದ ಪ್ರಶಾಂತ. ಚಿನ್ಮಯನಾದ್ದರಿಂದ ಸದಾ ಬೆಳಗತಕ್ಕವನು. ಸಮಾಧಿಗಮ್ಯನೂ ದ್ವಿತೀಯವಲ್ಲದ್ದರಿಂದ ಭಯರಹಿತನೂ ಆಗಿದ್ದಾನೆ.

**ಗ್ರಹೋ ನ ತತ್ರ ನೋತ್ಸರ್ಗಶ್ಚಿಂತಾ ಯತ್ರ ನ ವಿದ್ಯತೇ ।**
**ಆತ್ಮಸಂಸ್ಥಂ ತದಾ ಜ್ಞಾನಮಜಾತಿಸಮತಾಂ ಗತಮ್** ॥೩೮॥

**ಯತ್ರ** = ಯಾವ ಆತ್ಮನಲ್ಲಿ, **ಚಿಂತಾ** = ಸರ್ವಪ್ರಕಾರದ ಚಿಂತೆಯೂ **ನ ವಿದ್ಯತೇ** = ಇರುವುದಿಲ್ಲವೋ, **ತತ್ರ** = ಅಂತಹ ಆತ್ಮನಲ್ಲಿ, **ಜ್ಞಾನಂ** = ಜ್ಞಾನವು, **ಆತ್ಮಸಂಸ್ಥಂ** = ಆತ್ಮನಾದ ತನ್ನಲ್ಲಿಯೇ ನಿಂತಿರುತ್ತದೆ. ಅದು **ಅಜಾತಿ** = ಜನ್ಮರಹಿತವೂ, **ಸಮತಾಂ ಗತಂ** = ಏಕರೂಪವಾದದ್ದೂ ಆಗಿರುತ್ತದೆ.

ಆತ್ಮಸತ್ಯವನ್ನರಿತ ಜ್ಞಾನಿಯು ಆತ್ಮನೇ ಆಗಿರುತ್ತಾನೆ. ಅವನಲ್ಲಿ ಅಂತಃಕರಣ ವೆನಿಸಿದ ಮನಸ್ಸೇ ಇಲ್ಲವಾದ್ದರಿಂದ ಯಾವ ವಿಷಯದ ಚಿಂತೆಯೂ ಇರುವುದಿಲ್ಲ. ಯಾವ ವಿಕಾರವೂ ಇಲ್ಲದಿರುವುದರಿಂದ ಆತನಲ್ಲಿ ಯಾವುದರ ಗ್ರಹಣವೂ ಇಲ್ಲ, ತ್ಯಾಗವೂ ಇಲ್ಲ. ಆದ್ದರಿಂದ ವಿಕಾರವೂ ಇರುವುದಿಲ್ಲ. ಏಕೆಂದರೆ ಆತ್ಮನಲ್ಲಿ ವಿಕಾರವನ್ನುಂಟು ಮಾಡುವ ಮತ್ತೊಂದು ವಸ್ತುವೂ ಇಲ್ಲ, ಆತನು ನಿರವಯವ ನಾದ್ದರಿಂದ ವಿಕಾರಕ್ಕೆ ಅವಕಾಶವೇ ಇಲ್ಲ. ಇನ್ನೊಂದು ವಿಷಯವಿಲ್ಲವಾದ್ದರಿಂದ ಆತನ ಜ್ಞಾನವು ತನ್ನಲ್ಲಿಯೇ ಕೇಂದ್ರೀಕರಿಸಿಕೊಂಡಿರುತ್ತದೆ. ಪರಮೇಶ್ವರನ ತಪಸ್ಸನ್ನು ವರ್ಣಿಸುವಾಗ ಮಹಾಕವಿ ಕಾಳಿದಾಸನು "**ಆತ್ಮಾನಮಾತ್ಮನ್ಯವಲೋಕ ಯಂತಂ**" ಎಂದು ವರ್ಣಿಸಿರುತ್ತಾನೆ. "**ಅತೋ ವಕ್ಷ್ಯಾಮ್ಯಕಾರ್ಪಣ್ಯಮಜಾತಿ ಸಮತಾಂ ಗತಮ್**" (೩–೨) ಎಂದು ಈ ಪ್ರಕರಣದ ಆದಿಯಲ್ಲಿ ಹೇಳಿದ್ದನ್ನು ಸ್ಮರಿಸಿಕೊಳ್ಳಬಹುದು. ಯಾವನು ಮನುಷ್ಯನಾಗಿ ಹುಟ್ಟಿದರೂ ಆತ್ಮಜ್ಞಾನವನ್ನು

ಪಡೆಯದೆ ಮರಣ ಹೊಂದುತ್ತಾನೋ ಆತನು ಕೃಪಣನೆಂದು **"ಏತದಕ್ಷರಂ ಗಾರ್ಗ್ಯವಿದಿತ್ವಾ ಅಸ್ಮಾಲ್ಲೋಕಾದೇತಿ ಸ ಕೃಪಣಃ"** ಎಂದು ಶ್ರುತಿಯು ಹೇಳಿದೆ. (ಬೃಹ. ೩-೮-೯) ಅದನ್ನಿಲ್ಲಿ ಸ್ಮರಿಸಿ ಕೊಳ್ಳಬಹುದು. ಈ ಬ್ರಹ್ಮಜ್ಞಾನವನ್ನು ಪಡೆದವನು ಕೃತಕೃತ್ಯ. ಅವನೇ ಬ್ರಾಹ್ಮಣ ನೆಂದು **"ಅಥ ಯ ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ"** ಎಂದು ಬೃಹದಾರಣ್ಯಕದಲ್ಲಿದೆ (೩-೮-೯).

**ಏತದ್ಧಿ ಜನ್ಮಸಾಫಲ್ಯಂ ಬ್ರಾಹ್ಮಣಸ್ಯ ವಿಶೇಷತಃ ।**
**ಪ್ರಾಪ್ಯೈತತ್ ಕೃತಕೃತ್ಯೋ ಹಿ ದ್ವಿಜೋ ಭವತಿ ನಾನ್ಯಥಾ ॥**

– ಮನು ೧೨-೯೩

ಬ್ರಹ್ಮಜ್ಞಾನವನ್ನು ಪಡೆದರೆ ಬ್ರಾಹ್ಮಣ ಜನ್ಮ ಸಫಲ. ಇಲ್ಲದಿದ್ದರೆ ವ್ಯರ್ಥ.

**ಅಸ್ಪರ್ಶಯೋಗೋ ವೈ ನಾಮ ದುರ್ದರ್ಶಃ ಸರ್ವಯೋಗಿಭಿಃ ।**
**ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ॥೩೯॥**

ಈ ಪರಮಾತ್ಮ ತತ್ತ್ವದರ್ಶನವು **ಅಸ್ಪರ್ಶಯೋಗೋ ವೈ ನಾಮ** = ಅಸ್ಪರ್ಶಯೋಗವೆಂಬ ಹೆಸರುಳ್ಳದ್ದು. **ಸರ್ವಯೋಗಿಭಿಃ** = ಸಮಸ್ತ ಯೋಗಿಗಳಿಂದಲೂ, **ದುರ್ದರ್ಶಃ** = ಕಷ್ಟದಿಂದ ಪ್ರಾಪ್ತವಾಗುವಂತಹುದು. **ಯೋಗಿನಃ** = ಯೋಗಿಗಳು, **ಅಸ್ಮಾತ್** = ಈ ಆತ್ಮದರ್ಶನ ಯೋಗಕ್ಕೆ, **ಬಿಭ್ಯತಿ** = ಅಂಜುತ್ತಾರೆ. ಅವರು **ಅಭಯೇ** = ಅಭಯವಾದ ಬ್ರಹ್ಮದಲ್ಲಿ **ಭಯ ದರ್ಶಿನಃ** = ಭಯವನ್ನು ಕಾಣತಕ್ಕವರು.

ಈ ಅದ್ವೈತಪರಮಾರ್ಥದರ್ಶನವು **ಅಸ್ಪರ್ಶಯೋಗವೆಂದು** ಪ್ರಸಿದ್ಧ ವಾಗಿದೆ. ಸ್ಪರ್ಶವೆಂದರೆ ಸಂಬಂಧ. ಸರ್ವಸಂಬಂಧ ವರ್ಜನವೆಂಬ ಯೋಗ ವಿದು. ವೇದಾಂತಬೋಧಿತವಾದ ಜ್ಞಾನವಿಲ್ಲದವರಿಗೆ ಇದು ದುರ್ಲಭವಾದದ್ದು. ಅದ್ವೈತಾತ್ಮದರ್ಶನವೇ ಇಲ್ಲಿ ಅಸ್ಪರ್ಶವೆನ್ನಬಹುದು. **"ಅರೇಽಯ-ಮಾತ್ಮಾಽನುಚ್ಛಿತ್ತಿಧರ್ಮಾ ಮಾತ್ರಾಽಸಂಸರ್ಗಸ್ತ್ವಸ್ಯಭವತಿ"** ಇತ್ಯಾದಿ ಶ್ರುತಿ ವಚನಗಳಲ್ಲಿ ಆತ್ಮನಿಗೆ ವರ್ಣಾಶ್ರಮಾದಿ ಧರ್ಮಗಳೂ ಪಾಪಾದಿ ಕಶ್ಮಲ ಸಂಬಂಧವೂ ಇರುವುದಿಲ್ಲವೆಂದು ಹೇಳಿದೆ. ಈ ಆತ್ಮತತ್ತ್ವವು ಸಮಸ್ತ ಭಯ ಗಳಿಂದ ದೂರವಾದದ್ದು. **"ಸ ವಾ ಏಷ ಮಹಾನಜ ಆತ್ಮಾಽಜರೋಽ-ಮೃತೋಽಭಯೋ ಬ್ರಹ್ಮಾಽಭಯಂ ವೈ ಬ್ರಹ್ಮಾಽಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ"** (ಬೃಹ. ೪-೪-೨೫) ಇತ್ಯಾದಿ ಶ್ರುತಿಗಳು ನಿರ್ಭಯಂ ಬ್ರಹ್ಮ ಎಂದು ಘೋಷಿಸುತ್ತವೆ. ಮನೋನಾಶರೂಪವಾದ ಈ ಸ್ಥಿತಿಯು

ಪರಮಾನಂದಪ್ರದವಾದರೂ, ಪೂರ್ಣಜ್ಞಾನವಿಲ್ಲದವರು ಇದರಿಂದ ''ನಾವೇ ಇಲ್ಲವಾಗುತ್ತೇವೆ! ಆತ್ಮನಾಶವಾಗಿ ಬಿಡುತ್ತದೆ!'' ಎಂದು ಹೆದರುತ್ತಾರೆ. ಈ ಜನರ ಸಂಸಾರ ಮೋಹವು ಹೇಗಿದೆಯೆಂದರೆ ''ನಮಗೆ ಮೋಕ್ಷಬೇಕು. ಅದು ನಾವು ಮೃತರಾದ ಮೇಲೆ ಬರಲಿ! ಈಗಲೇ ಬೇಡ!'' ಎನ್ನುತ್ತಾರೆ. ಇದೆಲ್ಲವೂ ಅಜ್ಞಾನ ವಿಜೃಂಭಿತವಾದದ್ದು. ವೇದಾಂತಬೋಧಿತವಾದ ಸಮ್ಯಗ್ ಜ್ಞಾನವನ್ನು ಪಡೆಯದೆ ಇತರ ಯೋಗಾಭ್ಯಾಸ ಮಾಡತಕ್ಕ ಯೋಗಿಗಳು ಹೆದರುತ್ತಾರೆ ಎಂದು ಅಭಿಪ್ರಾಯ.

**ಮನಸೋ ನಿಗ್ರಹಾಯತ್ತಮಭಯಂ ಸರ್ವಯೋಗಿನಾಮ್ ।**
**ದುಃಖಕ್ಷಯಃ ಪ್ರಬೋಧಶ್ಚಾಪ್ಯಕ್ಷಯಾ ಶಾಂತಿರೇವ ಚ ॥೪೦॥**

**ಸರ್ವಯೋಗಿನಾಂ** = ಸನ್ಮಾರ್ಗಗಾಮಿಗಳಾದ ಮಂದಮಧ್ಯಮ ದೃಷ್ಟಿಯುಳ್ಳ ಎಲ್ಲಯೋಗಿಗಳಿಗೂ, **ಅಭಯಂ** = ಅಸ್ಪರ್ಶಯೋಗದಲ್ಲಿ ಭಯರಾಹಿತ್ಯವು, **ಮನಸಃ** = ಮನಸ್ಸಿನ, **ನಿಗ್ರಹಾಯತ್ತಂ** = ನಿಗ್ರಹಕ್ಕೆ ಒಳಪಟ್ಟಿರುತ್ತದೆ. ಅಂತೆಯೇ, **ದುಃಖಕ್ಷಯಃ** = ಶೋಕಗಳ ನಾಶವೂ, **ಪ್ರಬೋಧಃ** = ಆತ್ಮಜ್ಞಾನವೂ, **ಅಕ್ಷಯಾ** = ಶಾಶ್ವತವಾದ, **ಶಾಂತಿರೇವ ಚ** = ಪರಮಶಾಂತಿರೂಪವಾದ ಮೋಕ್ಷವೂ ಸಹ ಮನೋನಿಗ್ರಹಕ್ಕೆ ಒಳಪಟ್ಟಿರುತ್ತದೆ.

ಗುರೂಪದಿಷ್ಟವಾದ ವೇದಾಂತಮಾರ್ಗದಲ್ಲಿ ನಡೆಯತಕ್ಕ ಎಲ್ಲ ಮುಮುಕ್ಷುಗಳೂ ಈ ಪ್ರಕರಣದಲ್ಲಿ, ಯೋಗಿಗಳೆನಿಸುತ್ತಾರೆ. ಅದರಲ್ಲಿ ಮಂದದೃಷ್ಟಿಯವರು, ಮಧ್ಯಮ ದೃಷ್ಟಿಯವರು, ಉತ್ತಮ ದೃಷ್ಟಿಯವರೆಂದು ಮೂರು ವಿಧದವರು ಇರುತ್ತಾರೆ. ಉತ್ತಮ ದೃಷ್ಟಿಯವರಿಗೆ ಸರ್ವವೂ ಅದ್ವಯಾತ್ಮವೆಂದೂ ಆತ್ಮಾತಿರಿಕ್ತವಾದದ್ದು ಇಲ್ಲವೇ ಇಲ್ಲವೆಂಬ ನಿಶ್ಚಯವು ಬಂದು ಬಿಡುತ್ತದೆ. ಮನಸ್ಸೂ ಇಂದ್ರಿಯಗಳೂ ಸಹ ಕೇವಲಾತ್ಮನೇ ಸರಿಯೆಂದೂ ರಜ್ಜುಸರ್ಪದಂತೆ ಕಲ್ಪಿತ ವಾದ್ದೆಂದೂ ಶುದ್ಧ ಜ್ಞಾನವಿರುವ ಅವರು ಸ್ವತಃ ಬ್ರಹ್ಮ ಸ್ವರೂಪರೇ ಆಗಿರುತ್ತಾರೆ. ಮನಸ್ಸೂ ಆತ್ಮವಾಗಿ ಮನೋಲಯವಾಗಿರುತ್ತದೆ. ಆ ಉತ್ತಮ ದೃಷ್ಟಿಯ ಯೋಗಿಗಳಿಗೆ ಅಭಯ, ದುಃಖನಿವೃತ್ತಿ, ಶಾಶ್ವತವಾದ ಮೋಕ್ಷವೆಂಬ ಶಾಂತಿಯು ಪ್ರಾಪ್ತವಾಗಿ ಜೀವನ್ಮುಕ್ತರಾಗಿರುವುದರಿಂದ ಅವರಿಗೆ ಮನೋನಿಗ್ರಹದ ಪ್ರಶ್ನೆಯೇ ಉದಿಸುವುದಿಲ್ಲ. ಮೋಕ್ಷವು ಅವರಿಗೆ ಸ್ವತಃ ಸಿದ್ಧವಾದದ್ದು. ಉಳಿದ ಯೋಗಿಗಳು ಮಾತ್ರ ಮನೋನಿಗ್ರಹಕ್ಕಾಗಿ ಪ್ರಯತ್ನಿಸಬೇಕು ಎಂದು ತಾತ್ಪರ್ಯ.

**ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣೈಕ ಬಿಂದುನಾ ।**
**ಮನಸೋ ನಿಗ್ರಹಸ್ತ ದ್ವದ್ಭವೇದಪರಿಖೇದತಃ ॥೪೧॥**

**ಕುಶಾಗ್ರೇಣ** = ದರ್ಭೆಯ ತುದಿಯಿಂದ, **ಏಕ ಬಿಂದುನಾ** = ಒಂದೊಂದೇ

ಹನಿಯಾಗಿ, **ಉದಧೇಃ** = ಸಮುದ್ರದ, **ಉತ್ಸೇಕಃ** = ನೀರನ್ನು ಎತ್ತಿಹಾಕಿ ಸಮುದ್ರವನ್ನು ಒಣಗಿಸುವುದು, **ಯದ್ವತ್** = ಹೇಗೋ, **ತದ್ವತ್** = ಹಾಗೆಯೇ **ಅಪರಿಖೇದತಃ** = ವೈರಾಗ್ಯವನ್ನವಲಂಬಿಸಿ ಶ್ರಮಿಸದೆ, **ಮನಸಃ** = ಮನಸ್ಸಿನ, **ನಿಗ್ರಹಃ** = ನಿಗ್ರಹವು, **ಭವೇತ್** = ಆಗುವುದು.

ದರ್ಭೆ ಹುಲ್ಲಿನ ತುದಿಯಿಂದ ಒಂದೊಂದೇ ಹನಿಯನ್ನು ಎತ್ತಿಹಾಕಿ ಸಮುದ್ರವನ್ನು ಒಣಗಿಸಲಾದೀತೆ? ಹಾಗೆ ಮಾಡುವುದಕ್ಕಾಗಿ ಯತ್ನಿಸುವುದು ನಿಷ್ಫಲವೂ ಹಾಸ್ಯಾಸ್ಪದವೂ ಆಗುತ್ತದೆ. ಹಾಗೆಯೇ ವೈರಾಗ್ಯವಿಲ್ಲದೆ ಎಷ್ಟು ಯತ್ನಿಸಿದರೂ ಮನೋನಿಗ್ರಹವು ಸಾಧ್ಯವಾಗುವುದಿಲ್ಲ.ಸರ್ವವಿಧದ ಭೋಗೇಚ್ಛೆಯನ್ನೂ ವರ್ಜಿಸಿ ವೈರಾಗ್ಯವನ್ನು ಸಂಪಾದಿಸಬೇಕು ಭೋಗೇಚ್ಛೆಯನ್ನು ತೊರೆಯುವುದು ಕಷ್ಟ. ಅದಕ್ಕಾಗಿ ತುಂಬ ಕಷ್ಟಪಡಬೇಕಾಗುತ್ತದೆ. ಯಾರ ಮನಸ್ಸು ಹಿಂದೆ ಹೇಳಿದಂತೆ ಬ್ರಹ್ಮಭಾವನೆಯಿಂದ ಲೀನವಾಗಿಬಿಡುವುದಿಲ್ಲವೋ ಅಂತಹ ಮಂದಮಧ್ಯಮ ದೃಷ್ಟಿಯುಳ್ಳ ಮುಮುಕ್ಷುಗಳು ಕಷ್ಟಪಟ್ಟು ವೈರಾಗ್ಯವನ್ನು ದೃಢಪಡಿಸಿಕೊಳ್ಳಬೇಕು. ವೈರಾಗ್ಯವಿಲ್ಲದೆ ಮನೋನಿಗ್ರಹವು ಎಂದಿಗೂ ಶಕ್ಯವಾಗುವುದಿಲ್ಲ.

**ಉಪಾಯೇನ ನಿಗೃಹ್ಣೀಯಾದ್ವಿಕ್ಷಿಪ್ತಂ ಕಾಮಭೋಗಯೋಃ |**
**ಸುಪ್ರಸನ್ನಂ ಲಯೇ ಚೈವ ಯಥಾ ಕಾಮೋ ಲಯಸ್ತಥಾ ||೪೨||**

**ಕಾಮಭೋಗಯೋಃ** = ಕಾಮ ಮತ್ತು ಇತರ ಭೋಗ್ಯವಸ್ತುಗಳಲ್ಲಿ, **ವಿಕ್ಷಿಪ್ತಂ** = ನೆಟ್ಟು ಹೋದ ಮನಸ್ಸನ್ನು, **ಉಪಾಯೇನ** = ಮುಂದೆ ಹೇಳುವ ಉಪಾಯದಿಂದ, **ನಿಗೃಹ್ಣೀಯಾತ್** = ನಿಗ್ರಹಿಸಿ ಆತ್ಮನಲ್ಲಿರಿಸಬೇಕು. **ಲಯೇ** = ಸುಷುಪ್ತಿಯಲ್ಲಿ, **ಸುಪ್ರಸನ್ನಂ** = ಭೋಗಾದಿಗಳ ಅಪೇಕ್ಷೆ ಇಲ್ಲದೆ, ಶಾಂತನಾಗುವ ಮನಸ್ಸನ್ನೂ ಸಹ **ನಿಗೃಹ್ಣೀಯಾತ್** = ನಿಗ್ರಹಿಸಬೇಕು. ಏಕೆಂದರೆ **ಕಾಮಃ ಯಥಾ** = ಕಾಮವು ಹೇಗೆ ಅನರ್ಥಕ್ಕೆ ಕಾರಣವೋ, **ತಥಾ** = ಹಾಗೆಯೇ, **ಲಯಃ** = ಸುಷುಪ್ತಿಯೂ ಸಹ ಅನರ್ಥಕ್ಕೆ ಕಾರಣವಾಗುತ್ತದೆ.

**'ಲೀಯತೇ ಮನಃ ಅಸ್ಮಿನ್ನಿತಿ ಲಯಃ'** ಎಂದು ಲಯಶಬ್ದದ ವ್ಯುತ್ಪತ್ತಿ. ಸುಷುಪ್ತಿಯಲ್ಲಿ ಮನಸ್ಸು ಯಾವ ಚಿಂತೆಯನ್ನೂ ಮಾಡದೆ ನಿಶ್ಚೇಷ್ಟವಾಗುವುದರಿಂದ ಸುಷುಪ್ತಿಗೆ ಲಯವೆಂದೂ ಹೆಸರು.

ಮನೋನಿಗ್ರಹವು ಸುಲಭವಾಗಿ ಪ್ರಾಪ್ತವಾಗತಕ್ಕದ್ದಲ್ಲ. ನಿಗ್ರಹಮಾರ್ಗವನ್ನು ಮುಂದೆ ತಿಳಿಸಲಾಗುವುದು. ನಾನಾ ಜನ್ಮಗಳ ಸಂಸ್ಕಾರದೋಷಾದಿಗಳಿಂದ ಮನಸ್ಸುರಾಗದ್ವೇಷಾದಿಗಳಿಂದ ಕೂಡಿ ವಿಷಯಚಿಂತನೆಯಲ್ಲಿಯೇ ಮುಳುಗಿರುತ್ತದೆ. ಅದನ್ನು ಎಳೆದು ಮೇಲೆತ್ತಿ ಆತ್ಮಚಿಂತನೆಯಲ್ಲಿ ತೊಡಗಿಸಬೇಕು. ಆತ್ಮ

ನಲ್ಲಿಯೇ ಮನಸ್ಸನ್ನು ಹಿಡಿದು ನಿಲ್ಲಿಸುವುದೇ ಮನೋನಿಗ್ರಹ. ಸುಷುಪ್ತಿಯಲ್ಲಿ ಮನಸ್ಸು ವಿಷಯ ಚಿಂತನೆಯಲ್ಲಿ ಮುಳುಗಿ ಕಲುಷವಾಗಿರುವುದಿಲ್ಲ. ಅದನ್ನೂ ನಿಗ್ರಹಿಸಬೇಕೆಂದು ಕಾರಿಕೆಯಲ್ಲಿ ಹೇಳಿದೆ. ನಿದ್ರೆಯಲ್ಲಿ ಮನಸ್ಸನ್ನು ನಿಗ್ರಹಿಸುವುದೆಂದರೇನು? ಕ್ರಮೇಣ ನಿದ್ರೆಯನ್ನೂ ಕಡಿಮೆ ಮಾಡುತ್ತ ಮನಸ್ಸನ್ನು ಆತ್ಮಧ್ಯಾನದಲ್ಲಿ ತೊಡಗಿಸಿ ಸಮಾಧಿಸ್ಥನಾಗಬೇಕೆಂದು ಅಭಿಪ್ರಾಯ. ನಿದ್ರೆಯೂ ಸಹ ಕಾಮಭೋಗದಂತೆ ಅನರ್ಥಕಾರಿಯೆಂದು ಕಾರಿಕೆಯಲ್ಲಿಯೇ ಹೇಳಿದೆ. ಅತಿನಿದ್ರೆಯೂ ಇಲ್ಲಿ ನಿಷಿದ್ಧವಾಗಿದೆ ಎಂದು ತಿಳಿಯಬೇಕು. ನಿದ್ರಾಕಾಲದಲ್ಲಿ ಮನಸ್ಸು ಆತ್ಮಧ್ಯಾನದಿಂದ ವಿಮುಖವಾಗಿರುತ್ತದೆ. ಇದರಿಂದ ಕಾಲಹರಣವಾಗುವುದಲ್ಲದೆ, ಎಚ್ಚೆತ್ತ ಮನಸ್ಸು ಹೊಸಹುರುಪಿನಿಂದ ಭೋಗದ ಕಡೆಗೆ ಹೊರಳಬಹುದು. ನಿದ್ರೆಯು ತಮೋಗುಣಜನ್ಯವಾದ್ದರಿಂದ ತಮಸ್ಸಿನ ಸಹವಾಸ ಒಳ್ಳೆಯದಲ್ಲವೆಂದೂ ಆಶಯವನ್ನು ಹೇಳಬಹುದು.

**ದುಃಖಂ ಸರ್ವಮನುಸ್ಮೃತ್ಯ ಕಾಮಭೋಗಾನ್ನಿವರ್ತಯೇತ್ ।**
**ಅಜಂ ಸರ್ವಮನುಸ್ಮೃತ್ಯ ಜಾತಂ ನೈವ ತು ಪಶ್ಯತಿ ॥೪೩॥**

**ಸರ್ವಂ** = ಗೋಚರವಾಗುವ ಸಮಸ್ತ ದ್ವೈತ ವಸ್ತುವೂ, **ದುಃಖಂ** = ದುಃಖಜನಕವೆಂಬುದನ್ನು, **ಅನುಸ್ಮೃತ್ಯ** = ಮನಸ್ಸಿಗೆ ತಂದುಕೊಂಡು, **ಕಾಮಭೋಗಾತ್** = ಕಾಮನೆಯಿಂದುಂಟಾಗುವ ಭೋಗವಿಷದಿಂದ ಮನಸ್ಸನ್ನು, **ನಿವರ್ತಯೇತ್** = ಹಿಂದಕ್ಕೆ ಸರಿಸಬೇಕು. **ಸರ್ವಂ** = ಗೋಚರಿಸುವ ಸಮಸ್ತ ವಸ್ತುವೂ, **ಅಜಂ** = ಬ್ರಹ್ಮವೆಂಬುದನ್ನು, **ಅನುಸ್ಮೃತ್ಯ** = ಸ್ಮರಣೆಗೆ ತಂದುಕೊಂಡಾಗ, **ದ್ವೈತಂ** = ದ್ವೈತ ವಸ್ತುವನ್ನು, **ನೈವತು ಪಶ್ಯತಿ** = ಆತನು ಎಂದೆಂದಿಗೂ ಕಾಣುವುದೇ ಇಲ್ಲ.

ಮನೋನಿಗ್ರಹದ ಉಪಾಯವಾವುದೆಂದರೆ, ಭೋಗವಸ್ತುವೆಂದು ತಿಳಿದ ಸಮಸ್ತ ಪದಾರ್ಥಗಳೂ ಪರಿಣಾಮದಲ್ಲಿ ದುಃಖವನ್ನೇ ತರುತ್ತವೆಯೆಂಬುದು ನಿಶ್ಚಿತವಾಗಿದೆ. ಈ ವಿಚಾರವನ್ನು ಸ್ಮರಣೆಗೆ ತಂದುಕೊಂಡು ವೈರಾಗ್ಯ ಭಾವನೆಯಿಂದ ಭೋಗೇಚ್ಛೆಯನ್ನು ದೂರಮಾಡಬೇಕು. ಈ ಭೋಗವಸ್ತುಗಳೆಲ್ಲವೂ ದುಃಖಕ್ಕೆ ಕಾರಣಗಳೆಂದು ಭಗವದ್ಗೀತೆಯಲ್ಲಿಯೂ ಹೇಳಿದೆ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥** (ಗೀತಾ ೫–೨೨)

ಯೋಗಸೂತ್ರದಲ್ಲಿ **''ಪರಿಣಾಮ ತಾಪಸಂಸ್ಕಾರ ದುಃಖೈರ್ಗುಣ ವೃತ್ತಿ ವಿರೋಧಾಚ್ಚ ದುಃಖಮೇವ ಸರ್ವಂ ವಿವೇಕಿನಃ''** (೨–೧೫) ಎಂದು ಹೇಳಿದ್ದಾರೆ. ಈ ದ್ವೈತವೆಲ್ಲವೂ ಅಜ್ಞಾನ ವಿಜೃಂಭಿತವೆಂದು ನಿಶ್ಚಯಿಸಿ,

ಶಾಸ್ತ್ರಾಚಾರ್ಯೋಪದೇಶದಿಂದ ತಿಳಿದಾಗ, ಆತನಿಗೆ ದ್ವೈತವಾವುದೂ ಗೋಚರಿಸು ವುದೇ ಇಲ್ಲ. ಏಕೆಂದರೆ, ಅದು ಇಲ್ಲವೇ ಇಲ್ಲ! ಇದ್ದರಲ್ಲವೆ ಗೋಚರಿಸಬೇಕು? **'ಬ್ರಹ್ಮೈವೇದಂ ಸರ್ವಂ''** ಎಂದು ಸದಾ ಭಾವಿಸುತ್ತಿರುವುದು ಮನೋನಿಗ್ರಹಕ್ಕೆ ಒಂದು ಉಪಾಯ.

**ಲಯೇ ಸಂಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ ಪುನಃ ।**
**ಸಕಷಾಯಂ ವಿಜಾನೀಯಾತ್ ಸಮಪ್ರಾಪ್ತಂ ನ ಚಾಲಯೇತ್ ॥೪೪॥**

**ಲಯೇ** = ನಿದ್ರೆಯಲ್ಲಿ ಆಸಕ್ತವಾದ, **ಚಿತ್ತಂ** = ಮನಸ್ಸನ್ನು, **ಸಂಬೋಧಯೇತ್** = ಆತ್ಮ ವಿಚಾರವನ್ನು ಮಾಡುವಂತೆ ಎಚ್ಚರಿಸುತ್ತಿರಬೇಕು. **ವಿಕ್ಷಿಪ್ತಂ** = ಕಾಮಭೋಗಗಳಲ್ಲಿ ತೊಡಗುವ ಮನಸ್ಸನ್ನು, **ಪುನಃ** = ಮತ್ತೆ **ಶಮಯೇತ್** = ತೊಡಗದಂತೆ ಶಾಂತಗೊಳಿಸಬೇಕು. **ಸಕಷಾಯಂ** = ಆಗ ಮನಸ್ಸಿನಲ್ಲಿ ಇನ್ನೂ ಭೋಗಸಂಸ್ಕಾರ ಉಳಿದಿದೆಯೆಂಬುದನ್ನು, **ವಿಜಾನೀಯಾತ್** = ಗಮನಿಸಬೇಕು. **ಸಮಪ್ರಾಪ್ತಂ** = ವಶಕ್ಕೆ ಬರುತ್ತಿರುವ ಮನಸ್ಸನ್ನು, **ನ ಚಾಲಯೇತ್** = ಮತ್ತೆ ಹಿಂದಕ್ಕೆ ಸರಿಯದಂತೆ ನೋಡಿಕೊಳ್ಳಬೇಕು.

ಜ್ಞಾನಾಭ್ಯಾಸ ವೈರಾಗ್ಯಗಳೆಂಬ ಉಪಾಯಗಳನ್ನು ಮುಂದುವರಿಸುತ್ತ ಹೆಚ್ಚಾಗಿ ಆತ್ಮಚಿಂತನೆಯಲ್ಲಿ ತೊಡಗಿರತಕ್ಕದ್ದು. ಅತ್ಯಾಹಾರ ಅತಿಶ್ರಮಾದಿಗಳಿಂದ ನಿದ್ರೆಯು ಅಧಿಕವಾಗದಂತೆ ನೋಡಿಕೊಳ್ಳುವುದು ಆವಶ್ಯಕ. ನಿದ್ರೆಯಿಂದ ಆತ್ಮಚಿಂತನೆಯು ಕಡಿಮೆಯಾಗದಂತೆ ಎಚ್ಚರವಹಿಸಬೇಕು. ಮನಸ್ಸು ಬಹುಚಂಚಲವಾದ್ದರಿಂದ ಆಗಾಗ ಹತೋಟಿ ತಪ್ಪಿ ವಿಷಯ ಸುಖದ ಕಡೆಗೆ ಬಾಗಬಹುದು. ಕೂಡಲೇ ಎಚ್ಚೆತ್ತು ಮನಸ್ಸನ್ನು ನಿಗ್ರಹಿಸಿ ತಡೆಯಬೇಕು. ಆಗಾಗ ಸುಖದ ಕಡೆಗೆ ಬಾಗುವ ಮನಸ್ಸು ಇನ್ನೂ ಶುದ್ಧವಾಗಲಿಲ್ಲವೆಂಬುದನ್ನು ಮನಗಂಡು ಮತ್ತಷ್ಟು ಪ್ರಯತ್ನ ದಿಂದ ಅದನ್ನು ತಡೆಯಬೇಕು. ಹೀಗೆ ಪ್ರಯತ್ನವನ್ನು ಮುಂದುವರಿಸುತ್ತಿದ್ದರೆ, ಮನಸ್ಸು ವಶಕ್ಕೆ ಬರುತ್ತಿದೆಯೆಂಬುದು ಗೊತ್ತಾಗುತ್ತದೆ. ಆಗ ಮತ್ತಷ್ಟು ಎಚ್ಚರವನ್ನು ವಹಿಸಿ ಮನಸ್ಸು ಪುನಃ ಹಿಂದಕ್ಕೆ ಜಾರದಂತೆ ಬಿಗಿ ಹಿಡಿಯಬೇಕು.

**ನಾಸ್ವಾದಯೇತ್ ಸುಖಂ ತತ್ರ ನಿಃಸಂಗಃ ಪ್ರಜ್ಞಯಾ ಭವೇತ್ ।**
**ನಿಶ್ಚಲಂ ನಿಶ್ಚರಚ್ಚಿತ್ತಮೇಕೀ ಕುರ್ಯಾತ್ ಪ್ರಯತ್ನತಃ ॥೪೫॥**

**ತತ್ರ** = ಮನಸ್ಸು ಸಮಸ್ಥಿತಿಯನ್ನು ಪಡೆಯುತ್ತಿರುವಾಗ, **ಸುಖಂ** = ಪ್ರಾಪ್ತವಾಗುವ ಕಿಂಚಿತ್ ಸುಖವನ್ನು, **ನಾಸ್ವಾದಯೇತ್** = ಆಸ್ವಾದಿಸುತ್ತ ಇದ್ದು ಬಿಡಬಾರದು. **ಪ್ರಜ್ಞಯಾ** = ವಿವೇಕ ಬುದ್ಧಿಯಿಂದ **ನಿಸ್ಸಂಗಃ** = ಆ ಸುಖದ ಸಂಗವನ್ನು ತ್ಯಜಿಸತಕ್ಕವನು, **ಭವೇತ್** = ಆಗಬೇಕು. **ನಿಶ್ಚಲಂ** = ಆತ್ಮನಲ್ಲಿ ನಿಶ್ಚಲವಾಗಿ ನಿಂತಿದ್ದರೂ, **ನಿಶ್ಚರತ್** = ಬಾಹ್ಯವಿಷಯದ ಕಡೆಗೆ ಹೊರಳುವ,

**ಚಿತ್ತಂ** = ಮನಸ್ಸನ್ನು, **ಪ್ರಯತ್ನತಃ** = ಪ್ರಯತ್ನ ಪೂರ್ವಕವಾಗಿ, **ಏಕೀಕುರ್ಯಾತ್** = ಆತ್ಮನಲ್ಲಿಯೇ ನಿಂತು ಏಕವಾಗುವಂತೆ ಮಾಡಬೇಕು.

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ ಸಮಸ್ಥಿತಿಯನ್ನು ಪಡೆಯುವಾಗ ಒಂದು ಬಗೆಯ ಆನಂದವು ಬರುತ್ತದೆ. ಅಷ್ಟನ್ನೇ ಅನುಭವಿಸುತ್ತ ಸುಮ್ಮನಾಗಬಾರದು. ವಿಷಯ ಸುಖದ ನಿವೃತ್ತಿಯಿಂದ ಬಂದ ಕ್ಷಣಿಕವಾದ ಆನಂದ ಅದು. ಅವಿದ್ಯಾಪರಿಕಲ್ಪಿತವಾದ ಮಿಥ್ಯಾನಂದವದು. ಸತ್ತ್ವಗುಣದಿಂದ ಬಂದದ್ದು.

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ (ಗೀತಾ. ೧೪–೬)**

ಎಂಬ ಗೀತಾವಚನದಂತೆ ಬಂಧಕವಾದದ್ದು. ಆದ್ದರಿಂದ ವಿವೇಕ ಬುದ್ಧಿಯನ್ನವಲಂಬಿಸಿ ಇನ್ನೂ ಮುಂದುವರಿದು ಆತ್ಮನಲ್ಲಿಯೇ ಮನಸ್ಸು ನೆಟ್ಟುಹೋಗಿ ಅಲ್ಲಿಂದ ಚಲಿಸದಂತೆ ಪ್ರಯತ್ನದಿಂದ ಬಿಗಿಹಿಡಿಯಬೇಕು.

**ಯದಾ ನ ಲೀಯತೇ ಚಿತ್ತಂ ನ ಚ ವಿಕ್ಷಿಪ್ಯತೇ ಪುನಃ ।**
**ಅನಿಂಗನಮನಾಭಾಸಂ ನಿಷ್ಪನ್ನಂ ಬ್ರಹ್ಮ ತತ್ತದಾ ॥೪೬॥**

**ಯದಾ** = ಯಾವಾಗ, **ಚಿತ್ತಂ** = ಮನಸ್ಸು, **ನಲೀಯತೇ** = ನಿದ್ರೆಯಿಂದ ಪರವಶವಾಗುವುದಿಲ್ಲವೋ, **ಪುನಃ** = ಮತ್ತೆ, **ನ ವಿಕ್ಷಿಪ್ಯತೇ** = ವಿಷಯಗಳ ಕಡೆಗೆ ಹರಿಯುವುದಿಲ್ಲವೋ, **ಅನಿಂಗನಂ** = ಆತ್ಮನಲ್ಲಿ ಅಚಲವಾಗಿ ನಿಲ್ಲುವುದೋ, **ಅನಾಭಾಸಂ** = ಆತ್ಮಭಿನ್ನವಾದ ವಿಷಯರೂಪದಲ್ಲಿ ತೋರುವುದಿಲ್ಲವೋ, **ತದಾ** = ಆಗ, **ತತ್** = ಆ ಮನಸ್ಸು, **ಬ್ರಹ್ಮ ನಿಷ್ಪನ್ನಂ** = ಬ್ರಹ್ಮವೇ ಆಗಿರುತ್ತದೆ.

ಪೂರ್ವೋಕ್ತವಾದ ವೈರಾಗ್ಯ, ಆತ್ಮವಿವೇಕಾದಿಗಳಿಂದ ಮನಸ್ಸು ಯಾವಾಗ ನಿದ್ರೆಗೂ ವಶವಾಗುವುದಿಲ್ಲವೋ, ವಿಷಯಗಳ ಕಡೆಗೆ ಚಲಿಸುವುದೇ ಇಲ್ಲವೋ, ನಿರ್ವಾತ ದೀಪದಂತೆ ಸ್ಥಿರವಾಗಿ ಆತ್ಮನಲ್ಲಿ ನಿಲ್ಲುವುದೋ, ಮನಸ್ಸು ಎಂಬುದೊಂದು ವಿಷಯ ವಸ್ತುವಾಗಿಯೇ ತೋರುವುದಿಲ್ಲವೋ ಆಗ ಆ ಮನಸ್ಸು ಬ್ರಹ್ಮವೇ ಆಗಿದೆ ಯೆಂದು ತಿಳಿಯಬೇಕು.

**ಸ್ವಸ್ಥಂ ಶಾಂತಂ ಸನಿರ್ವಾಣಮಕಥ್ಯಂ ಸುಖಮುತ್ತಮಮ್ ।**
**ಅಜಮಜೇನ ಜ್ಞೇಯೇನ ಸರ್ವಜ್ಞಂ ಪರಿಚಕ್ಷತೇ ॥೪೭॥**

**ಉತ್ತಮಂ ಸುಖಂ** = ಈ ಪರಮಾರ್ಥವಾದ ಸುಖವು, **ಸ್ವಸ್ಥಂ** = ಆತ್ಮರೂಪವಾದ ತನ್ನಲ್ಲಿಯೇ ಇರತಕ್ಕದ್ದು. **ಶಾಂತಂ** = ಸರ್ವಾನರ್ಥಗಳ ಉಪಶಮರೂಪವಾದದ್ದು. **ಸನಿರ್ವಾಣಂ** = ಕೈವಲ್ಯಯುಕ್ತವಾದದ್ದು. (ಕೈವಲ್ಯಸ್ವರೂಪ

ವಾದದ್ದು) **ಅಕಥ್ಯಂ** = ಶಬ್ದದಿಂದ ವರ್ಣಿಸಲು ಅಶಕ್ಯವಾದದ್ದು. **ಅಜಂ** = ಸ್ವತಃ ಅನುತ್ಪನ್ನವಾಗಿದ್ದು, **ಅಜೇನ** = ಅನುತ್ಪನ್ನವಾದ, **ಜ್ಞೇಯೇನ** = ಸ್ವ ಸ್ವರೂಪವಾದ ಜ್ಞೇಯದಿಂದ ಅಭಿನ್ನವಾದದ್ದು, **ಸರ್ವಜ್ಞಂ** = ಸರ್ವಜ್ಞವಾದ ಬ್ರಹ್ಮವೇ ಎಂದು, **ಪರಿಚಕ್ಷತೇ** = ಬ್ರಹ್ಮವಿದರು ಹೇಳುತ್ತಾರೆ.

ಪರಮಾರ್ಥವಾದ ಈ ಮೋಕ್ಷಾನಂದವು ಆತ್ಮಸ್ವರೂಪವೇ ಆಗಿರುತ್ತದೆ. ಇದಕ್ಕೆ ಹೋಲಿಕೆಯಾದದ್ದು ನಿರ್ವಾಣವೇ–ಮೋಕ್ಷವೇ. ಶಬ್ದಗಳಿಂದ ವರ್ಣಿಸಲು ಸಾಧ್ಯವಾದದ್ದಲ್ಲ. ಏಕೆಂದರೆ, ಇದಕ್ಕೆ ಸದೃಶವಾದದ್ದು ಇನ್ನೊಂದಿಲ್ಲ. ಬೆಲ್ಲ, ಸಕ್ಕರೆ, ಜೇನು – ಇವುಗಳ ಸಿಹಿಯ ವ್ಯತ್ಯಾಸವನ್ನು ಶಬ್ದದಿಂದ ಹೇಳಲಾದೀತೆ? ಹಾಗೆಯೇ ಈ ಪರಮಾನಂದವು ಅನುಭವಿಸಿದವರಿಗೆ ಮಾತ್ರ ತಿಳಿಯತಕ್ಕದ್ದು. ಇದು ವಿಷಯಗಳ ಸಂಯೋಗದಿಂದ ಹುಟ್ಟಿದ್ದಲ್ಲ. ಆದ್ದರಿಂದ ಬ್ರಹ್ಮಾನಂದವೆನಿಸಿದೆ. ಇದು ಜನ್ಯವಾದದ್ದೇ ಅಲ್ಲ. ಜನ್ಯವಾದರೆ ನಾಶವಿರಬೇಕಾದೀತು. ಹಾಗೆ ನಾಶವಾಗತಕ್ಕದ್ದಲ್ಲ. ಇದು ಆತ್ಮವೇ ಆದ್ದರಿಂದ ಸರ್ವವೂ ಜ್ಞಸ್ವರೂಪವೂ ಆಗಿದೆ. ಮಾಯಾ ಕಲ್ಪಿತವಾದ ವಿಶ್ವವೆಲ್ಲವನ್ನೂ ಅರಿತಿರುವುದರಿಂದ ಸರ್ವಜ್ಞವೂ ಹೌದು.

**ನ ಕಶ್ಚಿಜ್ಜಾಯತೇ ಜೀವಃ ಸಂಭವೋಽಸ್ಯ ನ ವಿದ್ಯತೇ ।**
**ಏತತ್ತದುತ್ತಮಂ ಸತ್ಯಂ ಯತ್ರ ಕಿಂಚಿನ್ನ ಜಾಯತೇ ॥೪೮॥**

**ಜೀವಃ ಕಶ್ಚಿತ್** = ಯಾವ ಜೀವವೂ ಹುಟ್ಟುವುದಿಲ್ಲ. **ಅಸ್ಯ** = ಈ ಜೀವಕ್ಕೆ, **ಸಂಭವಃ** = ಉತ್ಪತ್ತಿಕಾರಣವಾದ ಸಾಮಗ್ರಿಯೂ, **ನ ವಿದ್ಯತೇ** = ಇರುವುದಿಲ್ಲ. **ಏತತ್** = ಸರ್ವವೂ ಅಜವಾದ ಬ್ರಹ್ಮವೇ ಎಂಬ ಈ ಸತ್ಯವು, **ತದುತ್ತಮಂ ಸತ್ಯಂ** = ಆ ಉತ್ತಮವಾದ ಸತ್ಯವಾಗಿದೆ. **ಯತ್ರ** = ಯಾವ ಈ ಬ್ರಹ್ಮದಲ್ಲಿ **ಕಿಂಚಿನ್ನ ಜಾಯತೇ** = ಅಣುಮಾತ್ರವೂ ಹುಟ್ಟುವುದಿಲ್ಲವೋ ಅದೇ ಇದು.

ಹಿಂದೆ ಹೇಳಿದ ಮಾರ್ಗೋಪಾಯಗಳೆಲ್ಲವೂ ವ್ಯಾವಹಾರಿಕವಾದ ಸತ್ಯಗಳು. ಮನಸ್ಸು, ನಿಗ್ರಹ, ಸಾಧಕ – ಮುಂತಾದದ್ದು ಸಾಧನ ಸ್ಥಿತಿಯಲ್ಲಿ ಸತ್ಯವೆಂದು ತಿಳಿಯಬೇಕು. ಪರಮಾರ್ಥ ಸತ್ಯದಲ್ಲಿ ಅವೆಲ್ಲವೂ ಮಿಥ್ಯೆಗಳೇ. ಕರ್ತಾ, ಭೋಕ್ತಾ – ಎನಿಸಿದ ಜೀವನು ಹುಟ್ಟುವುದೇ ಇಲ್ಲ. ಅವಿದ್ಯೆಯಿಂದ ಅಧ್ಯಾರೋಪಿತವಾದ ಪದಾರ್ಥಗಳಿವು. ಅವಿದ್ಯೆಯನ್ನು ತೊಲಗಿಸುವುದಕ್ಕಾಗಿ ಈ ಮಾರ್ಗೋಪಾಯಗಳನ್ನು ಹೇಳಬೇಕಾಯಿತು. **''ಅಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ''** (ಬೃಹ ೨–೧–೨೦). **'ಸತ್ಯಂ ಜ್ಞಾನಮನಂತಂ ಬ್ರಹ್ಮ''** (ತೈತ್ತಿ ೨–೧). ಇತ್ಯಾದಿ ಶ್ರುತಿಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

ಇಲ್ಲಿಗೆ ಮೂರನೆಯ ಅದ್ವೈತ ಪ್ರಕರಣವು ಸಮಾಪ್ತವಾಯಿತು.

## ಅಲಾತ ಶಾಂತಿ ಪ್ರಕರಣ – ೪

ಮೊದಲನೆಯ ಆಗಮ ಪ್ರಕರಣದಲ್ಲಿ ಅವಸ್ಥಾತ್ರಯ ಪರೀಕ್ಷೆಯನ್ನು ಮಾಡಲಾಗಿದೆ. ಎಚ್ಚರ, ಕನಸು, ಗಾಢ ನಿದ್ರೆಗಳಲ್ಲಿ ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ ಎಂದು ಹೆಸರುಗಳನ್ನು ಪಡೆದ ಸೋಪಾಧಿಕನಾದ ಆತ್ಮನು ಒಬ್ಬನೇ ಎಂದೂ ಉಪಾಧಿರಹಿತನಾದಾಗ ಆತನೇ ಅದ್ವಯಾತ್ಮನೆಂದೂ ತುರೀಯನೆಂದೂ ಹೇಳಲಾಯಿತು. ಅನಂತರ ಎರಡನೆಯ ವೈತಥ್ಯ ಪ್ರಕರಣದಲ್ಲಿ ಎಚ್ಚರದಲ್ಲಿ ಕಾಣುವ ಬಾಹ್ಯದೃಶ್ಯಗಳೂ ಕನಸಿನಲ್ಲಿ ಮನಸ್ಸಿಗೆ ಮಾತ್ರ ದೃಶ್ಯವಾದ ಅಂತರ್ದೃಶ್ಯವೂ ವಿತಥವೆಂದು ಪ್ರತಿಪಾದಿಸಿ ಆತ್ಮನೊಬ್ಬನೇ ಸತ್ಯನೆಂದು ಅದ್ವೈತವನ್ನು ಪ್ರತಿಪಾದಿಸಲಾಯಿತು. ಮೂರನೆಯ ಅದ್ವೈತಪ್ರಕರಣದಲ್ಲಿ ಶಾಸ್ತ್ರದಿಂದ ಮಾತ್ರವಲ್ಲ ಯುಕ್ತಿಗಳಿಂದಲೂ ಅದ್ವೈತವು ಸಿದ್ಧಾಂತವಾಗಿ ನಿಲ್ಲುವುದೆಂದು ತೋರಿಸಿದ್ದಾಗಿದೆ.

ಈಗ ನಾಲ್ಕನೆಯ ಅಲಾತಶಾಂತಿಪ್ರಕರಣ ಅಲಾತವೆಂದರೆ ದೊಂದಿ, ಪಂಜು, ಕೊಳ್ಳಿ ಎಂದರ್ಥ. ಅದರ ತುದಿಯಲ್ಲಿ ಬೆಂಕಿ ಇರುತ್ತದೆ. ಪಂಜನ್ನು ತಿರುಗಿಸುತ್ತಿದ್ದರೆ ದುಂಡನೆಯ ಒಂದು ಚಕ್ರವೆಂಬಂತೆ ಕಾಣುತ್ತದೆ. ಹೀಗೆ ನಾನಾ ಪ್ರಾಕಾರವಾಗಿ ತಿರುಗಿಸಿ ಜನರಿಗೆ ಭ್ರಾಂತಿಯನ್ನುಂಟು ಮಾಡಬಹುದು. ಹಾಗೆಯೇ ಏಕಮೇವಾ– ದ್ವಿತೀಯನಾದ ಆತ್ಮನಲ್ಲಿ ಲೆಕ್ಕವಿಲ್ಲದಷ್ಟು ದೃಶ್ಯಗಳು ಗೋಚರಿಸುತ್ತವೆ. ಅವೆಲ್ಲವೂ ಸತ್ಯವೆಂಬ ಭ್ರಾಂತಿ ಜನರಿಗಿದೆ. ಅಂತೆಯೇ ನಾನಾ ಬಗೆಯ ದ್ವೈತಮತಗಳು ಹುಟ್ಟಿಕೊಂಡು ಜನರನ್ನು ಭ್ರಾಂತರನ್ನಾಗಿ ಮಾಡಿಬಿಟ್ಟಿವೆ. ಇದೆಲ್ಲವೂ ಮಾಯಾ ಶಕ್ತಿಯ ಕೈವಾಡ. ಲೋಕದಲ್ಲಿ ಅಲಾತಚಕ್ರವು ವಿನೋದಕರವಾಗಿದ್ದರೆ, ಈ ಮಾಯಾಶಕ್ತಿಯ ಕೈವಾಡವು ಭೀಕರ. ಆದ್ದರಿಂದ ಎಲ್ಲ ಶಂಕೆಗಳಿಗೂ ಎಲ್ಲ ಮತಗಳಿಗೂ ಉತ್ತರವನ್ನಿತ್ತು, ಅಲಾತವೆಂಬ ಮಾಯಾಚಕ್ರದ ಹಾರಾಟವನ್ನು ಶಾಂತಗೊಳಿಸಿ ವೇದಾಂತಸಿದ್ಧಾಂತವನ್ನು ಪ್ರತಿಷ್ಠಾಪಿಸುವುದಕ್ಕಾಗಿ ಈ ಅಲಾತಶಾಂತಿ ಪ್ರಕರಣವು ಪ್ರಸ್ತುತವಾಗಿದೆ.

**ಜ್ಞಾನೇನಾಕಾಶಕಲ್ಪೇನ ಧರ್ಮಾನ್ ಯೋ ಗಗನೋಪಮಾನ್ ।**
**ಜ್ಞೇಯಾಭಿನ್ನೇನ ಸಂಬುದ್ಧಸ್ತಂ ವಂದೇ ದ್ವಿಪದಾಂ ವರಮ್ ॥೧॥**

**ಜ್ಞೇಯಾಭಿನ್ನೇನ** = ಜ್ಞೇಯವಾದ ಆತ್ಮಸ್ವರೂಪಕ್ಕೆ ವ್ಯತಿರಿಕ್ತವಾಗದ ಮತ್ತು **ಆಕಾಶಕಲ್ಪೇನ** = ಆಕಾಶದಂತೆ ಸರ್ವಗತವಾದ **ಜ್ಞಾನೇನ** = ಪರಿಶುದ್ಧ ಜ್ಞಾನದಿಂದ, **ಗಗನೋಪಮಾನ್** = ಆಕಾಶದಂತೆ ಸರ್ವತ್ರ ಇರುವ, **ಧರ್ಮಾನ್** = ಜೀವಾತ್ಮರನ್ನೂ ಘಟಪಟಾದಿ ವಸ್ತುಗಳನ್ನೂ **ಯಃ** =

ಯಾವಾತನು, **ಸಂಬುದ್ಧಃ** = ತಿಳಿದಿರುವನೋ, **ತಂ ದ್ವಿಪದಾಂ ವರಂ** = ಆ ಪುರುಷ ಶ್ರೇಷ್ಠನನ್ನು **ವಂದೇ** = ನಮಸ್ಕರಿಸುತ್ತೇನೆ.

ಇದು ನಾಲ್ಕನೆಯ ಪ್ರಕರಣದ ಆದಿಯಲ್ಲಿ ಬಂದಿರುವ ಮಂಗಳ ಶ್ಲೋಕ ಗುರುವಂದನಾರೂಪವಾದದ್ದು. ಗ್ರಂಥದ ಮಧ್ಯದಲ್ಲಿಯೂ ಮಂಗಳವನ್ನಾಚರಿಸುವ ಪದ್ಧತಿಯುಂಟು. **''ಮಂಗಲಾದೀನಿ ಮಂಗಲಮಧ್ಯಾನಿ ಮಂಗಲಾಂತಾನಿ ಶಾಸ್ತ್ರಾಣಿ ಪ್ರಥಂತೇ''** ಎಂದು ವ್ಯಾಕರಣ ಮಹಾಭಾಷ್ಯಕಾರರಾದ ಪತಂಜಲಿ ಮುನಿಗಳು ಹೇಳಿದ್ದಾರೆ. ಶ್ರೀ ಗೌಡಪಾದರ ಗುರುಗಳ ಜ್ಞಾನವು ಆಕಾಶಕಲ್ಪ ವಾದದ್ದು. ಸರ್ವವನ್ನೂ ವಿಷಯೀಕರಿಸಬಲ್ಲ ಪರಮೋತ್ತಮ ಜ್ಞಾನ. ಅದು ಜ್ಞೇಯಗಳಿಗೆ ಅಭಿನ್ನವಾದದ್ದು. ಜ್ಞೇಯವಾದವು ಸಕಲ ಜೀವಾತ್ಮಗಳು. ಪರಮಾರ್ಥದಲ್ಲಿ ಇವೆಲ್ಲವೂ ಒಬ್ಬನೇ ಪರಮಾತ್ಮನಾಗುತ್ತಾನೆ. ಪರಮಾತ್ಮನು ಜ್ಞಾನ ಸ್ವರೂಪನೇ. ಗುರುಗಳ ಜ್ಞಾನವೂ ಆತ್ಮಸ್ವರೂಪ. ಇಲ್ಲಿ ಜ್ಞಾನ ಜ್ಞೇಯ ಎಂಬ ಭೇದ ಹೇಗೆ? ಹೇಗೆಂದರೆ, ಅಗ್ನಿಯ ಉಷ್ಣತೆ, ಸೂರ್ಯನ ಪ್ರಕಾಶ ಎಂಬಂತೆ, ಅಗ್ನಿಯೇ ಉಷ್ಣತೆ, ಸೂರ್ಯನೇ ಪ್ರಕಾಶವಾದರೂ ಕಿಂಚಿದ್ ಭೇದವನ್ನು ಕಲ್ಪಿಸಿ ಹಾಗೆ ವ್ಯವಹಾರ ಬಂದಿರುತ್ತದೆ. ಈ ಭೇದವು ಪರಮಾರ್ಥದಲ್ಲಿ ಒಂದೇ ಆದ್ದರಿಂದ, ಜ್ಞೇಯಾಭಿನ್ನವಾದ ಜ್ಞಾನ ಎಂದು ಕಾರಿಕೆಯಲ್ಲಿ ಹೇಳಿದೆ. ಘಟಪಟಾದಿ ವಸ್ತುಗಳೂ **'ಸರ್ವ ಖಲ್ವಿದಂ ಬ್ರಹ್ಮ'** ಎಂಬ ವಚನದಂತೆ ಆತ್ಮಸ್ವರೂಪಗಳೇ ಎಂದು ಹಿಂದೆ ತಿಳಿಸಿದ್ದಾಗಿದೆ.

ಶ್ರೀ ಗೌಡಪಾದರ ಗುರುಗಳು ಯಾರು? 'ದ್ವಿಪದಾಂವರಂ' ಎಂದಿಷ್ಟೇ ಶ್ಲೋಕದಲ್ಲಿದೆ. ದ್ವಿಪಾತ್ ಎಂದರೆ ಎರಡು ಪಾದಗಳುಳ್ಳವನು. ಈ ಶಬ್ದವು ಮನುಷ್ಯ ಎಂಬ ಅರ್ಥದಲ್ಲಿ ರೂಢ. ಮನುಷ್ಯರಲ್ಲಿ ಎಂದರೆ ಪುರುಷರಲ್ಲಿ ಪ್ರಧಾನನಾದವನು. ಪುರುಷೋತ್ತಮ ಎಂದು ತಾತ್ಪರ್ಯ. **'ಈಶ್ವರೋ ನಾರಾಯಣಾಖ್ಯಃ'** ಎಂದು ಭಾಷ್ಯಕಾರರು ಈ ಶಬ್ದಕ್ಕೆ ಅರ್ಥವನ್ನು ಹೇಳಿದ್ದಾರೆ. ನಾರಾಯಣನೆಂದರೆ ಶ್ರೀಮನ್ನಾರಾಯಣ ಅಥವಾ ಆತನ ಅವತಾರವೇ ಆದ ನಾರಾಯಣ ಋಷಿ. ಧರ್ಮನೆಂಬ ಋಷಿಗೆ ಪುತ್ರರಾಗಿ ಅವತರಿಸಿದ ನರನಾರಾಯಣರು ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದರೆಂದೂ ಅವರೀರ್ವರೂ ವಿಷ್ಣುವಿನ ಅವತಾರಗಳೆಂದೂ ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿದೆ (ಮೋ.ಧ. ೩೩೪). ದೇವೀಭಾಗವತದಲ್ಲಿಯೂ ಈ ವಿಷಯವು ಬಂದಿದೆ. ಮಹಾಭಾರತದಲ್ಲಿ ನಾರಾಯಣ ಋಷಿಯನ್ನು **'ದ್ವಿಪದಾಂ ವರಿಷ್ಠಃ'** ಎಂದು ವಿಶೇಷಿಸಿರುವುದು ಗಮನಾರ್ಹ. **'ನಾರಾಯಣಂ ಪದ್ಮಭುವಂ ವಸಿಷ್ಠಂ'**. ಎಂಬ ಸಾಂಪ್ರದಾಯಿಕ ಶ್ಲೋಕಗಳ ಪ್ರಕಾರ ಶುಕ ಮಹರ್ಷಿಗಳು ಶ್ರೀ ಗೌಡಪಾದರ ಗುರುಗಳಾಗುತ್ತಾರೆ. ಹೇಗಿದ್ದರೂ

ಶ್ರೀಮನ್ನಾರಾಯಣನು ಸಂಪ್ರದಾಯ ಪ್ರವರ್ತಕನಾದ ಆದಿಗುರುವಾಗುವುದ ರಿಂದ ಭಾಷ್ಯದಲ್ಲಿ **'ನಾರಾಯಣಾಖ್ಯಃ'** ಎಂದಿರುವುದು ಸಮಂಜಸವಾಗಿದೆ.

ಹೀಗೆ ಜ್ಞೇಯಾಭಿನ್ನವಾದ ಜ್ಞಾನದಿಂದ ಸರ್ವವನ್ನೂ ತಿಳಿದಿರುವ ಸದ್ಗುರು ವನ್ನು ವಂದಿಸುತ್ತೇನೆ ಎಂದು ತಾತ್ಪರ್ಯ. ಜ್ಞಾತೃ ಜ್ಞಾನ ಜ್ಞೇಯ ಭೇದರಹಿತ ವಾದದ್ದು ಪರಮಾರ್ಥತತ್ತ್ವವೆಂದು ತಿಳಿಸಿದಂತಾಯಿತು. ಈ ಮೂರೂ ಪರಸ್ಪರ ಭಿನ್ನವೆಂದು ದ್ವೈತವಾದಿಗಳಾದ ಪ್ರತಿಪಕ್ಷದವರು ಹೇಳುತ್ತಾರೆ. ಈ ಪ್ರತಿಪಕ್ಷ ದವರನ್ನು ಖಂಡಿಸುವುದು ಈ ಅಲಾತಶಾಂತಿ ಪ್ರಕರಣದ ಉದ್ದೇಶವಾಗಿದೆ.

**ಟಿಪ್ಪಣಿ :– ಸಂಬುದ್ಧಃ, ಬುದ್ಧಃ =** ಬುದ್ಧವಾನ್ ಎಂದರ್ಥ. ಬುಧ – ಅವಗಮನೇ ಎಂಬ ದಿವಾದಿ ಧಾತುವಿನ ಮೇಲೆ ಕರ್ತರಿ ಕ್ತ ಪ್ರತ್ಯಯವು ಬಂದಿದೆ. ಈ ಧಾತು ಸಕರ್ಮಕವಾದ್ದರಿಂದ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಬರಬೇಕು. ಕರ್ತ್ರರ್ಥದಲ್ಲಿ ವಿಧಾನಮಾಡುವ ಸೂತ್ರ ಯಾವುದು? ಬುದ್ಧ ಎಂಬಲ್ಲಿ **'ಮತಿ ಬುದ್ಧಿ ಪೂಜಾರ್ಥೇಭ್ಯಶ್ಚ'** ಎಂಬ ಸೂತ್ರದಿಂದ ಕ್ತ ಪ್ರತ್ಯಯ ಬಂದಿದೆಯೆಂದು ಅಮರ ಸುಧಾ ವ್ಯಾಖ್ಯಾನದಲ್ಲಿ ಬರೆದಿದೆ. ಅದೂ ಸಹ ವರ್ತಮಾನಾರ್ಥದಲ್ಲಿ ಭಾವಕರ್ಮಾರ್ಥದಲ್ಲಿಯೇ ವಿಹಿತವಾಗಿದೆ. ಮತಃ, ಪೂಜಿತಃ, ವಿದಿತಃ – ಎಂಬ ಉದಾಹರಣೆಗಳಲ್ಲಿ ಇದು ಸ್ಪಷ್ಟವಾಗಿದೆ. ಆದ್ದರಿಂದ **'ಆದಿಕರ್ಮಣಿಕ್ತಃ ಕರ್ತರಿ ಚ' (ಅಷ್ಟಾ ೩–೪–೭೧)** ಎಂಬ ಸೂತ್ರದಿಂದ ಕರ್ತರಿ 'ಕ್ತ' ಪ್ರತ್ಯಯ ಬಂದಿದೆ. ಕ್ರಿಯೆಯು ಅನೇಕ ವ್ಯಾಪಾರಗಳ ಸಮೂಹ.ಆದಿಯ ಕೆಲವು ವ್ಯಾಪಾರಗಳ ಸಮೂಹಕ್ಕೆ ಆದಿಕರ್ಮವೆಂದು ಹೆಸರು. ಸಮುದಿತಜ್ಞಾನದ ಆದಿಯಲ್ಲಿ ಕೆಲವೇ ವ್ಯಾಪಾರಗಳು ನಡೆದವು ಎಂದು ಅರ್ಥವಾಗುತ್ತದೆ. ಪರಮಜ್ಞಾನದ ಒಂದಂಶ ದಿಂದ ಸಕಲ ವಸ್ತುಗಳನ್ನು ತಿಳಿದವನು ನನ್ನ ಗುರು ಎಂದರ್ಥ.

**ಅಸ್ಪರ್ಶಯೋಗೋ ವೈ ನಾಮ ಸರ್ವಸತ್ತ್ವಸುಖೋ ಹಿತಃ ।**
**ಅವಿವಾದೋಽವಿರುದ್ಧಶ್ಚ ದೇಶಿತಸ್ತಂ ನಮಾಮ್ಯಹಮ್ ॥೨॥**

**ಅಸ್ಪರ್ಶಯೋಗೋ ವೈ ನಾಮ** = ಅಸ್ಪರ್ಶಯೋಗವೆಂದು ಪ್ರಸಿದ್ಧವಾದ ಈ ಅದ್ವೈತದರ್ಶನವು, **ಸರ್ವಸತ್ತ್ವ ಸುಖಃ** = ಸಕಲ ಜೀವಿಗಳಿಗೂ ಸುಖಕರ ವಾದದ್ದು **ಹಿತಃ** = ಹಿತಕರವಾದದ್ದು. **ಅವಿವಾದಃ** = ವಿವಾದ ರಹಿತವಾದದ್ದು. **ಅವಿರುದ್ಧಶ್ಚ** = ಅನ್ಯದರ್ಶನಗಳಿಗೆ ವಿರುದ್ಧವೂ ಅಲ್ಲದ್ದು. ಈ ದರ್ಶನವು, ಶಾಸ್ತ್ರದಿಂದ (ವೇದದಿಂದ) **ದೇಶಿತಃ** = ಉಪದಿಷ್ಟವಾಗಿದೆ. **ತಂ** = ಅಂತಹ ಅಸ್ಪರ್ಶಯೋಗವನ್ನು, **ಅಹಂ** = ನಾನು, **ನಮಾಮಿ** = ನಮಸ್ಕರಿಸುತ್ತೇನೆ ಅಥವಾ ಈ ಅಸ್ಪರ್ಶಯೋಗವು ಯಾರಿಂದ ಉಪದಿಷ್ಟವಾಯಿತೋ ಆ ಗುರು ವನ್ನು ನಮಸ್ಕರಿಸುತ್ತೇನೆ ಎಂದೂ ಅರ್ಥ ಹೇಳಲು ಸಾಧ್ಯವಿದೆ.

ಈ ಅದ್ವೈತದರ್ಶನವು, ಅಸ್ಪರ್ಶಯೋಗವೆಂದು ಬ್ರಹ್ಮವಿದರಲ್ಲಿ ಪ್ರಸಿದ್ಧ ವಾಗಿದೆ. ಪಾತಂಜಲಯೋಗ ಸಾಂಖ್ಯದರ್ಶನಾದಿಗಳಲ್ಲಿ ಶ್ರಮಿಸಿದ ಸರ್ವಯೋಗಿ ಗಳಿಗೂ ನಿಲುಕತಕ್ಕದ್ದಲ್ಲ. **'ದುರ್ದರ್ಶಃ ಸರ್ವಯೋಗಿಭಿಃ''** ಇದು ಆದಿ ಯಿಂದಲೇ ಸಕಲರಿಗೂ ಸುಖಕರವಾದದ್ದು. ತಪಸ್ಸಿನಂತೆ ಸಾಧಕರಿಗೆ ಆದಿಯಲ್ಲಿ ಕಷ್ಟಕರವಾದ್ದಲ್ಲ. ಇದು ಪರಿಣಾಮದಲ್ಲಿ ಹಿತಕಾರಿಯೂ ಆಗಿದೆ. ವಿಷಯ ಭೋಗವು ಸುಖಕಾರಿಯಾದರೂ ಪರಿಣಾಮದಲ್ಲಿ ಕಷ್ಟವನ್ನು ತರುತ್ತದೆ. ಈ ಅದ್ವೈತ ದರ್ಶನವು ಸರ್ವದರ್ಶನಗಳನ್ನು ಸಮನ್ವಯಿಸುವುದರಿಂದ ಇದರಲ್ಲಿ ವಿವಾದವಿಲ್ಲ. ಆದ್ದರಿಂದಲೇ ಇದು ಅನ್ಯದರ್ಶನಗಳಿಗೆ ವಿರುದ್ಧವೂ ಅಲ್ಲ. ಅವು ಗಳನ್ನು ವಿರೋಧಿಸುವುದಿಲ್ಲ. ಉಪನಿಷತ್ತುಗಳು ಪ್ರತಿಪಾದಿಸಿದ ದರ್ಶನವಿದು. ಈ ಅಸ್ಪರ್ಶ ಯೋಗವನ್ನು ನಾನು ವಂದಿಸತಕ್ಕವನು ಇದು ಅಸ್ಪರ್ಶಯೋಗದ ಸ್ತುತಿ.

**ಭೂತಸ್ಯ ಜಾತಿಮಿಚ್ಛಂತಿ ವಾದಿನಃ ಕೇಚಿದೇವ ಹಿ ।**
**ಅಭೂತಸ್ಯಾಪರೇ ಧೀರಾ ವಿವದಂತಃ ಪರಸ್ಪರಮ್ ॥೩॥**

**ಭೂತಸ್ಯ** = ವಿದ್ಯಮಾನವಾದ ವಸ್ತುವಿಗೆ, **ಜಾತಿಂ** = ಉತ್ಪತ್ತಿಯನ್ನು, **ಕೇಚಿದೇವ** = ಕೇಲವೇ, **ವಾದಿನಃ** = ವಾದಿಗಳಾದ ಸಾಂಖ್ಯರು, **ಇಚ್ಛಂತಿ** = ಬಯಸುತ್ತಾರೆ. **ಅಪರೇ** = ಇನ್ನು ಕೆಲವು, **ಧೀರಾಃ** = ಧೀಮಂತರಾದ ವೈಶೇಷಿಕರೂ ನೈಯಾಯಿಕರೂ, **ಅಭೂತಸ್ಯ** = ಇಲ್ಲದಿರುವ ಅಸದ್ವಸ್ತುವಿಗೆ, **ಜಾತಿಂ** = ಉತ್ಪತ್ತಿಯನ್ನು, **ಪರಸ್ಪರಂ ವಿವದಂತಃ** = ಒಬ್ಬರಿಗೊಬ್ಬರು ವಾದ ಪ್ರತಿವಾದಗಳನ್ನು ಮಾಡುತ್ತ, **ಇಚ್ಛಂತಿ** = ಬಯಸುತ್ತಾರೆ.

ದ್ವೈತವಾದದಲ್ಲಿ ಸಾಂಖ್ಯರು ಸತ್ಕಾರ್ಯವಾದಿಗಳು. **ಸತ್** = ವಿದ್ಯಮಾನ ವಾದುದೇ, **ಕಾರ್ಯ** = ಉತ್ಪನ್ನವಾಗುತ್ತದೆ ಎಂದರ್ಥ. ಮಣ್ಣಿನಿಂದ ಕುಂಬಾರನು ಗಡಿಗೆಯನ್ನು ಮಾಡುತ್ತನಷ್ಟೆ. ಅಲ್ಲಿ ಗಡಿಗೆ ಮಣ್ಣಿನ ರೂಪದಲ್ಲಿ ಇತ್ತು, ಕುಂಬಾರ ನಿಂದ ಮಣ್ಣು ಗಡಿಗೆಯರೂಪಕ್ಕೆ ತಿರುಗಿತು ಎಂದರೆ ಗಡಿಗೆಯಾಗಿ ಪರಿಣಮಿ ಸಿತು. ಮೊದಲು ಇದ್ದ ಗಡಿಗೆಯೇ ಈಗ ಗಡಿಗೆಯ ರೂಪದಲ್ಲಿ ಕಾಣಿಸಿತು ಎಂದು ಸತ್ಕಾರ್ಯವಾದಿಗಳ ಅಭಿಪ್ರಾಯ. ಇವರು ಪರಿಣಾಮವಾದಿಗಳು. ಅಸತ್ ಆದದ್ದು ಹುಟ್ಟುವುದಿಲ್ಲ. ಅಸತ್ ಹುಟ್ಟುವುದಾದರೆ ಶಶಶೃಂಗವೂ–ಮೊಲದ ಕೊಂಬೂ ಹುಟ್ಟಬೇಕಾದೀತು ಎಂದು ಇವರ ವಾದ.

ವೈಶೇಷಿಕರೂ ನೈಯಾಯಿಕರೂ ತಾರ್ಕಿಕರೆಂದು ಪ್ರಸಿದ್ಧರಾಗಿದ್ದಾರೆ. ಇವರು ಅಸತ್ಕಾರ್ಯವಾದಿಗಳು. ಇವರು ಪರಿಣಾಮವಾದಿಗಳಲ್ಲ. **ಅಸತ್** = ಇಲ್ಲದ ವಸ್ತುವೇ ಹುಟ್ಟುತ್ತದೆ. ವಿದ್ಯಮಾನವಾದದ್ದೇ ಮತ್ತೆ ಹುಟ್ಟುತ್ತದೆ ಎಂದರೆ ಬಾಲಿಶ

ವಾದ ಮಾತಾಗುತ್ತದೆ. ಆತ್ಮನು ಇದ್ದಾನೆ. ಅವನು ಮತ್ತೆ ಹುಟ್ಟುತ್ತಾನೆಯೆ? ಆತ್ಮನು ಶಾಶ್ವತ, ಅಜ – ಎಂಬ ಶ್ರುತಿಗೆ ಇದು ವಿರುದ್ಧವಾಗುತ್ತದೆ. ಆದ್ದರಿಂದ ಅಸತ್ಕಾರ್ಯವಾದವೇ ಸರಿ ಎನ್ನುತ್ತಾರೆ. ಹಾಗಾದರೆ ಶಶಶೃಂಗವು ಹುಟ್ಟಲಿ ಎಂಬ ಆಕ್ಷೇಪಕ್ಕೆ ಅವರ ಉತ್ತರ ಹೀಗಿದೆ. ಯಾವುದು ಹುಟ್ಟುವುದಾದರೂ ಅದಕ್ಕೆ ಮೂಲ ಭೂತವಾದ ಸಾಮಗ್ರಿಬೇಕು. ಶಶದ ತಲೆಯಲ್ಲಿ ಕೊಂಬನ್ನು ಹುಟ್ಟಿಸುವ ಸಾಮಗ್ರಿ ಇಲ್ಲ ಎಂಬುದು ಉತ್ತರ.

**ಭೂತಂ ನ ಜಾಯತೇ ಕಿಂಚಿದಭೂತಂ ನೈವಜಾಯತೇ ।**
**ವಿವದಂತೋ ದ್ವಯಾ ಹ್ಯೇವಮಜಾತಿಂ ಖ್ಯಾಪಯಂತಿ ತೇ ॥೪॥**

**ಭೂತಂ ನ ಜಾಯತೇ ಕಿಂಚಿತ್** = ವಿದ್ಯಮಾನವಾದದ್ದು ಯಾವುದೂ ಹುಟ್ಟುವುದಿಲ್ಲ ಎಂದು ಅಸತ್ಕಾರ್ಯವಾದಿಗಳಾದ ತಾರ್ಕಿಕರು ಹೇಳುತ್ತಾರೆ. ಮಣ್ಣಿನಿಂದ ಗಡಿಗೆ ಹುಟ್ಟುತ್ತದೆ. ಗಡಿಗೆ ಮೊದಲೇ ಇದ್ದರೆ ಮತ್ತೆ ಹುಟ್ಟ ಬೇಕಾಗುವುದಿಲ್ಲ. ನೂಲಿನಿಂದ ಬಟ್ಟೆ ಹುಟ್ಟುತ್ತದೆ. ಮೊದಲೇ ಬಟ್ಟೆ ಇದ್ದರೆ ನೇಯ್ಗೆಯವನು ನೆಯ್ಯಬೇಕಾಗಿಯೇ ಇರುವುದಿಲ್ಲ. ಆದ್ದರಿಂದ ಅಸತ್ ಅವಿದ್ಯಮಾನವಾದದ್ದೇ ಉತ್ಪನ್ನವಾಗುತ್ತದೆ ಎಂದು ತಾರ್ಕಿಕರವಾದ. ಇದಕ್ಕೆ ಸಾಂಖ್ಯರು ಪ್ರತಿಯಾಗಿ ಹೇಳುವುದೇನೆಂದರೆ **ಅಭೂತಂ ನೈವ ಜಾಯತೇ** = ಇಲ್ಲದೆ ಅವಿದ್ಯಮಾನವಾದದ್ದು ಹುಟ್ಟುವುದೇ ಇಲ್ಲ. ಅವಿದ್ಯಮಾನವಾದ ಶಶಶೃಂಗ, ಗಗನ ಪುಷ್ಪ– ಮುಂತಾದವು ಹುಟ್ಟುತ್ತವೆಯೆ? ಅಸದ್ವಾದವನ್ನೊಪ್ಪಿ ದರೆ ಪ್ರಕೃತಿ ವಿಕೃತಿ ಭಾವವೇ ಇಲ್ಲದೆ ಹೋದೀತು. ಮಣ್ಣು ಎಂಬ ಪ್ರಕೃತಿಯು ಗಡಿಗೆಯೆಂಬ ವಿಕೃತಿಯನ್ನು–ರೂಪಾಂತರವನ್ನು ತಾಳುತ್ತದೆ. ಗಡಿಗೆ ಹೊಸದಾಗಿ ಹುಟ್ಟುವುದಿಲ್ಲ. ಹಾಲು ಮೊಸರಾಗುತ್ತದೆ. ಹಾಲು ಪ್ರಕೃತಿ. ಅದರ ವಿಕೃತಿಯೇ ಮೊಸರು. ವಿಕೃತಿಯು ಹೊಸದಾಗಿ ಹುಟ್ಟುವುದಿಲ್ಲ. ಹಾಲು ಮೊಸರಾಗಿ ರೂಪಾಂತರವನ್ನು ಹೊಂದಿದೆ. ಶಿಲೆಯಿಂದ ಪ್ರತಿಮೆ ಹುಟ್ಟುವುದಿಲ್ಲ, ಶಿಲೆಯ ರೂಪಾಂತರ ಪ್ರತಿಮೆ. ಹಲಗೆಯ ರೂಪಾಂತರ ಬಾಗಿಲು. ಆದ್ದರಿಂದ ತಾರ್ಕಿಕರು ಹೇಳುವುದು ಯುಕ್ತವಲ್ಲ. ಈ ಪ್ರಕಾರವಾಗಿ ಉಭಯರೂ ಪರಸ್ಪರ ವಿರುದ್ಧವಾಗಿ ವಾದಿಸುತ್ತ ನಮ್ಮ ಅಜಾತಿ ವಾದವೇ ಸರಿಯಾದದ್ದೆಂದು ಪ್ರಕಾಶಪಡಿಸುತ್ತಿದ್ದಾರೆ! ಏಕೆಂದರೆ, ಉಭಯವಾದಿಗಳಿಗೂ ಸತ್ಯದ ಅರಿವಾಗಿಲ್ಲ, ಸತ್ಯದ ಅರಿವಾಗಿದ್ದರೆ ಹೀಗೆ ವಿಪ್ರತಿಪತ್ತಿಯುಂಟಾಗುತ್ತಿರಲಿಲ್ಲ.

**ಖ್ಯಾಪ್ಯಮಾನಾಮಜಾತಿಂ ತೈರನುಮೋದಾಮಹೇ ವಯಮ್ ।**
**ವಿವದಾಮೋ ನ ತೈಃ ಸಾರ್ಧಮವಿವಾದಂ ನಿಬೋಧತ ॥೫॥**

**ತೈಃ** = ಆ ಸದಸದ್ವಾದಿಗಳಿಂದ, **ಖ್ಯಾಪ್ಯಮಾನಾಂ** = ಪ್ರಕಾಶಿತವಾಗುವ, **ಅಜಾತಿಂ** = ಯಾವುದಕ್ಕೂ ಉತ್ಪತ್ತಿಯಿಲ್ಲವೆಂಬ ಅಜಾತಿವಾದವನ್ನು, **ವಯಂ** = ನಾವು, **ಅನುಮೋದಾಮಹೇ** = ಸರಿಯೆಂದು ಒಪ್ಪಿಕೊಳ್ಳುತ್ತೇವೆ. **ತೈಃ ಸಾರ್ಧಂ** = ಆ ತಾರ್ಕಿಕರೊಡನೆಯೂ ಸಾಂಖ್ಯರೊಡನೆಯೂ ಸಹ, **ನ ವಿವದಾಮಃ** = ನಾವು ವಾದಕ್ಕಿಳಿಯುವುದಿಲ್ಲ. **ಅವಿವಾದಂ** = ವಿವಾದರಹಿತವಾದ ಈ ಪರಮಾರ್ಥದರ್ಶನವನ್ನು, **ನಿಬೋಧತ** = ಕೇಳಿರಿ.

ಹಿಂದೆ ಹೇಳಿದಂತೆ ಸದಸದ್ವಾದಿಗಳು ವಿವಾದವನ್ನೆಬ್ಬಿಸಿ ಎರಡು ಪಕ್ಷಗಳಲ್ಲಿಯೂ ದೋಷಗಳಿವೆಯೆಂಬುದನ್ನು ಅವರೇ ತೋರಿಸಿಕೊಟ್ಟಿದ್ದಾರೆ. ಪರಸ್ಪರ ಮತಗಳ ಖಂಡನೆಗಳನ್ನೂ ಅವರೇ ಮಾಡಿಕೊಂಡಿದ್ದಾರೆ. ಮತ್ತೆ ನಾವು ಅವರೊಡನೆ ವಾದಮಾಡಬೇಕಾದ್ದಿಲ್ಲ. ಆದ್ದರಿಂದ ಆ ಎರಡು ವಾದಗಳನ್ನು ಬಿಟ್ಟು ನಮ್ಮ ಸಿದ್ಧಾಂತವನ್ನು ಹೇಳುತ್ತೇವೆ. ಇದು ಪರಮಾರ್ಥವಾದ ಸಿದ್ಧಾಂತ. ವಿವಾದಕ್ಕೆ ಇದರಲ್ಲಿ ಅವಕಾಶವಿಲ್ಲ. ಶಿಷ್ಯರೆ, ಇದನ್ನು ಕೇಳಿರಿ.

**ಅಜಾತಸ್ಯೈವ ಧರ್ಮಸ್ಯ ಜಾತಿಮಿಚ್ಛಂತಿ ವಾದಿನಃ ।**
**ಅಜಾತೋ ಹ್ಯಮೃತೋ ಧರ್ಮೋ ಮರ್ತ್ಯತಾಂ ಕಥಮೇಷ್ಯತಿ ॥೬॥**

**ನ ಭವತ್ಯಮೃತಂ ಮರ್ತ್ಯಂ ನ ಮರ್ತ್ಯಮಮೃತಂ ತಥಾ ।**
**ಪ್ರಕೃತೇರನ್ಯಥಾ ಭಾವೋ ನ ಕಥಂಚಿದ್ ಭವಿಷ್ಯತಿ ॥೭॥**

**ಸ್ವಭಾವೇನಾಮೃತೋ ಯಸ್ಯ ಧರ್ಮೋ ಗಚ್ಛತಿ ಮರ್ತ್ಯತಾಮ್ ।**
**ಕೃತಕೇನಾಮೃತಸ್ತಸ್ಯ ಕಥಂ ಸ್ಥಾಸ್ಯತಿ ನಿಶ್ಚಲಃ ॥೮॥**

ಈ ಮೂರು ಶ್ಲೋಕಗಳೂ, ಹಿಂದೆ ಅದ್ವೈತ ಪ್ರಕರಣದಲ್ಲಿ ಬಂದಿವೆ. (೩–೨೧–೨೨–೨೩). ಅವುಗಳ ಅರ್ಥವನ್ನೂ ಹೇಳಿದ್ದಾಗಿದೆ. ಆ ಪಕ್ಷಗಳೆಲ್ಲವೂ ಇತರ ಪಕ್ಷಗಳಲ್ಲಿರುವ ದೋಷಗಳನ್ನು ಅನ್ಯೋನ್ಯವಾಗಿ ತೋರಿಸಿರುವುದರಿಂದ ಅಜಾತಿವಾದವೇ ನಿರ್ವಿವಾದವಾದದ್ದೆಂದು ಸ್ಪಷ್ಟೀಕರಿಸುವುದಕ್ಕಾಗಿ ಪುನಃ ಇಲ್ಲಿ ಬರೆದಿದ್ದಾರೆ.

ಈ ಮೂರು ಶ್ಲೋಕಗಳ ತಾತ್ಪರ್ಯ ಹೀಗಿದೆ –

ಬ್ರಹ್ಮವು ಜೀವವಾಗಿ ಹುಟ್ಟುತ್ತದೆಯೆನ್ನುವುದು ಎಂದಿಗೂ ಯುಕ್ತವಲ್ಲ. ಅಮರವಾದ ಬ್ರಹ್ಮವು ಮರ್ತ್ಯನಾದ ಜೀವನಾಗಿ ಹುಟ್ಟುತ್ತಾನೆ ಎನ್ನುವುದು ಅಸಂಗತ. ಮರಣರಹಿತವಾದ ಬ್ರಹ್ಮವು ಜೀವನಾಗಿ ಹುಟ್ಟಿ ಸಾಯುತ್ತದೆ ಎಂದರೆ ಬ್ರಹ್ಮವು ಶಾಶ್ವತವಾದದ್ದು ಎಂಬ ಹೇಳಿಕೆಯೇ ತಪ್ಪಾದೀತು. ಆ ಪಕ್ಷದಲ್ಲಿ ಜೀವವು

ಮುಕ್ತಿಯನ್ನು ಪಡೆದಮೇಲೆ ಅಮರವಾಗುತ್ತದೆಯೆಂಬುದು ಸುಳ್ಳಾಗಿ ಬಿಡುತ್ತದೆ. ಮುಕ್ತಿಯನ್ನು ಪಡೆದ ಜೀವಾತ್ಮನು ಮತ್ತೆ ಏಕೆ ಹುಟ್ಟುವುದಿಲ್ಲ? ಎಂಬ ಪ್ರಶ್ನೆ ನಿರುತ್ತರವಾಗುತ್ತದೆ. ಆದ್ದರಿಂದ ಜಾತಿವಾದವು ಸಂಗತವಾದದ್ದಲ್ಲ. (ಜಾತಿ= ಜನ್ಮ) ಏಕೆಂದರೆ, ವಸ್ತುವಿನ ಪ್ರಕೃತಿಯು ಯಾವ ಕಾರಣದಿಂದಲೂ ಬದಲಾಗುವುದಿಲ್ಲ.

**ಸಾಂಸಿದ್ಧಿಕೀ ಸ್ವಾಭಾವಿಕೀ ಸಹಜಾ ಅಕೃತಾ ಚ ಯಾ ।**
**ಪ್ರಕೃತಿಃ ಸೇತಿ ವಿಜ್ಞೇಯಾ ಸ್ವಭಾವಂ ನ ಜಹಾತಿ ಯಾ ॥೯॥**

**ಯಾ** = ಯಾವ ಒಂದು ಶಕ್ತಿ ವಿಶೇಷವು, **ಸಾಂಸಿದ್ಧಿಕೀ** = ಯೋಗ ಸಿದ್ಧಿಯಿಂದ ಬಂದಿದೆಯೋ, **ಸ್ವಾಭಾವಿಕೀ** = ದ್ರವ್ಯದ ಸ್ವಭಾವವಾಗಿದೆಯೋ, **ಸಹಜಾ** = ಹುಟ್ಟುವಾಗ ಜೊತೆಯಲ್ಲಿಯೇ ಬಂದಿದೆಯೋ ಮತ್ತು **ಅಕೃತಾ** = ಅನ್ಯನಿರ್ಮಿತವಲ್ಲವೋ ಮತ್ತು **ಯಾ** = ಯಾವುದು, **ಸ್ವಭಾವಂ ನ ಜಹಾತಿ** = ಸ್ವಭಾವವನ್ನು ಬಿಡದೆ ಸೇರಿಕೊಂಡಿದೆಯೋ **ಸಾ** = ಅದೆಲ್ಲವೂ, **ಪ್ರಕೃತಿಃ** = ಆಯಾ ವಸ್ತುವಿನಲ್ಲಿರುವ ಪ್ರಕೃತಿ ಭೇದವೆಂದು, **ವಿಜ್ಞೇಯಾ** = ತಿಳಿಯಲ್ಪಡಬೇಕು.

ಇಲ್ಲಿ ಐದು ಬಗೆಯ ಪ್ರಕೃತಿಗಳನ್ನು ತಿಳಿಸಲಾಗಿದೆ. ಇವು ಬದಲಾಯಿಸಲು ಶಕ್ಯವಲ್ಲದ ದ್ರವ್ಯಧರ್ಮಗಳು. ಇವು ಬದಲಾವಣೆ ಹೊಂದತಕ್ಕವಲ್ಲ. ಉದಾ –

**ಸಾಂಸಿದ್ಧಿಕೀ** = ಯೋಗಬಲದಿಂದ ಗಳಿಸಿದ ಆಕಾಶಗಮನ, ಅಂತರ್ಧಾನ, ಅಣಿಮಾದ್ಯೈಶ್ವರ್ಯ ಮುಂತಾದದ್ದು.

**ಸ್ವಾಭಾವಿಕೀ** = ಅಗ್ನಿಗೆ ಸುಡುವಶಕ್ತಿ, ಬೆಳಕನ್ನು ನೀಡುವ ಶಕ್ತಿ.

**ಸಹಜಾ** = ಹಕ್ಕಿಗಳಿಗೆ ಹಾರುವ ಶಕ್ತಿ, ಮೀನುಗಳಿಗೆ ಈಜುವ ಶಕ್ತಿ

**ಅಕೃತಾ** = ನೀರು ತಗ್ಗಿಗೆ ಹರಿಯುವುದು, ಗಾಳಿ ಸುತ್ತಲೂ ಬೀಸುವುದು.

**ಪ್ರವೃತ್ತಿ ನಿಮಿತ್ತರೂಪವಾದ ಸಹಜ ಧರ್ಮ** = ಘಟದಲ್ಲಿ ಘಟತ್ವ ಶಬ್ದದಲ್ಲಿ ಶಬ್ದತ್ವ, ಮನುಷ್ಯನಲ್ಲಿ ಮನುಷ್ಯತ್ವ ಇತ್ಯಾದಿ. ಇವೆಲ್ಲವೂ ಮಿಥ್ಯಾಕಲ್ಪಿತವಾದ ಪದಾರ್ಥಗಳ ಪ್ರಕೃತಿ. ಈ ಪದಾರ್ಥಗಳೇ ತಮ್ಮ ಸ್ವಭಾವವನ್ನು ತ್ಯಜಿಸುವುದಿಲ್ಲವಾದಾಗ ಪರಮಾರ್ಥವಾದ ಬ್ರಹ್ಮವು ತನ್ನ ಅಮರತ್ವವನ್ನೂ, ಅಜರತ್ವಾದಿ ಧರ್ಮವನ್ನೂ ಬದಲಾಯಿಸಿ ಮರಣ ಸ್ವಭಾವವನ್ನು ಪಡೆಯುವುದಿಲ್ಲವೆಂದು ಹೇಳಬೇಕಾದ್ದೇ ಇಲ್ಲ.

**"ಸ ವಾ ಏಷ ಮಹಾನಜ ಆತ್ಮಾಽಜರೋಽಮೃತೋಽಭಯೋ ಬ್ರಹ್ಮ"** (ಬೃಹ ४–४–२५).

**"ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್"** (ಕಠ ೧-೨-೧೮) ಇತ್ಯಾದಿ ಶ್ರುತಿಗಳು ಆತ್ಮನಿಗೆ ಹುಟ್ಟು ಇಲ್ಲ, ಮುಪ್ಪು ಇಲ್ಲ, ಮರಣವೂ ಇಲ್ಲ ಎಂದು ಘೋಷಿಸುತ್ತವೆ.

**ಜರಾಮರಣ ನಿರ್ಮುಕ್ತಾಃ ಸರ್ವೇ ಧರ್ಮಾಃ ಸ್ವಭಾವತಃ ।**
**ಜರಾಮರಣಮಿಚ್ಛಂತಶ್ಚ್ಯವಂತೇ ತನ್ಮನೀಷಯಾ ॥೧೦॥**

**ಸರ್ವೇ ಧರ್ಮಾಃ** = ಎಲ್ಲ ಜೀವಾತ್ಮರೂ, **ಸ್ವಭಾವತಃ** = ಸ್ವಾಭಾವಿಕವಾಗಿಯೇ, **ಜರಾಮರಣನಿರ್ಮುಕ್ತಾಃ** = ಮುಪ್ಪು ಮರಣ ಮುಂತಾದ ವಿಕಾರಗಳಿಂದ ರಹಿತರಾಗಿದ್ದಾರೆ. ಆದರೂ **ಜರಾಮರಣಮಿಚ್ಛಂತಃ** = ಮುಪ್ಪು ಸಾವು ಮುಂತಾದವನ್ನು, **ಇಚ್ಛಂತಃ** = ಬಯಸುತ್ತಾರೋ ಎಂಬಂತೆ ತಮ್ಮಲ್ಲಿ ಕಲ್ಪಿಸಿಕೊಂಡು, **ತನ್ಮನೀಷಯಾ** = ಅವುಗಳ ಚಿಂತೆಯಿಂದಲೇ, **ಚ್ಯವಂತೇ** = ತಮ್ಮ ಸ್ವಭಾವದಿಂದ ಚಲಿಸುತ್ತಾರೆ. ಚಲಿಸುತ್ತಾರೋ ಎಂಬಂತೆ ಆಗಿಬಿಡುತ್ತಾರೆ.

ಪ್ರಕೃತಿಯು ಎಂದಿಗೂ ತನ್ನ ಸ್ವಭಾವವನ್ನು ಬದಲಾಯಿಸುವುದಿಲ್ಲ. **"ಪ್ರಕೃತೇರನ್ಯಥಾಭಾವೋ ನ ಕಥಂಚಿದ್ ಭವಿಷ್ಯತಿಃ"** ಜೀವಾತ್ಮರು ಪರಮಾರ್ಥದಲ್ಲಿ ಪರಮಾತ್ಮನೇ ಆಗಿರುವುದರಿಂದ ಮುಪ್ಪು, ಸಾವು, ರೋಗ ಮುಂತಾದವು ಯಾವವೂ ಜೀವಾತ್ಮರಿಗಿಲ್ಲ. ಹುಟ್ಟು, ಸಾವು, ರೋಗ ಮುಂತಾದವು ಅವಿದ್ಯಾಕಲ್ಪಿತವಾದ ದೇಹಕ್ಕೆ ಮಾತ್ರ. ಆದರೆ ಜನರು ಹುಟ್ಟು, ಸಾವು ಮುಂತಾದ ವಿಕಾರಗಳು ನಮಗೆ ಇವೆಯೆಂದು ಭ್ರಮಿಸಿ ಸದಾ ಅವುಗಳ ವಿಷಯವಾಗಿ ಚಿಂತಿಸುತ್ತ ಇದ್ದಾರೆ. ಇಲ್ಲದಿದ್ದರೂ ಸಾವು ಮುಂತಾದವು ನಮಗೆ ಬರಲಿ ಎಂದು ಬಯಸುತ್ತಿದ್ದಾರೋ ಎಂಬಂತೆ ಕಾಣುತ್ತದೆ. **'ಜರಾಮೃತ್ಯುಂ ತೇ ಪುನರೇವಾಪಿಯಂತಿ'** (ಮುಂ. ೧-೨-೭). **'ತಂತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ'** (ಗೀತಾ ೮-೬) ಎಂಬ ಸೂಕ್ತಿಗಳನ್ನಿಲ್ಲಿ ಗಮನಿಸಬೇಕು.

**ಕಾರಣಂ ಯಸ್ಯ ವೈ ಕಾರ್ಯಂ ಕಾರಣಂ ತಸ್ಯ ಜಾಯತೇ ।**
**ಜಾಯಮಾನಂ ಕಥಮಜಂ ಭಿನ್ನಂ ನಿತ್ಯಂ ಕಥಂ ಚ ತತ್ ॥೧೧॥**

**ಯಸ್ಯ**= ಯಾವ ಸಾಂಖ್ಯನ ಮತದಲ್ಲಿ, **ಕಾರಣಂ** = ಕಾರಣವಾದ ಉಪಾದಾನವು, **ಕಾರ್ಯಂ ವೈ** = ಕಾರ್ಯವಾದ ಇನ್ನೊಂದು ವಸ್ತುವಾಗಿ ಪರಿಣಮಿಸುತ್ತದೆಯೋ, **ತಸ್ಯ** = ಆತನ ಮತದಲ್ಲಿ, **ಕಾರಣಂ** = ಮೂಲ ಕಾರಣವಾದ ಪ್ರಧಾನವು, **ಜಾಯತೇ** = ಕಾರ್ಯವಾಗಿ ಹುಟ್ಟುತ್ತದೆ ಎಂದಾಯಿತು. ಹೀಗೆ **ಜಾಯಮಾನಂ** = ಉತ್ಪನ್ನವಾಗುವ ಪ್ರಧಾನವು, **ಕಥಂ** = ಹೇಗೆ, **ಅಜಂ** = ಉತ್ಪತ್ತಿ ರಹಿತವಾದೀತು? **ಚ** = ಮತ್ತು **ಭಿನ್ನಂ** = ಏಕದೇಶದಲ್ಲಿ ಸೀಳಿ ಹೋಗತಕ್ಕದ್ದು, **ಕಥಂ** = ಹೇಗೆ, **ನಿತ್ಯಂ** = ನಿತ್ಯವಾದೀತು?

ಸತ್ಕಾರ್ಯವಾದಿಗಳಾದ ಸಾಂಖ್ಯರು ಹೇಳುವುದು ಅಯುಕ್ತವೆಂದು ವೈಶೇಷಿಕರು ಹೇಳುವ ದೋಷವನ್ನಿಲ್ಲಿ ಉಪಪಾದಿಸಿದ್ದಾರೆ. ಸಾಂಖ್ಯರ ಮತದಲ್ಲಿ ಪುರುಷ, ಪ್ರಧಾನ – ಎಂದು ಎರಡು ವಿಭಾಗ. ಪುರುಷರೆಂದರೆ ಜೀವಾತ್ಮರು. ಅವರು ಚೈತನ್ಯ ಸ್ವರೂಪವಾಗಿರುತ್ತಾರೆ. ಈಶ್ವರನು ಇಲ್ಲ. ಪ್ರಧಾನವೇ ಜಗತ್ತನ್ನು ಸೃಷ್ಟಿಸಿದೆ. ಸೃಷ್ಟಿಸುವುದೆಂದರೆ ಜಗತ್ತಾಗಿ ಪರಿಣಮಿಸುವುದು. ಪ್ರಧಾನಕ್ಕೆ ಮೂಲ ಪ್ರಕೃತಿ, ಪ್ರಕೃತಿ, ಅವ್ಯಕ್ತ ಎಂಬ ನಾಮಾಂತರಗಳಿವೆ. ಈ ಪ್ರಧಾನದಿಂದ ಮಹತ್ತತ್ತ್ವ, ಅದರಿಂದ ಅಹಂಕಾರತತ್ತ್ವ, ಅದರಿಂದ ಪಂಚ ತನ್ಮಾತ್ರೆಗಳು, ಅವುಗಳಿಂದ ಮಹಾಭೂತಗಳು ಮುಂತಾದ ವಿಶ್ವವೇ ಜನಿಸಿದೆ.

ವೈಶೇಷಿಕರು ಇಲ್ಲಿ ಹೇಳುವ ದೂಷಣೆ ಹೀಗೆ – ಪ್ರಧಾನದಿಂದ ಮಹತ್ತತ್ತ್ವ ಹುಟ್ಟುತ್ತದೆ. ಹೀಗೆಯೇ ಮಹತ್ತಿನಿಂದ ಅಹಂಕಾರತತ್ತ್ವ ಮುಂತಾದವು ಹುಟ್ಟುತ್ತವೆಯಷ್ಟೆ. ಮಹತ್ತತ್ತ್ವಕ್ಕೆ ಪ್ರಧಾನವು ಕಾರಣ. ಅದೇ ಮಹತ್ತೆಂಬ ಕಾರ್ಯವಾಗಿ ಪರಿಣಮಿಸುತ್ತದೆ ಎಂದರೆ ಕಾರಣವೇ ಕಾರ್ಯವಾಗುತ್ತದೆ ಎಂದಾಯಿತು. ಆಗ ಕಾರಣವು ರೂಪಾಂತರದಿಂದ ಹುಟ್ಟುತ್ತದೆ ಎಂದು ಸಿದ್ಧವಾಗುತ್ತದೆ. ಈ ಪ್ರಕಾರವಾಗಿ ಕಾರಣವು ಕ್ರಮವಾಗಿ ಸಮಸ್ತ ಜಗತ್ತಾಗಿ ಪರಿಣಮಿಸುವುದಾದರೆ ಅದು ಅಜ–ಜನ್ಮರಹಿತ ಎಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ, ಯಾವುದು ಹುಟ್ಟುವುದೋ ಅದು ಜನ್ಮರಹಿತವಾಗದು. ರೂಪಾಂತರವೆಂದರೂ ಒಂದೇ ಜನ್ಮಾಂತರವೆಂದರೂ ಒಂದೇ. ಆದ್ದರಿಂದ ಪ್ರಧಾನವೂ ಜನ್ಮಸಹಿತವೇ. ಆದ್ದರಿಂದ ಪ್ರಧಾನವು ನಿತ್ಯ – ಎನ್ನುವುದು ಅಪಸಿದ್ಧಾಂತವಾದೀತು. ಹೀಗೆ ಪ್ರಧಾನವು ಕ್ರಮವಾಗಿ ತುಂಡು ತುಂಡಾಗಿ ಜಗತ್ತಾಗುವುದರಿಂದ ಅದು ಜನ್ಮರಹಿತ ನಿತ್ಯ ಎನ್ನುವುದು ಅಸಂಗತವಾಗುತ್ತದೆ.

**ಕಾರಣಾದ್ಯದ್ಯನನ್ಯತ್ವಮತಃ ಕಾರ್ಯಮಜಂ ಯದಿ ।**
**ಜಾಯಮಾನಾದ್ಧಿ ವೈ ಕಾರ್ಯಾತ್ ಕಾರಣಂ ತೇ ಕಥಂ ಧ್ರುವಮ್ ॥೧೨॥**

**ಕಾರಣಾತ್** = (ನಿನ್ನ ಮತದಲ್ಲಿ ನಿತ್ಯವಾದ) ಪ್ರಧಾನವೆಂಬ ಕಾರಣದಿಂದ **ಅನನ್ಯತ್ವಂ ಯದಿ** = ಕಾರ್ಯವಾದ ಮಹದಾದಿಗಳು ಅನ್ಯವಲ್ಲವೆಂದಾದರೆ, **ಅತಃ** = ಆದ್ದರಿಂದಲೇ, **ಕಾರ್ಯಂ** = ಜನ್ಯವಾದ ಮಹದಾದಿಯೂ, **ಅಜಂ** = ಜನ್ಮರಹಿತ, ನಿತ್ಯ ಎಂದಾಗುತ್ತದೆ. **ಯದಿ** = ಹಾಗಾದರೆ, **ಜಾಯಮಾನಾತ್** = ಉತ್ಪನ್ನವಾಗುವ, **ಕಾರ್ಯಾತ್** = ಕಾರ್ಯದಿಂದ ಅಭಿನ್ನವಾದ, **ಕಾರಣಂ** = ಕಾರಣವಾದ ಪ್ರಧಾನವು, **ತೇ** = ನಿನ್ನ ಮತದಲ್ಲಿ **ಕಥಂ** = ಹೇಗೆ, **ಧ್ರುವಮ್** = ನಿತ್ಯವೆಂದಾಗುತ್ತದೆ.

ಪ್ರಧಾನವು ಮಹದಾದಿ ಕಾರ್ಯರೂಪವಾಗಿ ಪರಿಣಮಿಸುತ್ತದೆ ಎಂಬ ಸಾಂಖ್ಯ ಮತದಲ್ಲಿ ಕಾರಣವೇ ಕಾರ್ಯರೂಪದಲ್ಲಿ ಹುಟ್ಟುತ್ತದೆ ಎಂದಾಗುತ್ತದೆ. ಯಾವುದು ಹುಟ್ಟುತ್ತದೆಯೋ ಅದು ಜನ್ಮರಹಿತವೆನ್ನುವುದು ಅಸಂಗತ. **"ಜಾತಸ್ಯ ಮರಣ ಧ್ರುವಮ್"** ಎಂಬ ನಿಯಮವಿರುವುದರಿಂದ ಅದು ನಿತ್ಯವೆನ್ನುವುದೂ ತಪ್ಪಾಗುತ್ತದೆ. ಎಂದು ಹೇಳಿದ್ದಾಗಿದೆ. ಅದನ್ನೇ ಇನ್ನೊಂದು ಬಗೆಯಲ್ಲಿ ವಿವರಿಸುತ್ತಾರೆ. ಪ್ರಧಾನವು ಮಹದಾದಿ ರೂಪದಿಂದ ಪರಿಣಮಿಸಿದರೂ ಕಾರ್ಯ ಕಾರಣಗಳಿಗೆ ಅಭೇದವಿರುವುದರಿಂದ ಪ್ರಧಾನವು ನಿತ್ಯವೆಂಬುದಕ್ಕೆ ಬಾಧೆ ಇಲ್ಲ ಎಂದು ಸಾಂಖ್ಯನು ಹೇಳಬಹುದು. ಆಗ ಕಾರ್ಯವಾದದ್ದೂ ನಿತ್ಯವೆಂದಾಗುತ್ತದೆ. ಏಕೆಂದರೆ ಕಾರ್ಯವು ಅಭೇದದಿಂದ ಕಾರಣವಾಗಿ ಬಿಡುತ್ತದೆ. ಆಗ ಪ್ರಧಾನವು ಕಾರ್ಯವಾದ್ದರಿಂದ ಜನ್ಯವೆಂದಾಗುತ್ತದೆಯಲ್ಲದೆ ಅನಿತ್ಯವೆಂದೂ ಆಗಿ ಬಿಡುತ್ತದೆ. ಆಗ ಸಾಂಖ್ಯನು ಹೀಗೆ ಹೇಳಬಹುದು. ಪ್ರಧಾನದ ಒಂದು ಅಂಶದಿಂದ ಮಹತ್ತತ್ತ್ವ ಹುಟ್ಟುತ್ತದೆ. ಇನ್ನೊಂದು ಅಂಶ ಅಜವೂ ನಿತ್ಯವೂ ಆಗುತ್ತದೆ ಎಂದು. ಇದು ಹಾಸ್ಯಾಸ್ಪದ. ಹೆಣ್ಣು ಕೋಳಿಯನ್ನು ಕತ್ತರಿಸಿ. ಪೂರ್ವಾರ್ಧವನ್ನು ತತ್ತಿ ಹಾಕುವುದಕ್ಕಾಗಿ ಬಿಡೋಣ, ಉತ್ತರಾರ್ಧವನ್ನು ಬೇಯಿಸಿ ತಿನ್ನೋಣ ಎಂದು ವಾದಿಸಿದಂತಾಗುತ್ತದೆ! ಕೋಳಿ ಬದುಕಿದ್ದರಲ್ಲವೆ ತತ್ತಿ ಹಾಕುವುದು! **ಕುಕ್ಕುಟ್ಯರ್ಧ ಸಂರಕ್ಷಣ ನ್ಯಾಯ**ವೆಂದು ಇದಕ್ಕೆ ಹೆಸರು.

**ಅಜಾದ್ವೈ ಜಾಯತೇ ಯಸ್ಯ ದೃಷ್ಟಾಂತಸ್ತಸ್ಯ ನಾಸ್ತಿ ವೈ ।**
**ಜಾತಾಚ್ಚ ಜಾಯಮಾನಸ್ಯ ನ ವ್ಯವಸ್ಥಾ ಪ್ರಸಜ್ಯತೇ ॥೧೩॥**

**ಯಸ್ಯ** = ಯಾರ ಮತದಲ್ಲಿ **ಅಜಾತ್** = ಅನುತ್ಪನ್ನವಾದ ವಸ್ತುವಿನಿಂದ, **ಜಾಯತೇ** = ಇನ್ನೊಂದು ವಸ್ತು ಹುಟ್ಟುತ್ತದೆಯೋ, **ತಸ್ಯ** = ಆತನ ಮತದಲ್ಲಿ **ದೃಷ್ಟಾಂತಃ** = ಅದಕ್ಕೊಂದು ದೃಷ್ಟಾಂತವು, **ನಾಸ್ತಿ** = ಇಲ್ಲ. **ಜಾತಾತ್** = ಉತ್ಪನ್ನವಾದ್ದರಿಂದ, **ಜಾಯಮಾನಸ್ಯ** = ಇನ್ನೊಂದು ವಸ್ತು ಹುಟ್ಟುತ್ತದೆ ಎಂಬ ವಾದಿಯ ಮತದಲ್ಲಿಯೂ, ಹುಟ್ಟುವ ಮೂಲ ಯಾವುದೆಂಬ, **ವ್ಯವಸ್ಥಾ** = ವ್ಯವಸ್ಥೆಯು, **ನ ಪ್ರಸಜ್ಯತೇ** = ಸಂಭವಿಸುವುದೂ ಇಲ್ಲ.

ಸದ್ವಾದಿಗಳ ಮತದಲ್ಲಿ ಇನ್ನೊಂದು ದೋಷ ಉಂಟು. ಅನುತ್ಪನ್ನವಾದ ಎಂದರೆ – ಅನಾದಿಯಾದ ಪ್ರಧಾನದಿಂದ ಮಹದಾದಿಗಳು ಹುಟ್ಟಿದವೆಂದರೆ ಈ ಅನುಮಾನಕ್ಕೆ ಅಥವಾ ಊಹೆಗೆ ಇನ್ನೊಂದು ದೃಷ್ಟಾಂತವೇ ಸಿಗುವುದಿಲ್ಲ. ಉಭಯ ಸಂಮತವಾದ ಉದಾಹರಣೆ ಇಲ್ಲದಿದ್ದರೆ ಅದು ಪ್ರಾಮಾಣಿಕವೆಂದು ಒಪ್ಪಲಾಗುವುದಿಲ್ಲ. ಆದ್ದರಿಂದ ಸಾಂಖ್ಯಮತವು ಸರಿಯಲ್ಲ.

ಇನ್ನು ಉತ್ಪನ್ನವಾದ್ದರಿಂದ ಇನ್ನೊಂದು ವಸ್ತು ಹುಟ್ಟುತ್ತದೆ ಎಂಬ ಮತವೂ ಸರಿಯಲ್ಲ. ಮಣ್ಣಿನಿಂದ ಗಡಿಗೆ ಹುಟ್ಟುತ್ತದೆಯೆಂಬುದಕ್ಕೆ ನೂಲಿನಿಂದ ವಸ್ತ್ರ ಹುಟ್ಟುತ್ತದೆ ಎಂಬ ದೃಷ್ಟಾಂತ ಉಂಟು. ಆದರೆ ಇದರಲ್ಲಿ ಅನವಸ್ಥಾದೋಷವು ಸಂಭವಿಸುತ್ತದೆ. ಮಣ್ಣೆಂಬ ಕಾರಣಕ್ಕೆ ಕಾರಣ ಯಾವುದು? ಅದಕ್ಕೆ ಕಾರಣ ಯಾವುದು? ಎಂಬ ಪ್ರಶ್ನೆಗಳಿಗೆ ನಿಲುಗಡೆಯೇ ಇರುವುದಿಲ್ಲ. ನಿತ್ಯವಾದ ಪರಮಾಣುವಿನಲ್ಲಿ ನಿಲುಗಡೆಯನ್ನು ಹೇಳಿದರೆ ಅದು ಸತ್ಕಾರ್ಯವಾದವಾಗುತ್ತದೆ. ಅದರಲ್ಲಿ ದೋಷಗಳನ್ನು ಹೇಳಿದ್ದಾಗಿದೆ. ಅವರು ಪರಮಾಣುವೂ ಸಹ ಪ್ರಧಾನ ಜನ್ಯವೆನ್ನುವುದರಿಂದ ಸತ್ಕಾರ್ಯವಾದದಲ್ಲಿ ಅದು ದೃಷ್ಟಾಂತವಾಗುವುದೂ ಇಲ್ಲ. ಆದ್ದರಿಂದ ವೇದಾಂತಿಗಳ ಅಜಾತಿವಾದವೇ ಯುಕ್ತವಾದದ್ದು ಎಂದು ತಾತ್ಪರ್ಯ. ಅವರ ಮತದಲ್ಲಿ ಸದ್ವಸ್ತುವೇ ಜಗತ್ತಿಗೆ ಕಾರಣವಾದರೂ ಅದೆಲ್ಲವೂ ಅವಿದ್ಯಾ ಕಲ್ಪಿತವೆನ್ನುವುದರಿಂದ ಯಾವ ದೋಷವೂ ಸಂಭವಿಸುವುದಿಲ್ಲ.

**ಹೇತೋರಾದಿಃ ಫಲಂ ಯೇಷಾಮಾದಿರ್ಹೇತುಃ ಫಲಸ್ಯ ಚ ।**
**ಹೇತೋಃ ಫಲಸ್ಯಚಾನಾದಿಃ ಕಥಂ ತೈರುಪವರ್ಣ್ಯತೇ ॥೧೪॥**

**ಯೇಷಾಂ** = ಯಾವ ಜಾತಿವಾದಿಗಳ (ಉತ್ಪತ್ತಿವಾದಿಗಳ) ಮತದಲ್ಲಿ **ಹೇತೋಃ** = ಧರ್ಮಾಧರ್ಮಾದಿ ಕಾರಣಕ್ಕೆ, **ಆದಿಃ** = ಕಾರಣವು, **ಫಲಂ** = ಫಲವಾದ ದೇಹ ಸಂಘಾತವೇ ಆಗುತ್ತದೆಯೋ, **ಚ** = ಮತ್ತು, **ಫಲಸ್ಯ** = ಫಲವಾದ ದೇಹ ಸಂಘಾತಕ್ಕೆ, **ಆದಿಃ** = ಕಾರಣವು, **ಹೇತುಃ** = ಮೊದಲು ಫಲವಾಗಿದ್ದ ಧರ್ಮಾಧರ್ಮಾದಿಗಳೇ ಆಗುತ್ತವೆಯೋ **ತೈಃ** = ಆ ವಾದಿಗಳಿಂದ **ಹೇತೋಃ** = ಹೇತುವಿಗೂ **ಫಲಸ್ಯ** = ಫಲಕ್ಕೂ **ಅನಾದಿಃ** = ಅನಾದಿತ್ವವು, **ಕಥಂ** = ಹೇಗೆ, **ಉಪವರ್ಣ್ಯತೇ** = ವರ್ಣಿಸಲ್ಪಡುತ್ತದೆ?

ಜಾತಿವಾದಿಗಳು ಕಾರ್ಯಕಾರಣ ಭಾವವನ್ನು ಅವಶ್ಯವಾಗಿ ಹೇಳಬೇಕಾಗುತ್ತದೆ. ಯಾವುದರಿಂದ ಯಾವುದು ಹುಟ್ಟುತ್ತದೆ ಎಂಬುದನ್ನು ಸ್ಪಷ್ಟವಾಗಿ ನಿರ್ದೇಶಿಸ ಬೇಕು. ಜೀವನು ದೇಹಸಹಿತವಾಗಿ ಹುಟ್ಟುತ್ತಾನೆ. ದೇಹವು ಹುಟ್ಟುವುದಕ್ಕೆ ಕಾರಣ ಯಾವುದು? ಜೀವನು ಮಾಡಿದ ಪಾಪಪುಣ್ಯಗಳು–ಎಂದರೆ– ಧರ್ಮಾಧರ್ಮ ಗಳು. ಧರ್ಮಾಧರ್ಮಗಳು ದೇಹವಿಲ್ಲದೆ ನಡೆಯುವುದಿಲ್ಲ. ದೇಹವಿಲ್ಲದೆ ಧರ್ಮಾಧರ್ಮಗಳು ಹುಟ್ಟುವುದಿಲ್ಲ! ಇಲ್ಲಿ ಅನ್ಯೋನ್ಯಾಶ್ರಯವೆಂಬ ದೋಷವು ಸ್ಪಷ್ಟವಾಗಿದೆ. ಇದರಿಂದ ಯಾವುದು ಮೊದಲು ಎಂಬುದು ನಿರ್ಣೀತವಾಗು ವುದೇ ಇಲ್ಲ. ಹೇತುವಿಲ್ಲದೆ ಕಾರ್ಯವಿಲ್ಲ. ಕಾರ್ಯವಿಲ್ಲದೆ ಹೇತುವಿಲ್ಲ ಎಂಬುದು ಅನ್ಯೋನ್ಯವ್ಯಾಘಾತಕರವಾದದ್ದು. ಹೇತು, ಫಲ – ಎರಡೂ ಅನಾದಿಯೆಂದು ಹೇಳಬಹುದೆ? ಅಸಂಗತವಾದ ಹೇಳಿಕೆ ಇದು.

**ಹೇತೋರಾದಿಃ ಫಲಂ ಯೇಷಾಮಾದಿರ್ಹೇತುಃ ಫಲಸ್ಯ ಚ ।**
**ತಥಾ ಜನ್ಮಭವೇತ್ತೇಷಾಂ ಪುತ್ರಾಜ್ಜನ್ಮ ಪಿತುರ್ಯಥಾ ॥೧೫॥**

**ಯೇಷಾಂ** = ಯಾರ ಮತದಲ್ಲಿ, **ಫಲಂ** = ಪಾಪಪುಣ್ಯಗಳೆಂಬ ಫಲವು, **ಹೇತೋಃ** = ತನಗೆ ಕಾರಣವಾದ ದೇಹಕ್ಕೆ **ಆದಿಃ** = ಕಾರಣವಾಗುತ್ತದೆಯೋ, **ಚ** = ಮತ್ತು **ಫಲಸ್ಯ** = ಫಲವಾದ ದೇಹಕ್ಕೆ, **ಆದಿಃ** = ಮೊದಲು ಫಲವಾಗಿದ್ದ ಪಾಪಪುಣ್ಯಗಳೇ, **ಹೇತುಃ** = ಕಾರಣವಾಗುತ್ತವೆಯೋ, **ತೇಷಾಂ** = ಆ ಜಾತಿವಾದಿಗಳಿಗೆ, **ಯಥಾ** = ಹೇಗೆ, **ಪುತ್ರಾತ್** = ಮಗನಿಂದ, **ಪಿತುಃ** = ತಂದೆಗೆ, **ಜನ್ಮ ಭವೇತ್** = ಜನ್ಮವಾದೀತೋ, **ತಥಾ** = ಹಾಗೆ, **ಜನ್ಮ** = **ಜನ್ಮಭವೇತ್** = ಜನ್ಮವಾದೀತು!

ಜಾತಿವಾದಿಗಳ ಹೇಳಿಕೆ ಹಾಸ್ಯಾಸ್ಪದವಾದದ್ದು. ಪಾಪಪುಣ್ಯಗಳಿಂದ ಜೀವನು ದೇಹವನ್ನು ಧರಿಸುವುದಾದರೆ ಅವುಗಳನ್ನು ಮಾಡಲು ಮೊದಲು ದೇಹವಿರಬೇಕು. ದೇಹವು ಬರುವುದಕ್ಕೆ ಪಾಪಪುಣ್ಯಗಳಿರಬೇಕು. ದೇಹದ ಫಲವೇ ಪಾಪ ಪುಣ್ಯಗಳು. ಅವುಗಳ ಫಲ ದೇಹ. ಫಲವೇ ಹೇತು. ಹೇತುವೇ ಫಲ. ಮಗನಿಂದ ತಂದೆ ಹುಟ್ಟುತ್ತಾನೆ, ಎಂದು ಹೇಳಿದಂತಾಯಿತು! ಏಕೆ ಈ ಜನರು ಇಷ್ಟು ವಿರುದ್ಧವಾಗಿ ವಾದಿಸುತ್ತಾರೆ?

**ಸಂಭವೇ ಹೇತುಫಲಯೋರೇಷಿತವ್ಯಃ ಕ್ರಮಸ್ತ್ವಯಾ ।**
**ಯುಗಪತ್ ಸಂಭವೇ ಯಸ್ಮಾದಸಂಬಂಧೋ ವಿಷಾಣವತ್ ॥ ೧೬॥**

**ಹೇತುಫಲಯೋಃ** = ಇದು ಹೇತು – ಇದು ಫಲವಾದ ಕಾರ್ಯ ಎಂದು ಕಾರ್ಯಕಾರಣ ಭಾವದ **ಸಂಭವೇ** = ಸಂಭವವಿರುವುದಾದರೆ, **ಕ್ರಮಃ** = ಇದು ಹೇತು – ಇದು ಫಲವೆಂಬ ಒಂದು ಕ್ರಮವು, **ತ್ವಯಾ** = ನಿನ್ನಿಂದ, **ಏಷಿತವ್ಯಃ** = ಅನ್ವೇಷಿಸಲ್ಪಡಬೇಕು. **ಯಸ್ಮಾತ್** = ಏಕೆಂದರೆ, **ಯುಗಪತ್ ಸಂಭವೇ** = ಏಕಕಾಲದಲ್ಲಿ ಹೇತುಫಲಗಳೆರಡೂ ಹುಟ್ಟುವುದಾದರೆ, ಅವುಗಳಿಗೆ, **ವಿಷಾಣವತ್** = ಗೋವಿನ ಎರಡು ಕೊಂಬುಗಳಂತೆ, **ಅಸಂಬಂಧಃ** = ಪರಸ್ಪರ ಸಂಬಂಧವಿಲ್ಲದೆ ಹೋಗುತ್ತದೆ.

ಕಾರ್ಯಕಾರಣ ಭಾವವನ್ನು ಹೇಳುವಾಗ ಒಂದಾನೊಂದು ಕ್ರಮವಿರಬೇಕು. ಕಾರಣವು ಕಾರ್ಯವಾಗದು. ಕಾರ್ಯವು ಕಾರಣವಾಗದು. ಮೊದಲು ಕಾರಣ, ಅನಂತರ ಕಾರ್ಯ – ಎಂಬ ವ್ಯವಸ್ಥೆ ಇರಲೇಬೇಕು. ಎರಡೂ ಒಟ್ಟಿಗೆ ಹುಟ್ಟುವುದಿಲ್ಲ. ಗೋವಿನ ಕೊಂಬುಗಳೆರಡೂ ಒಟ್ಟಿಗೆ ಹುಟ್ಟುತ್ತವೆ. ಅವುಗಳಿಗೆ ಪರಸ್ಪರ ಕಾರ್ಯಕಾರಣಭಾವ ಇಲ್ಲ. ಜಾತಿವಾದದಲ್ಲಿ ಕಾರಣ ಯಾವುದು? ಕಾರ್ಯ ಯಾವುದು? ಎಂಬ ಕ್ರಮ ವ್ಯವಸ್ಥೆ ಇಲ್ಲ. ಕಾರ್ಯವೇ ಕಾರಣ, ಕಾರಣವೇ ಕಾರ್ಯ ಎಂಬ ಅವ್ಯವಸ್ಥೆ ಇದೆ.

**ಫಲಾದುತ್ಪದ್ಯಮಾನಃ ಸನ್ನ ತೇ ಹೇತುಃ ಪ್ರಸಿಧ್ಯತಿ ।**
**ಅಪ್ರಸಿದ್ಧಃ ಕಥಂ ಹೇತುಃ ಫಲಮುತ್ಪಾದಯಿಷ್ಯತಿ ॥೧೭॥**

**ತೇ** = ನಿನ್ನ ಮತದಲ್ಲಿ, **ಫಲಾತ್** = ಮುಂದೆ ಹುಟ್ಟಬೇಕಾದ ಫಲದಿಂದ, **ಉತ್ಪದ್ಯಮಾನಃ ಸನ್** = ಹುಟ್ಟಬೇಕಾದ ಹೇತುವು, **ನ ಪ್ರಸಿಧ್ಯತಿ** = ಮೊದಲು ಸಿದ್ಧವಾಗಿರುವುದೇ ಇಲ್ಲ, **ಅಪ್ರಸಿದ್ಧಃ** = ಹೀಗೆ ಸಿದ್ಧವಾಗದೇ ಇರುವ, **ಹೇತುಃ** = ಹೇತುವು, **ಫಲಂ** = ಫಲವನ್ನು, **ಕಥಂ** = ಹೇಗೆ ತಾನೇ, **ಉತ್ಪಾದಯಿಷ್ಯತಿ** = ಉತ್ಪಾದಿಸೀತು?

ಹೇತು ಫಲಗಳಿಗೆ ಸಂಬಂಧವಿಲ್ಲವೆನ್ನುವುದು ಹೇಗೆಂದರೆ, ನಿನ್ನ ಮತದಲ್ಲಿ ಫಲದಿಂದ ಹೇತು (ಕಾರಣವು) ಹುಟ್ಟುತ್ತದೆ. ಹೇತುವಿನಿಂದ ಫಲವು ಹುಟ್ಟುತ್ತದೆ ಯಷ್ಟೆ. ಹೇತುವಿಲ್ಲದೆ ಫಲವಿಲ್ಲ, ಫಲವಿಲ್ಲದೆ ಹೇತುವಿಲ್ಲ, ಫಲದಿಂದ ಹೇತು ಹುಟ್ಟುತ್ತದೆಯೆಂದರೆ, ಮೊದಲು ಫಲ ಎಲ್ಲಿದೆ? ಅದು ಶಶವಿಷಾಣದಂತೆ ಆಗಿದೆ. ಇಲ್ಲವೇ ಇಲ್ಲ. ಅದು ಹೇಗೆ ಹೇತುವನ್ನು ಹುಟ್ಟಿಸುತ್ತದೆ? ಮೊದಲು ಹೇತುವೂ ಹುಟ್ಟಿಲ್ಲವಾದ್ದರಿಂದ ಅದು ಶಶವಿಷಾಣದಂತೆ ಆಗಿದೆ. ಹೀಗೆ ಇಲ್ಲದೇ ಇರುವ ಹೇತುಫಲಗಳಿಗೆ ಕಾರ್ಯಕಾರಣ ಸಂಬಂಧ ಹೇಗೆ ಬಂದೀತು?

**ಯದಿ ಹೇತೋಃ ಫಲಾತ್ ಸಿದ್ಧಿಃ ಫಲಸಿದ್ಧಿಶ್ಚ ಹೇತುತಃ ।**
**ಕತರತ್ ಪೂರ್ವ ನಿಷ್ಪನ್ನಂ ಯಸ್ಯ ಸಿದ್ಧಿರಪೇಕ್ಷಯಾ ॥೧೮॥**

**ಫಲಾತ್** = ಫಲದಿಂದ, **ಹೇತೋಃ** = ಹೇತುವಿನ ಸಿದ್ಧಿಯಾಗುತ್ತದೆ. **ಫಲಸಿದ್ಧಿಶ್ಚ** = ಫಲದ ಸಿದ್ಧಿಯಾದರೋ, **ಹೇತುತಃ** = ಹೇತುವಿನಿಂದಾಗುತ್ತದೆ ಎಂದು **ಯದಿ** = ನೀನು ಹಠದಿಂದ ಹೇಳುವೆಯಾದರೆ, **ಕತರತ್** = ಅವುಗಳಲ್ಲಿ ಯಾವುದು, **ಪೂರ್ವನಿಷ್ಪನ್ನಂ** = ಮೊದಲು ಸಿದ್ಧವಾಗಿರುತ್ತದೆ? ಎಂಬುದನ್ನು ಹೇಳು. **ಯಸ್ಯ** = ಯಾವುದರ ಸಿದ್ಧಿಯೂ, **ಅಪೇಕ್ಷಯಾ** = ಇನ್ನೊಂದರ ಸಾಪೇಕ್ಷವಾಗಿಯೇ ಇರುತ್ತದೆಯೋ ಅದನ್ನು ಹೇಳು.

ಇಲ್ಲಿ ಕೆಲವು ಪದಗಳ ಅಧ್ಯಾಹಾರ ಬೇಕಾಗುತ್ತದೆ. ಹೇತುಫಲಗಳಿಗೆ ಸಂಬಂಧವಿಲ್ಲದೆ ಹೋಗುತ್ತದೆ ಎಂಬ ದೋಷವನ್ನು ಹೇಳಿದರೂ ಪೂರ್ವ ಪಕ್ಷಿಯು ಹೀಗೆ ಹೇಳುತ್ತಾನೆ. ವೇದದಲ್ಲಿ "**ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ = ಪುಣ್ಯ ಕರ್ಮದಿಂದ ಪುಣ್ಯ ದೇಹವು ಬರುತ್ತದೆ**" ಇತ್ಯಾದಿ ವಚನ ಗಳಿವೆ. ಆದ್ದರಿಂದ ಹೇತು ಫಲಗಳಿಗೆ ಸಂಬಂಧವಿದ್ದೇ ಇರಬೇಕು ಎನ್ನುತ್ತಾನೆ. ಅದರ ಮೇಲೆ ಸಿದ್ಧಾಂತಿಯ ಪ್ರಶ್ನೆ – ಒಳ್ಳೆಯದು. ಆ ಹೇತು ಫಲಗಳಲ್ಲಿ ಯಾವುದು ಮೊದಲು? ಅದನ್ನಾದರೂ ಹೇಳು. ಆದರೆ ಒಂದು ಸಂಗತಿಯನ್ನು

ನೆನಪಿನಲ್ಲಿಡು. ಹೇತುವಾದರೂ ಫಲವನ್ನಪೇಕ್ಷಿಸುತ್ತದೆ. ಫಲವು ಹೇತುವನ್ನು ಅಪೇಕ್ಷಿಸುತ್ತದೆ. ಇವೆರಡೂ ಸಾಪೇಕ್ಷವಾದವು.

**ಅಶಕ್ತಿರಪರಿಜ್ಞಾನಂ ಕ್ರಮಕೋಪೋಽಥವಾ ಪುನಃ ।**
**ಏವಂ ಹಿ ಸರ್ವಥಾ ಬುದ್ಧೈರಜಾತಿಃ ಪರಿದೀಪಿತಾ ॥೧೯॥**

**ಅಶಕ್ತಿ:** = ಅಸಾಮರ್ಥ್ಯ, **ಅಪರಿಜ್ಞಾನಂ** = ವಿವೇಚನಾ ಶಕ್ತಿ ಇಲ್ಲದ ಮೌಢ್ಯ, ಅಥವಾ **ಕ್ರಮಕೋಪಃ** = ಕಾರ್ಯಕಾರಣಭಾವದ ಕ್ರಮವೇ ಇಲ್ಲದೆ ಹೋಗುವುದು. ಹೀಗೆ ಮೂರರಲ್ಲೊಂದು ನಮ್ಮ ಪ್ರಶ್ನೆಗೆ ಉತ್ತರವಾಗುತ್ತದೆ! **ಏವಂ ಹಿ** = ಹೀಗಾದರೆ, ಸರ್ವಥಾ ಒಟ್ಟಿನಲ್ಲಿ **ಬುದ್ಧೈಃ** = ಪಂಡಿತರಿಂದ, **ಅಜಾತಿಃ** = ನಮ್ಮ ಅಜಾತಿವಾದವೇ, **ಪರಿದೀಪಿತಾ** = ಪ್ರಕಾಶಿತವಾಗುತ್ತದೆ!

ನಮ್ಮ ಪ್ರಶ್ನೆಗೆ ಜಾತಿವಾದಿಗಳಲ್ಲಿ ಉತ್ತರವಿಲ್ಲ. ಸತ್ಕಾರ್ಯವಾದ, ಅಸತ್ಕಾರ್ಯ ವಾದ ಎಂದು ವಾದಿಸುವ ಪಂಡಿತರು ಉತ್ತರಹೇಳಲಾರರು. ಆದ್ದರಿಂದ ಪರಿಶೇಷವಾಗಿ ನಮ್ಮ ಅಜಾತಿವಾದವೇ ಸಿದ್ಧಾಂತವಾಗುತ್ತದೆ!

**ಬೀಜಾಂಕುರಾಖ್ಯೋ ದೃಷ್ಟಾಂತಃ ಸದಾ ಸಾಧ್ಯಸಮೋ ಹಿ ಸಃ ।**
**ನ ಹಿ ಸಾಧ್ಯಸಮೋ ಹೇತುಃ ಸಿದ್ಧೌ ಸಾಧ್ಯಸ್ಯ ಯುಜ್ಯತೇ ॥೨೦॥**

**ಬೀಜಾಂಕುರಾಖ್ಯೋ ದೃಷ್ಟಾಂತಃ** = ಬೀಜಾಂಕುರವೆಂಬ ನ್ಯಾಯವನ್ನು ಪ್ರತಿವಾದಿಯು ಉದಾಹರಿಸುವದಾದರೆ, **ಸಃ** = ಅದು, **ಸದಾ** = ಯಾವಾಗಲೂ **ಸಾಧ್ಯಸಮಃ** = ಸಾಧಿಸಬೇಕಾದ ಫಲ ಹೇತುಗಳ ಕಾರ್ಯಕಾರಣಭಾವಕ್ಕೆ ಸಮಾನ ವಾದ ದೃಷ್ಟಾಂತವಾಗುತ್ತದೆ. **ಸಾಧ್ಯಸಮಃ** = ಸಾಧ್ಯ ಸಮವೆಂಬ ದೋಷಯುಕ್ತ ವಾದ, **ಹೇತುಃ** = ಹೇತುವು, **ಸಾಧ್ಯಸ್ಯ** = ಸಾಧ್ಯದ, **ಸಿದ್ಧೌ** = ಸಿದ್ಧಿಯಲ್ಲಿ, **ನ ಹಿ ಯುಜ್ಯತೇ** = ಯುಕ್ತವಾಗುವುದಿಲ್ಲವಷ್ಟೆ?

ಈಗ ಪ್ರತಿವಾದಿಯು ಹೇಳುವುದೇನೆಂದರೆ, ಹೇತು ಫಲಗಳಿಗೆ ಕಾರ್ಯಕಾರಣ ಭಾವವಿದೆಯೆಂದು ಮಾತ್ರ ನಾನು ಹೇಳಿದ್ದೇನೆ. ಅಸಿದ್ಧವಾದ ಫಲದಿಂದ ಹೇತು ಹುಟ್ಟುತ್ತದೆಯೆಂದಾಗಲಿ, ಅಸಿದ್ಧವಾದ ಹೇತುವಿನಿಂದ ಫಲ ಹುಟ್ಟುತ್ತದೆಯೆಂದಾ ಗಲಿ ನಾನು ಹೇಳಿಲ್ಲ. ಇಲ್ಲದ್ದನ್ನು ಕಲ್ಪಿಸಿಕೊಂಡು ದೂಷಿಸುವುದು ಸರಿಯಲ್ಲ. ಬೀಜಾಂಕುರನ್ಯಾಯದಂತೆ ಹೇತುಫಲಗಳಿಗೆ ಕಾರ್ಯಕಾರಣಭಾವವು ಅನಾದಿ ಯೆಂದು ನನ್ನ ಅಭಿಪ್ರಾಯ. ಬೀಜದಿಂದ ಅಂಕುರ ಹುಟ್ಟುವುದೋ? ಅಂಕುರ ದಿಂದ ಬೀಜ ಹುಟ್ಟುವುದೋ? ಅನಾದಿಯಾದದ್ದು ಬೀಜಾಂಕುರಗಳ ಉತ್ಪತ್ತಿ. ಹಾಗೆಯೇ ದೇಹ – ಪಾಪಪುಣ್ಯ ಕರ್ಮಗಳ ಉತ್ಪತ್ತಿ ಎಂದು ನನ್ನ ಅಭಿಪ್ರಾಯ.

ಇದಕ್ಕೆ ಸಿದ್ಧಾಂತಿಯ ಉತ್ತರ ಹೀಗೆ – ಈ ದೃಷ್ಟಾಂತ ಸರಿಯಲ್ಲ, ಸಾಧ್ಯಸಮವೆಂಬ ದೋಷದಿಂದ ಕೂಡಿದ ಹೇತು ಇದು **"ದೃಷ್ಟಾಂತಸ್ಯ ಪಕ್ಷ ತುಲ್ಯತಾ ಕಥನಂ ಸಾಧ್ಯ ಸಮಾ"** ಸಾಧಿಸಬೇಕಾದ ಪಕ್ಷದಲ್ಲಿ ಯಾವ ದೋಷವಿದೆಯೋ ಅಂತಹ ದೋಷವೇ ಇರುವ ದೃಷ್ಟಾಂತವನ್ನು ಕೊಡುವುದು ಸಾಧ್ಯಸಮಾ ಎಂಬ ದೋಷ. **ಬೀಜಾಂಕುರ** ದೃಷ್ಟಾಂತವೂ ಸಾಧಿಸಬೇಕಾದ್ದೇ ಹೊರತು ಸಿದ್ಧವಾದ್ದಲ್ಲ. ಬೀಜಾಂಕುರಗಳಿಗೂ ಕಾರ್ಯಕಾರಣ ಭಾವವಿದೆ. ಬೀಜದಿಂದ ಅಂಕುರ, ಅಂಕುರದಿಂದ ಬೀಜ ಎಂಬ ಅನ್ಯೋನ್ಯಾಶ್ರಯದೋಷ ಅಲ್ಲಿಯೂ ಇದೆ. ಅಲ್ಲದೆ ಅಲ್ಲಿಯೂ ಒಂದು ಆದಿ ಇರಲೇಬೇಕು. ಯಾವುದು ಆದಿಯೆಂದು ಹೇಳಲು ಶಕ್ಯವಿಲ್ಲ. ಆದ್ದರಿಂದ ಹೇತುಫಲಗಳಂತೆ ಆದಿಯನ್ನು ನಿಶ್ಚಯಿಸಲಾಗುವುದೇ ಇಲ್ಲವಾದ ಅನವಸ್ಥಾದೋಷವು ಇದ್ದೇ ಇದೆ. ಇನ್ನು ಬೀಜಾಂಕುರ ಸಂತತಿ ಎಂಬುದೊಂದು ಅನಾದಿಯಾಗಿದೆ ಎನ್ನುವುದು ನಿರಾಧಾರ ವಾದ ಮಾತು. ಹಾಗೆಯೇ ಹೇತು ಫಲಗಳ ಸಂತತಿಯೂ ಇಲ್ಲ. ಆದ್ದರಿಂದ ಜಾತಿವಾದವು ಯುಕ್ತವಲ್ಲ.

**ಪೂರ್ವಾಪರಾಪರಿಜ್ಞಾನಮಜಾತೇಃ ಪರಿದೀಪಕಮ್ ।**
**ಜಾಯಮಾನಾದ್ಧಿ ವೈ ಧರ್ಮಾತ್ ಕಥಂ ಪೂರ್ವಂ ನ ಗೃಹ್ಯತೇ ॥೨೧॥**

**ಪೂರ್ವಾಪರಾಪರಿಜ್ಞಾನಂ** = ಹೇತುಫಲಗಳಲ್ಲಿ ಯಾವುದು ಮೊದಲು, ಯಾವುದು ಅನಂತರ ಹುಟ್ಟುವುದು ಎಂದು ತಿಳಿಯದೇ ಹೋಗಿರುವುದು. **ಅಜಾತೇಃ ಪರಿದೀಪಕಂ** = ಯಾವ ಪದಾರ್ಥಕ್ಕೂ ಜನ್ಮವಿಲ್ಲವೆಂಬ ನಮ್ಮ ಅಜಾತಿ ವಾದವನ್ನು ಪ್ರಕಾಶಗೊಳಿಸತಕ್ಕದ್ದಾಗಿದೆ. **ಹಿ** = ಹೇಗೆಂದರೆ, **ಜಾಯಮಾನಾತ್** = ಜನಿಸುವ, **ಧರ್ಮಾತ್** = ವಸ್ತುವಿನಿಂದ, **ಪೂರ್ವಂ** = ಅದಕ್ಕೆ ಕಾರಣವಾಗಿ ಮೊದಲೇ ಇರಬೇಕಾದ ಜನಕವು. **ಕಥಂ** = ಹೇಗೆ, **ನ ಗೃಹ್ಯತೇ** = ಗ್ರಹಿಸಲ್ಪಡುವುದಿಲ್ಲ?

ಈ ಜಾತಿವಾದಿಗಳು ಹೇತು ಫಲಗಳಿಗೆ ಪೂರ್ವಾಪರಗಳು ಯಾವುವೆಂಬು ದನ್ನು ಹೇಳಲಾರದೆ ಹೋಗಿದ್ದಾರೆ. ಜನ್ಯವಾದ ಕಾರ್ಯವು ಇದ್ದಮೇಲೆ ಕಾರಣವಾದ ಜನಕವು ಇರಲೇಬೇಕು. ಆದ್ದರಿಂದ ಅನಾದಿಯೆಂದು ಹೇಳಿ ಕೈತೊಳೆದುಕೊಳ್ಳಲು ಶಕ್ಯವಿಲ್ಲ. ಯಾರಿಗೂ ಈ ಹೇತುಫಲಗಳಲ್ಲಿ ಮೊದಲು ಯಾವುದೆಂಬುದನ್ನು ನಿರ್ಣಯಿಸಲು ಶಕ್ಯವಿಲ್ಲ. ಆದ್ದರಿಂದ ಜಾತಿವಾದವೇ ಅಯುಕ್ತವೆಂದು ಸಿದ್ಧ ವಾಗುತ್ತದೆ. ಇದರಿಂದ ನಮ್ಮ ಅಜಾತಿವಾದವೇ ಸರಿಯೆಂಬುದಕ್ಕೆ ಬೆಂಬಲ ದೊರೆತಂತಾಯಿತು.

ಇಲ್ಲೊಂದು ಜಿಜ್ಞಾಸೆಯುಂಟು. **ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನ** (ಬೃಹ. ೩-೨-೧೩), **'ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್'** (ಋಕ್. ೧೦-೧೯೦-೩) ಇತ್ಯಾದಿ ಶ್ರುತಿಗಳೂ **'ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ'** (ಗೀತಾ ೧೫-೩) ಎಂಬ ಗೀತಾ ವಾಕ್ಯವೊದಲಾದವೂ ಜಾತಿವಾದವನ್ನೂ ಬೀಜಾಂಕುರನ್ಯಾಯವನ್ನೂ ಸೂಚಿಸುತ್ತವೆ. ಹಾಗೆಯೇ ಪುರಾಣ ವಚನಗಳೂ ದೊರೆಯುತ್ತವೆ. ಆದರೆ ಅದು ಪಾರಮಾರ್ಥಿಕ ಸತ್ಯವಲ್ಲ. ಅದು ವ್ಯಾವಹಾರಿಕ ಸತ್ಯವನ್ನನುಸರಿಸಿ ಮಧ್ಯಮಾಧಿಕಾರಿಗಳಿಗೆ ಬ್ರಹ್ಮವು ಅಜ, ಅದ್ವಯ ಎಂಬುದನ್ನು ಬೋಧಿಸುವುದಕ್ಕಾಗಿ ಹೊರಟಿದೆ. ಪಾರಮಾರ್ಥಿಕವಾಗಿಯಾದರೋ ಜಾತಿವಾದ ವನ್ನು ಶಾಸ್ತ್ರವು ಅಂಗೀಕರಿಸುವುದಿಲ್ಲ. ಜೀವನು ಬ್ರಹ್ಮದಿಂದ ಹುಟ್ಟಿದನೆಂಬುದು ಶಾಸ್ತ್ರ ಸಂಮತವಲ್ಲ. **"ಸ ವಾ ಏಷ ಮಹಾನಜಃ ಅಜರೋಽಮೃತೋಽ ಭಯೋ ಬ್ರಹ್ಮ"** (ಬೃಹ. ೪-೪-೨೫) ಎಂದು ಜೀವನಿಗೂ ಅದ್ವಯಬ್ರಹ್ಮಕ್ಕೂ ಸ್ಪಷ್ಟವಾಗಿ ಅಭೇದವನ್ನು ಶ್ರುತಿಯು ಹೇಳಿದೆ. **"ಅಭಯಂ ಹ ವೈ ಬ್ರಹ್ಮ ಭವತಿ, ಯ ಏವಂ ವೇದ" ಬ್ರಹ್ಮವಿದ್ ಬ್ರಹ್ಮೈವ ಭವತಿ"** ಇತ್ಯಾದಿ ಶ್ರುತಿಗಳು ಜ್ಞಾನಮಾತ್ರದಿಂದ ಜೀವನು ಬ್ರಹ್ಮವಾಗುತ್ತಾನೆ ಎಂದು ಸಾರುತ್ತವೆ. ಪಾರಮಾರ್ಥಿಕವಾಗಿ ಹೇತು ಫಲಾದಿಗಳೇ ಇಲ್ಲ. **ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್** (ಬೃಹ. ೪-೫-೧೫) ಎಂದು ಈ ಲೋಕ ವ್ಯವಹಾರವನ್ನೇ ಮಾಯಿಕವೆಂದು ಶಾಸ್ತ್ರವು ಹೇಳುತ್ತದೆ. ಈ ಗೀತಾವಾಕ್ಯವನ್ನು ಪರಿಶೀಲಿಸಬೇಕು –

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮ ಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥** (ಗೀತಾ೫-೧೪)

ಇಲ್ಲಿ ಶ್ರೀ ಶಾಂಕರ ಭಾಷ್ಯ ಹೀಗಿದೆ – **"ಸ್ವೋ ಭಾವಃ ಸ್ವಭಾವಃ ಅವಿದ್ಯಾ ಲಕ್ಷಣಾ ಪ್ರಕೃತಿಃ ಪ್ರವರ್ತತೇ" – ದೈವೀ ಹ್ಯೇಷಾ ಗುಣಮಯೀ" ಮಮ ಮಾಯಾ ದುರತ್ಯಯಾ" ಇತಿ ವಕ್ಷ್ಯಮಾಣಾ ॥** ಆದ್ದರಿಂದ ಲೋಕ ವ್ಯವಹಾರವೇ ಮಾಯಿಕವಾದದ್ದು. ಅಜಾತಿವಾದವೇ ಯುಕ್ತ ಎಂದು ತಾತ್ಪರ್ಯ.

**ಸ್ವತೋ ವಾ ಪರತೋ ವಾ ಪಿ ನ ಕಿಂಚಿದ್ವಸ್ತು ಜಾಯತೇ ।**
**ಸದಸತ್ ಸದಸದ್ವಾಽಪಿ ನ ಕಿಂಚಿದ್ವಸ್ತು ಜಾಯತೇ ॥೨೨॥**

**ಸ್ವತೋ ವಾ** = ತನ್ನಿಂದಾಗಲಿ, **ಪರತಃ** = ಇನ್ನೊಂದರಿಂದಾಗಲಿ, **ವಾ ಅಪಿ** = ಅಥವಾ ತಾನು, ಇನ್ನೊಂದು ಹೀಗೆ ಉಭಯದಿಂದಾಗಲಿ, **ನ**

**ಕಿಂಚಿದ್ವಸ್ತು ಜಾಯತೇ** = ಯಾವುದೇ ಒಂದು ವಸ್ತುವೂ ಹುಟ್ಟುವುದಿಲ್ಲ. **ಸತ್** = ಸದ್ವಸ್ತುವಾಗಲಿ, **ಅಸತ್** = ಅಸದ್ವಸ್ತುವಾಗಲಿ, **ಸದಸದ್ವಾ** = ಸದಸದ್ರೂಪವಾದ ವಸ್ತುವಾಗಲಿ, **ನ ಕಿಂಚಿದ್ವಸ್ತು ಜಾಯತೇ** = ಯಾವುದೇ ಒಂದು ವಸ್ತುವಾಗಲಿ ಹುಟ್ಟುವುದಿಲ್ಲ.

ಯಾವ ವಸ್ತುವೂ ಹೊಸದಾಗಿ ಹುಟ್ಟುವುದಿಲ್ಲವೆಂಬ ಅಜಾತಿವಾದವೇ ಯುಕ್ತವಾದದ್ದು. ಜಾತಿವಾದದಲ್ಲಾದರೋ ಯಾವುದರಿಂದ ಹುಟ್ಟುತ್ತದೆ ಎಂಬ ಪ್ರಶ್ನೆಗೆ ತನ್ನಿಂದ, ಇನ್ನೊಂದರಿಂದ, ಉಭಯದಿಂದ ಎಂದು ಮೂರು ವಿಕಲ್ಪಗಳನ್ನು ಮಾಡಲು ಸಾಧ್ಯ. ಇವುಗಳಲ್ಲಿ ಮೊದಲನೆಯದು ಸರಿಯಲ್ಲ. ಗಡಿಗೆಯಿಂದ ಗಡಿಗೆ ಹುಟ್ಟುವುದಿಲ್ಲ. ಇನ್ನೊಂದರಿಂದ ಎಂಬುದೂ ಅಸಂಗತ. ಗಡಿಗೆ ಬಟ್ಟೆಯಿಂದ ಹುಟ್ಟುವುದಿಲ್ಲ. ಉಭಯದಿಂದ ಎಂಬ ಮೂರನೆಯ ವಿಕಲ್ಪವೂ ಅಸಂಬದ್ಧ. ಗಡಿಗೆಯು ಗಡಿಗೆ, ಬಟ್ಟೆ – ಇವೆರಡರಿಂದ ಹುಟ್ಟುತ್ತದೆ ಎಂಬುದು ಹಾಸ್ಯಾಸ್ಪದವೇ ಸರಿ. ಇನ್ನು ಹುಟ್ಟುವ ಪದಾರ್ಥವು ಸತ್, ಅಸತ್, ಸದಸತ್ ಎಂಬ ಮೂರು ವಿಕಲ್ಪಗಳಲ್ಲಿ ಒಂದಾಗಬೇಕು. ಹುಟ್ಟುವ ಪದಾರ್ಥ ಸತ್ ಅಲ್ಲ. ಪರಿನಿಷ್ಪನ್ನವಾಗಿ ಈಗ ಇರತಕ್ಕದ್ದು ಸತ್. ಅದು ಹುಟ್ಟಬೇಕಾಗಿಲ್ಲ. ಅಸದ್ವಸ್ತುವಾದರೆ ಹುಟ್ಟುವುದೇ ಇಲ್ಲ. ಮೊಲದ ಕೊಂಬು ಅಸತ್. ಅದು ಹುಟ್ಟುವುದೇ ಇಲ್ಲ. ಸದಸತ್ ಎಂಬುದು ವಿರುದ್ಧವಾದರಿಂದ ಅಂತಹ ವಸ್ತುವೇ ಲೋಕದಲ್ಲಿಲ್ಲ.

ಈ ತರ್ಕ ಇರಲಿ. ಮಣ್ಣಿನಿಂದ ಗಡಿಗೆ ಹುಟ್ಟುತ್ತದೆಯಲ್ಲವೆ? ತಂದೆಯಿಂದ ಮಗನು ಹುಟ್ಟುತ್ತಾನಲ್ಲವೆ? ಈ ಪ್ರಶ್ನೆಗಳಿಗೆ ಉತ್ತರವೇನು? ನಿಜ; ಈ ರೀತಿಯಾಗಿ ಲೋಕದಲ್ಲಿ ಪ್ರತೀತಿ ಇದೆ. ಇದು ವಿವೇಚನೆ ಮಾಡದ ಮೂಢರ ನಂಬಿಕೆ. **''ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ''** (ಛಾಂ. ೬–೪–೪) ಎಂದು ಶ್ರುತಿಯು ಘೋಷಿಸಿದೆ. ''ಮಣ್ಣಿನಿಂದ ಗಡಿಗೆ ಹುಟ್ಟಿತು ಎಂಬುದು ಬರಿಯ ಮಾತು. ಮಣ್ಣಿನ ವಿಕಾರ, ಗಡಿಗೆ ಎಂಬುದೆಲ್ಲ ಮಿಥ್ಯೆ. ಮಣ್ಣು ಎಂಬುದೇ ಸತ್ಯ'' ಎಂದು ಶ್ರುತಿಯ ಅರ್ಥ. ನಮಗೆ ತೋರುವ ಕಾರ್ಯ ಕಾರಣ ಭಾವವು ಮಾಯಿಕವಾದದ್ದು. **''ತತ್ಸತ್ಯಂ''** (ಛಾಂ. ೬–೮–೭) ಎಂದು ಶ್ರುತಿಯು ಬ್ರಹ್ಮವನ್ನು ಮಾತ್ರ ಪರಮಸತ್ಯವೆಂದು ತಿಳಿಸಿದೆ. ಬ್ರಹ್ಮವು ಶಾಶ್ವತವಾದದ್ದು. ವಿಕಾರವನ್ನು ಹೊಂದದೆ ಏಕರೂಪವಾಗಿ ಸದಾ ಇರತಕ್ಕದ್ದೇ ಸತ್ಯ. ಇರತಕ್ಕದ್ದು ಬ್ರಹ್ಮವೊಂದೇ. ನಮಗೆ ಕಾಣುವ ಪದಾರ್ಥವೆಲ್ಲವೂ ಮಾಯಿಕವೆಂದು ತಿಳಿಯಬೇಕು.

ಇಲ್ಲಿ ಕಾರಣವೆಂದರೆ ಉಪಾದಾನ ಕಾರಣ, ನಿಮಿತ್ತಕಾರಣವಲ್ಲ. ಆದ್ದರಿಂದ

ಕುಂಬಾರನಿಂದ ಗಡಿಗೆ ಹುಟ್ಟುತ್ತದೆ. ನೆಯ್ಗಯವನಿಂದ ಬಟ್ಟೆ ಹುಟ್ಟುತ್ತದೆ ಎಂಬ ಪ್ರತಿಬಂದಿಯಾದ ಉತ್ತರಕ್ಕೆ ಅವಕಾಶವಿಲ್ಲ. **ಏವಂ ಚ ಏಕಮೇವಾದ್ವಿತೀಯ** ವಾದ ಬ್ರಹ್ಮದಿಂದ ಯಾವುದೂ ಹುಟ್ಟುವುದಿಲ್ಲ. ನಮಗೆ ಕಾಣುವ ಸಮಸ್ತ ವಿಶ್ವದ ಅಧಿಷ್ಠಾನವೂ ಪರಬ್ರಹ್ಮವೇ ಸರಿ. **'ಸರ್ವಂ ಖಲ್ವಿದಂ ಬ್ರಹ್ಮ', 'ತತ್ ಸತ್ಯಮ್'** ಇತ್ಯಾದಿ. ಶ್ರುತಿಗಳು ಹೇಳಿರುವಂತೆ ಸರ್ವವೂ ಬ್ರಹ್ಮವೇ ಆಗಿದ್ದು ಅದೊಂದೇ ಸತ್ಯವಾದ ಪದಾರ್ಥ. ತೋರುವ ಸಮಸ್ತವಿಶ್ವವೂ ರಜ್ಜುಸರ್ಪನ್ಯಾಯದಂತೆ ಅನ್ಯಥಾಗ್ರಹಣವೆಂಬ ಮಿಥ್ಯಾಜ್ಞಾನದಿಂದ ಕಾಣುತ್ತದೆ ಎಂಬುದು ಅಜಾತಿವಾದದ ಸಾರಾಂಶ.

**ಹೇತುರ್ನ ಜಾಯೇತೇಽನಾದೇಃ ಫಲಂ ಚಾಪಿ ಸ್ವಭಾವತಃ ।**
**ಆದಿರ್ನ ವಿದ್ಯತೇ ಯಸ್ಯ ತಸ್ಯಹ್ಯಾದಿರ್ನ ವಿದ್ಯತೇ ॥೨೩॥**

**ಅನಾದೇಃ** = ಅನಾದಿಯಾದ ಫಲಕ್ಕೆ, **ಹೇತುಃ** = ಕಾರಣವು, **ನ ಜಾಯತೇ** = ಹುಟ್ಟುವುದಿಲ್ಲ, **ಚ** = ಮತ್ತು, **ಫಲಮಪಿ** = ಫಲವೂ ಸಹ, **ಸ್ವಭಾವತಃ** = ಸಹಜವಾಗಿಯೇ ಅನಾದಿಯಾದ ಕಾರಣದಿಂದ ಅನಾವಶ್ಯಕವಾಗಿ ಹುಟ್ಟಬೇಕಾದ್ದಿಲ್ಲ. **ಹಿ** = ಹೇಗೆಂದರೆ, **ಯಸ್ಯ ಆದಿರ್ನವಿದ್ಯತೇ** = ಯಾವುದಕ್ಕೆ ಆದಿಯಾದ ಕಾರಣವೇ ಇಲ್ಲವೋ, **ತಸ್ಯ** = ಅದಕ್ಕೆ, **ಆದಿಃ** = ಜನ್ಮವು, **ನವಿದ್ಯತೇ** = ಇರುವುದಿಲ್ಲ.

ಹೇತು ಫಲಗಳು ಅನಾದಿಯೆಂದು ಅಂಗೀಕರಿಸಿದ ಮೇಲೆ **ಹೇತು** = ಫಲಗಳಿಗೆ ಜನ್ಮ (ಹುಟ್ಟು) ಇಲ್ಲವೆಂದು ಸ್ವತಃ ಸಿದ್ಧವಾಗುತ್ತದೆ. **ಹೇತು** = ಪರ ಬ್ರಹ್ಮ ಕಾರಣ. **ಫಲ** = ಜೀವ ಜಗತ್ತುಗಳು ಕಾರ್ಯ. ಆದಿರಹಿತವಾದ ಫಲದಿಂದ ಹೇತು ಹುಟ್ಟುವುದಿಲ್ಲ. ಏಕೆಂದರೆ ಹುಟ್ಟುವುದಕ್ಕೆ ನಿಮಿತ್ತವೇ ಇಲ್ಲ. ಫಲವೇ ಹೇತು ವಾಗಿ ಪರಿಣಮಿಸುವುದಿಲ್ಲ. ಹಾಗೆ ಪರಿಣಮಿಸುವುದಾದರೆ ಸದಾ ಹೇತು ಹುಟ್ಟುತ್ತಲೇ ಇರಬೇಕಾಗುತ್ತದೆ. ಹೇತುವಿದ್ದ ಮೇಲೆ ಫಲವು ಅನಾದಿಯಾಗುವುದೇ ಇಲ್ಲ. ಹಾಗೆಯೇ ಫಲವು ಆದಿರಹಿತವಾದಮೇಲೆ ಅದಕ್ಕೆ ಹೇತುವಿನ ಅಪೇಕ್ಷೆಯೇ ಇಲ್ಲ. ಆದ್ದರಿಂದ ಹೇತು ಫಲಗಳೆಂದು ಹೇಳತಕ್ಕವನು ಬ್ರಹ್ಮಜೀವಜಗತ್ತುಗಳು ಅನಾದಿಯೆಂದೂ ಅವುಗಳಲ್ಲಿ ಯಾವುದಕ್ಕೂ ಜನ್ಮವಿಲ್ಲವೆಂದೂ ಅವಶ್ಯವಾಗಿ ಒಪ್ಪಬೇಕು.

ಇನ್ನು ಮುಂದೆ ವಿಜ್ಞಾನವಾದಿಗಳಾದ ಬೌದ್ಧರ ಮತವನ್ನು ಅನುವಾದಿಸ ಲಾಗಿದೆ. ಅವರು ಹೇಳುವಂತೆ ಬಾಹ್ಯಾರ್ಥ ನಿರಾಕರಣೆಯು ವೇದಾಂತಿಗಳಿಗೆ ಸಂಮತವಾದ್ದರಿಂದ ಶ್ರೀ ಗೌಡಪಾದರು ಅದನ್ನು ಇಲ್ಲಿ ಪ್ರಸ್ತುತಗೊಳಿಸಿದ್ದಾರೆ. ಅನಂತರ ೨೮ನೆಯ ಶ್ಲೋಕದಿಂದ ವಿಜ್ಞಾನವಾದಿ ಬೌದ್ಧಮತವನ್ನೂ ನಿರಾಕರಿಸ

ಲಾಗುವುದು. ಮುಂದಿನ ನಾಲ್ಕು ಶ್ಲೋಕಗಳಲ್ಲಿ ಹೇಳುವ ವಿಜ್ಞಾನವಾದವು ಅದ್ವೈತಿಗಳಿಗೂ ಸಂಮತವಾದದ್ದು –

**ಪ್ರಜ್ಞಪ್ತೇಃ ಸನಿಮಿತ್ತತ್ವಮನ್ಯಥಾ ದ್ವಯನಾಶತಃ ।**
**ಸಂಕ್ಲೇಶಸ್ಯೋಪಲಬ್ಧೇಶ್ಚ ಪರತಂತ್ರಾಸ್ತಿತಾ ಮತಾ ॥೨೪॥**

**ಪ್ರಜ್ಞಪ್ತೇಃ** = ಜ್ಞಾನಕ್ಕೆ, **ಸನಿಮಿತ್ತತ್ವಂ** = ನಿಮಿತ್ತವಾದ ವಿಷಯದ ಸಾಹಿತ್ಯವು ಇದ್ದೇ ಇರುತ್ತದೆ. **ಅನ್ಯಥಾ** = ವಿಷಯವಿಲ್ಲದೆ ಹೋದರೆ, **ದ್ವಯ ನಾಶತಃ** = ಶಬ್ದಜ್ಞಾನ ಸ್ಪರ್ಶಜ್ಞಾನ, ಇದು ಹಳದಿಯೆಂಬ ಜ್ಞಾನ, ಇದು ಕೆಂಪು ಎಂಬ ಜ್ಞಾನ–ಇತ್ಯಾದಿ ಜ್ಞಾನಭೇದದ ನಾಶವಾಗಿ ಹೋದೀತು. **ಚ** = ಮತ್ತು **ಸಂಕ್ಲೇಶಸ್ಯ** = ದುಃಖದ, **ಉಪಲಬ್ಧೇಃ** = ಅನುಭವವಾಗುವುದರಿಂದಲೂ, **ಪರತಂತ್ರಾಸ್ತಿತಾ** = ಅನ್ಯಶಾಸ್ತ್ರದವರು ಒಪ್ಪುವ ಶಬ್ದ, ಸ್ಪರ್ಶ, ಘಟ, ಪಟ – ಇತ್ಯಾದಿ ವಿಷಯವಸ್ತುಗಳು ಇವೆಯೆಂಬುದು, **ಮತಾ** = ನಮಗೆ ಸಂಮತವಾಗಿದೆ.

ಪ್ರಜ್ಞಾನವೆಂಬ ಸತ್ಯವು ಮಾತ್ರ ಇದೆ. ಇನ್ನೊಂದು ವಸ್ತು ಹುಟ್ಟುವುದೇ ಇಲ್ಲವಾದ್ದರಿಂದ ಈ ಜ್ಞಾನಕ್ಕೆ ಅತಿರಿಕ್ತವಾದ ವಸ್ತುವೇ ಇಲ್ಲ – ಎಂದು ಹಿಂದೆ ಪ್ರತಿಪಾದಿಸಲಾಗಿದೆ. ಆದರ ಮೇಲೆ ಈಗ ಒಂದು ಆಕ್ಷೇಪ ಹುಟ್ಟುತ್ತದೆ. ಕೇವಲ ಜ್ಞಾನ ಎಂಬುದೊಂದೇ ಇರಲು ಶಕ್ಯವಿಲ್ಲ. ಒಂದು ವಿಷಯವಿಲ್ಲದ ಬರಿಯ ಜ್ಞಾನ ವಿರುವುದಿಲ್ಲ. ಶಬ್ದ, ಸ್ಪರ್ಶ, ಸಿಹಿ, ಕಹಿ, ಸುಗಂಧ, ದುರ್ಗಂಧ, ಘಟ, ಪಟ – ಮುಂತಾದ್ದನ್ನು ವಿಷಯೀಕರಿಸಿಯೇ ಜ್ಞಾನವಿರುತ್ತದೆ. 'ನನಗೊಂದು ಜ್ಞಾನ ಬಂದಿದೆ. ಯಾವುದರ ಜ್ಞಾನ ಎಂಬುದೇ ಗೊತ್ತಿಲ್ಲ!'' ಎಂದು ಯಾರೂ ಹೇಳುವು ದಿಲ್ಲ. ಇದು ಮೃದು ಶಬ್ದ – ಇದು ಕಠೋರವಾದ ಶಬ್ದ, ಈ ಬಣ್ಣ ಬಿಳುಪು – ಆ ಬಣ್ಣ ಕಪ್ಪು ಮುಂತಾದ ಸಕಲ ಜ್ಞಾನಗಳಲ್ಲಿಯೂ ಪರಸ್ಪರ ಭೇದವಿರುತ್ತದೆ. ವಿಷಯವೇ ಇಲ್ಲದಿದ್ದರೆ ಈ ಜ್ಞಾನಗಳ ಭೇದವೇ – ವೈಚಿತ್ರ್ಯವೇ ಇಲ್ಲದೆ ಹೋದೀತು. ಮುಳ್ಳು ಚುಚ್ಚಿದರೆ ನೋವಾಗುತ್ತದೆ. ನೋವು ಎಂಬುದು ತಿಳಿಯು ತ್ತದೆ. ಮುಳ್ಳು ಚುಚ್ಚಿದೆ ಎಂಬುದೂ ತಿಳಿಯುತ್ತದೆ. ನೋವು, ಮುಳ್ಳು ಮುಂತಾದವು ಇವೆ. ಜ್ಞಾನಾತಿರಿಕ್ತವಾದ ಬಾಹ್ಯ ಪದಾರ್ಥಗಳಿವೆ ಎಂಬುದು ಅನುಭವಗೋಚರ. ಆದ್ದರಿಂದಲೇ ನ್ಯಾಯ, ವೈಶೇಷಿಕ – ಮುಂತಾದ ಸಕಲ ದ್ವೈತಶಾಸ್ತ್ರಗಳೂ ಬಾಹ್ಯಪದಾರ್ಥಗಳನ್ನು ಒಪ್ಪುತ್ತವೆ. ಅದೇ ಸರಿಯೆಂದು ನಮ್ಮ ಅಭಿಪ್ರಾಯವಾಗಿದೆಯೆಂದು ಆಕ್ಷೇಪ. ಅದಕ್ಕೆ ಸಮಾಧಾನ–

**ಪ್ರಜ್ಞಪ್ತೇಃ ಸನಿಮಿತ್ತತ್ವಮಿಷ್ಯತೇ ಯುಕ್ತಿದರ್ಶನಾತ್ ।**
**ನಿಮಿತ್ತಸ್ಯಾನಿಮಿತ್ತತ್ವಮಿಷ್ಯತೇ ಭೂತದರ್ಶನಾತ್ ॥೨೫॥**

**ಪ್ರಜ್ಞಪ್ತೇಃ** = ಜ್ಞಾನಕ್ಕೆ, **ಸನಿಮಿತ್ತತ್ವಂ** = ನಿಮಿತ್ತವಾದ ವಿಷಯದ ಸಾಹಿತ್ಯವಿದೆಯೆಂದು, **ಯುಕ್ತದರ್ಶನಾತ್** = ಹಿಂದೆ ಹೇಳಿದ ಯುಕ್ತಿಗಳಿರುವುದರಿಂದ, **ಇಷ್ಯತೇ** = ನಿಮ್ಮಿಂದ ಇಚ್ಛಿಸಲ್ಪಡುತ್ತದೆ. ಆದರೆ, **ನಿಮಿತ್ತಸ್ಯ**= ನೀವು ಹೇಳಿದ ನಿಮಿತ್ತಕ್ಕೆ, **ಅನಿಮಿತ್ತತ್ವಂ** = ಅದು ನಿಮಿತ್ತವೇ ಅಲ್ಲವೆಂದು, **ಭೂತದರ್ಶನಾತ್** = ಭೂತ – ಪರಮಾರ್ಥಸತ್ಯದ ದರ್ಶನದಿಂದ, **ಇಷ್ಯತೇ** = ನಮ್ಮಿಂದ ಇಚ್ಛಿಸಲ್ಪಡುವುದು.

ಜ್ಞಾನಕ್ಕೆ ವಿಷಯವಿದ್ದೇ ಇರುತ್ತದೆಯೆಂದು ಯುಕ್ತಿಗಳಿಂದ ಆಕ್ಷೇಪಕಾರನು ಸಾಧಿಸಿದ್ದಾನೆ. ಆದು ಸರಿಯಲ್ಲ. ಆತನಿಗೆ ಸತ್ಯವು ತಿಳಿದಿಲ್ಲ. ಪರಮಾರ್ಥ ಸತ್ಯವನ್ನರಿತಾಗ ಜ್ಞಾನಕ್ಕೆ ವಿಷಯವು ಇಲ್ಲವೇ ಇಲ್ಲವೆಂದು ಗೊತ್ತಾಗುತ್ತದೆ.

**''ಮೃತ್ತಿಕೇತ್ಯೇವ ಸತ್ಯಂ''** ಎಂದು ಶ್ರುತಿಯು ಹೇಳಿದೆ. ನಮಗೆ ಕಾಣುವ ವಸ್ತುವಿನ ನಾಮರೂಪಗಳೆಲ್ಲವೂ ಕಲ್ಪಿತವಾದವು. ಆ ವಸ್ತುವಿನ ಮೂಲವು ಮಾತ್ರ ಸತ್ಯವಾಗುತ್ತದೆ. ಗಡಿಗೆಯ ಮೂಲ ಮಣ್ಣು. ಅದೇ ಸತ್ಯವೆಂದು ಶ್ರುತಿಯ ವಾಚ್ಯಾರ್ಥ. ಮಣ್ಣಿನ ಮೂಲ ಯಾವುದೆಂದು ಅರಸುತ್ತ ಹೋಗಬೇಕು. ಕಡೆಗೆ ಉಳಿಯುವುದು ಜ್ಞಾನ ಸ್ವರೂಪವಾದ ಬ್ರಹ್ಮವೇ. ಅದೇ ಪರಮಾರ್ಥ ಸತ್ಯ. ಅದನ್ನರಿತಾಗ ಮಣ್ಣೂ ಇರುವುದಿಲ್ಲ. ಗಡಿಗೆಯೂ ಇರುವುದಿಲ್ಲ. ಹೀಗೆ ಗೋಚರವಾಗುವ ಸಕಲ ಪದಾರ್ಥಗಳಿಗೂ ಉತ್ತರೋತ್ತರವಾಗಿ ಮೂಲವನ್ನರಸಿದಾಗ ಕಡೆಗೆ ಉಳಿಯುವ ಪರಮಾರ್ಥವೇ ಸತ್ಯವಾದದ್ದು. ಉಳಿದುದೆಲ್ಲವೂ ಭ್ರಾಂತಿಯಿಂದ (ಅವಿದ್ಯೆಯಿಂದ) ಕಲ್ಪಿತವಾದದ್ದು. ಆದ್ದರಿಂದಲೇ ಸುಷುಪ್ತಿಯಲ್ಲಿರುವ ಜನರಿಗೂ, ನಿರ್ವಿಕಲ್ಪ ಸಮಾಧಿಯಲ್ಲಿ ಇರತಕ್ಕವರಿಗೂ ಮುಕ್ತರಾದವರಿಗೂ ಯಾವ ವಿಷಯ ವಸ್ತುಗಳೂ ತೋರುವುದೇ ಇಲ್ಲ. ನಿಮಿತ್ತವೆಲ್ಲವೂ ಅನಿಮಿತ್ತವಾಗಿ ಬಿಡುತ್ತದೆ. ಏಕೆಂದರೆ ಅವರಿಗೆ ಭ್ರಾಂತಿದರ್ಶನವಿರುವುದಿಲ್ಲ. ಆತ್ಮವ್ಯತಿರಿಕ್ತವಾದ ಬಾಹ್ಯವಸ್ತುವೊಂದೂ ಇರುವುದಿಲ್ಲ. ಹುಚ್ಚರಿಗೆ ಕಾಣಿಸುವ ವಸ್ತು ಹುಚ್ಚರಲ್ಲದವರಿಗೆ ಕಾಣಿಸುವುದಿಲ್ಲವಷ್ಟೆ! ಆಕ್ಷೇಪಕಾರನು ಹೇಳಿದ ಜ್ಞಾನಭೇದ, ದುಃಖ ಪ್ರಾಪ್ತಿ– ಎಂಬ ಯುಕ್ತಿಗಳಿಗೆ ಉತ್ತರವನ್ನು ಹೇಳಿದ್ದಾಯಿತು.

**ಚಿತ್ತಂ ನ ಸಂಸ್ಪೃಶತ್ಯರ್ಥಂ ನಾರ್ಥಾಭಾಸಂ ತಥೈವ ಚ ।**
**ಅಭೂತೋ ಹಿ ಯತಶ್ಚಾರ್ಥೋ ನಾರ್ಥಾಭಾಸಸ್ತತಃ ಪೃಥಕ್ ॥೨೬॥**

**ಚಿತ್ತಂ** = ಮನಸ್ಸು, **ಅರ್ಥಂ** = ಬಾಹ್ಯವಸ್ತುವನ್ನು, **ನ ಸಂಸ್ಪೃಶತಿ** = ಸ್ಪರ್ಶಿಸುವುದಿಲ್ಲ, **ತಥೈವ ಚ** = ಹಾಗೆಯೇ, **ಅರ್ಥಾಭಾಸಂ** = ಬಾಹ್ಯ ವಸ್ತುವಿನಂತೆ ತೋರತಕ್ಕದನ್ನೂ, **ನ** = ಸ್ಪರ್ಶಿಸುವುದಿಲ್ಲ. **ಯತಃ** = ಏಕೆಂದರೆ

ಹಿಂದೆ ಹೇಳಿದಂತೆ ಜಾಗ್ರತ್ತಿನಲ್ಲಿಯೂ **ಅರ್ಥಃ** = ಬಾಹ್ಯಾರ್ಥವು, **ಅಭೂತಃ** = ಸತ್ಯವಾಗಿರಲಿಲ್ಲ. **ಅರ್ಥಾಭಾಸಃ** = ಭ್ರಮೆಯಿಂದ ತೋರುವ ವಸ್ತು, **ತತಃ** = ಮನಸ್ಸಿಗಿಂತ, **ಪೃಥಕ್** = ಬೇರೆಯಾಗಿ, **ನ** = ಇಲ್ಲ.

ಜ್ಞಾನವು ಯಾವಾಗಲೂ ಸವಿಷಯಕವಾಗಿಯೇ ಇರುತ್ತದೆಯೆಂಬುದು ಅನುಭವಸಿದ್ಧವಾಗಿದೆ. ಜ್ಞೇಯವಾದ ವಿಷಯವಿಲ್ಲದಿದ್ದರೆ ಕೇವಲ ಜ್ಞಾನವೂ ಇಲ್ಲ ವೆಂದೇ ಹೇಳಬೇಕಾಗುತ್ತದೆ ಎಂದು ಆಕ್ಷೇಪ ಹುಟ್ಟಬಹುದು. ಅದಕ್ಕೆ ಸಮಾಧಾನ ಹೀಗೆ – ಘಟಜ್ಞಾನ, ಪಟಜ್ಞಾನ – ಇತ್ಯಾದಿಗಳಲ್ಲಿ ಘಟ ಮತ್ತು ಜ್ಞಾನ, ಪಟ ಮತ್ತು ಜ್ಞಾನ ಎಂಬ ಎರಡು ಪದಾರ್ಥಗಳಿವೆಯೆಂದು ತಿಳಿದು, ಈ ಶಂಕೆ ಹುಟ್ಟಿದೆ. ಹಾಗೆ ತಿಳಿಯಬಾರದು. ಘಟಜ್ಞಾನ, ಪಟಜ್ಞಾನ – ಎಂಬುದು ಒಂದೇ ಪದಾರ್ಥ. ಘಟ, ಪಟ – ಎಂಬ ವಸ್ತುಗಳಿಲ್ಲದೆಯೇ ಸ್ವಪ್ನದಲ್ಲಿ ಆ ರೀತಿಯಾದ ಜ್ಞಾನವು ಬರುತ್ತದೆ. ಹಾಗೆಯೇ ಜಾಗ್ರತ್ತಿನಲ್ಲಿಯೂ ಬರಲು ಅಡ್ಡಿ ಏನು? ಹೀಗೆ ಜ್ಞಾನವೇ ವಿಷಯಾಕಾರವಾಗಿರುವುದರಿಂದ ಬಾಹ್ಯಪದಾರ್ಥದ ಅಸ್ತಿತ್ವವು ಅನಾವಶ್ಯಕವಾಗುತ್ತದೆ. ಆದ್ದರಿಂದ ಬಾಹ್ಯಾರ್ಥವೇ ಇಲ್ಲದ ಪ್ರಯುಕ್ತ ಚಿತ್ತವು ಬಾಹ್ಯಾರ್ಥವನ್ನೂ ಅರ್ಥಾಭಾಸವನ್ನೂ ಸ್ಪರ್ಶಿಸುವುದೇ ಇಲ್ಲ. ಪರಮಾರ್ಥದಲ್ಲಿ ಬಾಹ್ಯವಸ್ತುವೇ ಇಲ್ಲವಾದ್ದರಿಂದ ಅದನ್ನು ಸ್ಪರ್ಶಿಸುವ ಪ್ರಶ್ನೆ ಏಳುವುದಿಲ್ಲ. ಚಿತ್ತದಲ್ಲಿ ನಮಗೆ ಕಾಣುವ ಪದಾರ್ಥಗಳು ಚಿತ್ತದಲ್ಲಿಯೇ ಸೇರಿಕೊಂಡು ಬಿಟ್ಟಿವೆ. ಮನಸ್ಸು ಪದಾರ್ಥವನ್ನು ಗ್ರಹಿಸುತ್ತದೆ ಎಂಬುದು ವಂಧ್ಯಾಪುತ್ರನನ್ನು ಆಲಿಂಗಿಸಿಕೊಳ್ಳುತ್ತಾನೆ ಎಂದು ಹೇಳಿದಂತೆಯೇ!

**ನಿಮಿತ್ತಂ ನ ಸದಾ ಚಿತ್ತಂ ಸಂಸ್ಪೃಶತ್ಯಧ್ವಸು ತ್ರಿಷು ।**
**ಅನಿಮಿತ್ತೋ ವಿಪರ್ಯಾಸಃ ಕಥಂ ತಸ್ಯ ಭವಿಷ್ಯತಿ ॥೨೭॥**

**ಚಿತ್ತಂ** = ಮನಸ್ಸು, **ನಿಮಿತ್ತಂ** = ವಿಷಯವನ್ನು, **ಸದಾ** = ಯಾವಾಗಲೂ, **ತ್ರಿಷು ಅಧ್ವಸು** = ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲ ಗಳಲ್ಲಿಯೂ, **ನ ಸಂಸ್ಪೃಶತಿ** = ಸ್ಪರ್ಶಿಸುವುದೇ ಇಲ್ಲ. **ತಸ್ಯ** = ಆ ಮನಸ್ಸಿಗೆ, **ಅನಿಮಿತ್ತಃ** = ವಿಷಯವಿಲ್ಲದೆಯೇ, **ವಿಪರ್ಯಾಸಃ** = ವಿಷಯಸ್ಪರ್ಶವೆಂಬ ವೈಪರೀತ್ಯವು, **ಕಥಂ** = ಹೇಗೆ, **ಭವಿಷ್ಯತಿ** = ಸಂಭವಿಸೀತು.

ಚೈತ್ರನನ್ನು ನೋಡಿ 'ಇವನು ಮೈತ್ರ' ಎಂಬ ಭ್ರಾಂತಿ ಬರಬೇಕಾದರೆ, ಮೊದಲು ಮೈತ್ರನನ್ನು ನೋಡಿರಬೇಕು. ಹಗ್ಗವನ್ನು ನೋಡಿ 'ಇದು ಹಾವು' ಎಂಬ ಭ್ರಮೆ ಬರಬೇಕಾದರೆ ಹಾವು ಹೇಗಿರುತ್ತದೆಯೆಂಬುದನ್ನು ತಿಳಿದೇ ಇರ ಬೇಕಾಗುವುದರಿಂದ ಹಾವನ್ನು ನೋಡಿರಬೇಕು. ಆದ್ದರಿಂದ ವಿಷಯವಾದ

ಘಟಾದಿ ಬಾಹ್ಯವಸ್ತುಗಳೇ ಯಾವಾಗಲೂ ಇರುವುದಿಲ್ಲವೆಂದಾದರೆ, ಘಟ ಜ್ಞಾನ, ಪಟಜ್ಞಾನಗಳೆಂಬ ಭ್ರಾಂತಿಗಳು ಹೇಗೆ ಬರುತ್ತವೆ?

ಘಟಾದಿಬಾಹ್ಯ ವಸ್ತುವಿಲ್ಲದೆಯೇ 'ಇದು ಘಟ' ಎಂಬ ಜ್ಞಾನವು ಬಂದರೆ ಅದು ಜ್ಞಾನದ ವಿಪರ್ಯಾಸವೆನಿಸುತ್ತದೆ. ಇದೇ ಅನ್ಯಥಾಖ್ಯಾತಿ – ಭ್ರಾಂತಿ. ಸ್ವಸ್ವರೂಪದ ಅನ್ಯಥಾ ಜ್ಞಾನ ಇದು. ಆಗ ಸ್ವಸ್ವರೂಪವು ಇರಲೇಬೇಕು. ಸ್ವಸ್ವರೂಪ ಜ್ಞಾನವೇ ಜ್ಞಾನದ ಅವಿಪರ್ಯಾಸ. ಬಾಹ್ಯವಸ್ತುವಿದ್ದರೆ ಮಾತ್ರ ಇದು ಆಗುತ್ತದೆ. ಆದ್ದರಿಂದ ಬಾಹ್ಯವಿರಲೇಬೇಕು ಎಂದು ಪೂರ್ವಪಕ್ಷ.

ಇದಕ್ಕೆ ಉತ್ತರ ಹೀಗೆ–ಜ್ಞಾನದ ವಿಪರ್ಯಾಸವು ಇದ್ದೇ ಇದೆ. ಭ್ರಾಂತಿಯು ಅಭ್ರಾಂತಿ ಪೂರ್ವಕವೇ ಎಂಬ ನಿಯಮವನ್ನು ನಾವು ಸ್ವೀಕರಿಸುವುದಿಲ್ಲ. ನಿಮಿತ್ತವಾದ ಘಟಾದಿವಸ್ತುವಿಲ್ಲದಿದ್ದರೂ ಘಟವಿದ್ದಂತೆ ತಿಳಿಯುವುದು ಚಿತ್ತದ ಸ್ವಭಾವ. ಅವಿದ್ಯೆಯೇ ಹೀಗೆ ತಿಳಿಯುವುದಕ್ಕೆ ಕಾರಣವಾಗಿದೆ. ಜಗದ್ವ್ಯವಹಾರವೇ ಅವಿದ್ಯಾ ಪೂರ್ವಕವಾಗಿದೆ.

**ಪ್ರಜ್ಞಪ್ತೇಃ ಸನಿಮಿತ್ತತ್ವಂ** (೪–೨೫) ಎಂಬ ಶ್ಲೋಕದಿಂದ ಇದುವರೆಗೆ ಹೇಳಿದ ವಿಜ್ಞಾನವಾದ ಬೌದ್ಧರ ಹೇಳಿಕೆ ವೇದಾಂತಿಗಳಿಗೂ ಸಂಮತ. ಆದರೆ ಅವರು ಇನ್ನೂ ಹೇಳುವ ಇತರ ವಿಚಾರಗಳು ವೇದಾಂತಿಗಳಿಗೆ ಸಂಮತವಲ್ಲ ಎಂದು ಮುಂದಿನ ಶ್ಲೋಕಗಳು ಪ್ರವೃತ್ತವಾಗಿವೆ.

**ತಸ್ಮಾನ್ನ ಜಾಯತೇ ಚಿತ್ತಂ ಚಿತ್ತದೃಶ್ಯಂ ನ ಜಾಯತೇ ।**
**ತಸ್ಯ ಪಶ್ಯಂತಿ ಯೇ ಜಾತಿಂ ಖೇ ವೈ ಪಶ್ಯಂತಿ ತೇ ಪದಮ್ ॥೨೮॥**

**ತಸ್ಮಾತ್** = ಯಾವ ವಸ್ತುವೂ ಹುಟ್ಟುವುದಿಲ್ಲವಾದ್ದರಿಂದ, **ಚಿತ್ತಂ** = ಚಿತ್ತವೂ ಸಹ, **ನ ಜಾಯತೇ** = ಹುಟ್ಟುವುದಿಲ್ಲ. **ಚಿತ್ತದೃಶ್ಯಂ** = ಚಿತ್ತಕ್ಕೆ ಗೋಚರವಾಗುವ ವಸ್ತುವೂ ಸಹ **ನ ಜಾಯತೇ** = ಹುಟ್ಟುವುದಿಲ್ಲ, **ತಸ್ಯ** = ಆ ಚಿತ್ತಕ್ಕೆ, **ಜಾತಿಂ** = ಜನ್ಮವಿದೆಯೆಂದು, **ಯೇ** = ಯಾವ ವಿಜ್ಞಾನವಾದಿ ಬೌದ್ಧರು ಹೇಳುತ್ತ ಇದ್ದಾರೋ, **ತೇ** = ಅವರು, **ಖೇ** = ಆಕಾಶದಲ್ಲಿ, **ಪದಂ** = ಪಕ್ಷಿಗಳ, **ಪದಂ** = ಹೆಜ್ಜೆಯ ಗುರುತನ್ನು, **ಪಶ್ಯಂತಿ** = ಕಾಣುತ್ತಾರೆ.

ವೇದಾಂತಿಗಳ ಉತ್ತರ ಇದು –

ಚಿತ್ತದೃಶ್ಯವಾದ ವಸ್ತುಗಳು ಹುಟ್ಟುವುದಿಲ್ಲವೆಂದು ಸಾಧಿಸಿದ ಮೇಲೆ ಈ ವಿಜ್ಞಾನವಾದಿ ಬೌದ್ಧರು ಚಿತ್ತವನ್ನು ಮಾತ್ರ ಉಳಿಸುವುದೇಕೆ? ಅದೂ ಹುಟ್ಟುವುದಿಲ್ಲವೆಂಬುದೇ ಸರಿ. ಚಿತ್ತವೂ ಹುಟ್ಟುವುದಿಲ್ಲ, ಅದೂ ಸಹ ಘಟಾದಿ

ವಸ್ತುಗಳಿಗೆ ಸಮಾನವಾದದ್ದು. ಈ ವಿಜ್ಞಾನವಾದಿಗಳು ಚಿತ್ತಕ್ಕೆ ಜನ್ಮವನ್ನು ಒಪ್ಪುವಂತೆಯೇ ಕ್ಷಣಿಕತ್ವ ದುಃಖಿತ್ವಾದಿಗಳನ್ನೂ ಅದು ಆತ್ಮವಲ್ಲವೆಂಬುದನ್ನೂ ಅಂಗೀಕರಿಸುತ್ತಾರೆ. ಚಿತ್ತದ ಸ್ವರೂಪವನ್ನೂ ಚಿತ್ತದಿಂದಲೇ ತಿಳಿಯುವುದಕ್ಕಾಗುವುದಿಲ್ಲವೆಂದೂ ಒಂದೇ ಚಿತ್ತಕ್ಕೆ ಕರ್ತೃತ್ವ ವಿರುದ್ಧವಾದ್ದರಿಂದಲೇ ಚಿತ್ತದ ಸ್ವರೂಪವು ಅಜ್ಞೇಯವೆಂದೂ ಅವರ ಅಭಿಪ್ರಾಯ.

ಆಕಾಶದಂತೆ ನಿರ್ಮಲವಾದ ಚಿನ್ಮಾತ್ರ ಸ್ವರೂಪ ಬ್ರಹ್ಮದಲ್ಲಿ ಚಿತ್ತವು ಹುಟ್ಟುತ್ತದೆಯೆಂದರೆ, ಆಕಾಶದಲ್ಲಿ ಹಾರಿಹೋದ ಹಕ್ಕಿಯ ಹೆಜ್ಜೆಯ ಗುರುತು ಕಾಣಿಸುತ್ತದೆ ಎಂದು ಹೇಳಿದಂತೆಯೇ ಸರಿ ಎಂದು ವೇದಾಂತಿಗಳ ಅಭಿಪ್ರಾಯ. ''ಈ ವಿಜ್ಞಾನವಾದಿಗಳು ಇತರ ದ್ವೈತಿಗಳಿಗಿಂತ ಅತ್ಯಂತಸಾಹಸಿಕರು. ಇನ್ನು ಸರ್ವಶೂನ್ಯವಾದಿಗಳಾದ ಬೌದ್ಧರಾದರೋ ಜಗತ್ತನ್ನು ಎದುರಿಗೆ ನೋಡುತ್ತಿರುವಾಗಲೇ ಇದೆಲ್ಲವೂ ಶೂನ್ಯ, ಏನೂ ಇಲ್ಲವೇ ಇಲ್ಲ. ನಮ್ಮ ಶಾಸ್ತ್ರವೂ ಶೂನ್ಯ! ಎನ್ನುತ್ತಾರೆ. ಇವರು ವಿಜ್ಞಾನವಾದಿಗಳಿಗಿಂತಲೂ ಸಾಹಸಿಕರು! ಇವರು ಆಕಾಶವನ್ನು ಮುಷ್ಟಿಯಲ್ಲಿ ಹಿಡಿದುಕೊಳ್ಳಲು ಬಯಸುತ್ತಾರೆ!'' ಎಂದು ಶ್ರೀ ಶಂಕರ ಭಗವತ್ಪಾದರು ತಮ್ಮ ಭಾಷ್ಯದಲ್ಲಿ ಬರೆದಿದ್ದಾರೆ. ವಿಜ್ಞಾನವಾದ, ಶೂನ್ಯವಾದಗಳೆರಡೂ ಬೌದ್ಧಮತದ ಪ್ರಭೇದಗಳು. ಸೌತ್ರಾಂತಿಕ, ವೈಭಾಷಿಕ ಎಂಬ ಇನ್ನೂ ಎರಡು ಭೇದಗಳಿವೆ.

ಪ್ರಾಸಂಗಿಕವಾಗಿ ಬಂದ ಬೌದ್ಧರ ವಿಜ್ಞಾನವಾದವನ್ನು ದೂಷಿಸಿದ್ದಾಯಿತು. ಬ್ರಹ್ಮವೇ ಬಾಹ್ಯವಸ್ತುವಾಗಿ ಹುಟ್ಟುವುದೆಂದು ಪೂರ್ವೋಕ್ತವಾದ ಇನ್ನೊಂದು ವಾದವನ್ನು ದೂಷಿಸಿದ್ದಾಗಿದೆ. ಅದನ್ನೀಗ ಉಪಸಂಹರಿಸುವುದಕ್ಕಾಗಿ ಮುಂದಿನ ಶ್ಲೋಕವು ಹೊರಟದೆ.

**ಅಜಾತಂ ಜಾಯತೇ ಯಸ್ಮಾದಜಾತಿಃ ಪ್ರಕೃತಿಸ್ತತಃ ।**
**ಪ್ರಕೃತೇರನ್ಯಥಾಭಾವೋ ನ ಕಥಂ ಚಿದ್ ಭವಿಷ್ಯತಿ ॥೨೯॥**

**ಅಜಾತಂ** = ಜನ್ಮರಹಿತವಾದ ಬ್ರಹ್ಮವೇ ಚಿತ್ತ– ಮುಂತಾದ ರೂಪದಲ್ಲಿ, **ಯಸ್ಮಾತ್** – ಯಾವ ಕಾರಣದಿಂದ, **ಜಾಯತೇ** = ಹುಟ್ಟುತ್ತದೆ ಎಂದು ವಾದಿಗಳು ಕಲ್ಪಿಸಿಕೊಂಡಿದ್ದಾರೋ, **ತತಃ** = ಆ ಕಾರಣದಿಂದ, **ಅಜಾತಿಃ** = ಜನ್ಮರಹಿತವಾದ ಬ್ರಹ್ಮವು. **ಪ್ರಕೃತಿಃ** = ಆ ಎಲ್ಲ ವಸ್ತುಗಳಿಗೂ ಪ್ರಕೃತಿಯೆಂದು ಸಿದ್ಧವಾಗುತ್ತದೆ. **ಪ್ರಕೃತೇಃ** = ಪ್ರಕೃತಿಗೆ, **ಅನ್ಯಥಾಭಾವಃ** = ಅನ್ಯಸ್ವರೂಪವಾಗುವುದು, **ಕಥಂಚಿತ್** = ಯಾವ ರೀತಿಯಲ್ಲಿಯೂ ಎಂದಿಗೂ, **ನ ಭವಿಷ್ಯತಿ** = ಆಗುವುದಿಲ್ಲ.

ಬ್ರಹ್ಮವು ಬಾಹ್ಯ ಪದಾರ್ಥವಾಗಿ ಹುಟ್ಟುತ್ತದೆ ಎನ್ನತಕ್ಕವರು ಚಿತ್ತ, ಚಿತ್ತದೃಶ್ಯಗಳೆಲ್ಲವೂ ಬ್ರಹ್ಮದ ವಿಕೃತಿಗಳೆಂದು ಹೇಳಬೇಕಾಗುತ್ತದೆ. ಅಲ್ಲದೆ ಮೂಲವಸ್ತು ಜನ್ಮರಹಿತವೆಂದೂ ಅದೇ ಈ ವಸ್ತುಗಳ ಪ್ರಕೃತಿಯೆಂದೂ ಅಂಗೀಕರಿಸಬೇಕು. ಪ್ರಕೃತಿಯಾದ ಬ್ರಹ್ಮವಾದರೋ ಜನ್ಮರಹಿತ. ಆದ್ದರಿಂದಲೇ ಅದು ನಿತ್ಯವಾದದ್ದು. ನಿತ್ಯವಾದ ವಸ್ತು ಅವಯವ ರಹಿತವಾದದ್ದು. ಅದು ಪರಿಣಾಮವನ್ನು ಹೊಂದುವುದೇ ಇಲ್ಲ. ಅನ್ಯಥಾ ಭಾವವೆಂದರೆ ಪರಿಣಾಮವೇ. ಮೃತ್ತಿಕೆಯ ಅನ್ಯಥಾ ಭಾವವು ಗಡಿಗೆ. ಹಾಗೆ ಪರಿಣಾಮಿಸತಕ್ಕದ್ದು ನಿತ್ಯವಲ್ಲ. ಆದ್ದರಿಂದ ನಿತ್ಯವಾದ ಬ್ರಹ್ಮವು ಯಾವ ರೀತಿಯಲ್ಲಿಯೂ ಎಂದಿಗೂ ಪರಿಣಮಿಸುವುದಿಲ್ಲ. ಆದ್ದರಿಂದಲೇ ಬ್ರಹ್ಮವು ಬಾಹ್ಯ ವಸ್ತುವಾಗಿ ಹುಟ್ಟುತ್ತದೆ ಎಂಬುದು ಅಸಂಗತ. (ಈ ೪ನೇ ಪ್ರಕರಣದಲ್ಲಿರುವ **'ನ ಭವತ್ಯಮೃತಂ ಮರ್ತ್ಯಂ'** ಎಂಬ (೭ನೇ ಕಾರಿಕೆ, ಶ್ಲೋಕವನ್ನು ನೋಡಿ).

ಆತ್ಮನಿಗೆ ಸಂಸಾರವೂ ಮೋಕ್ಷವೂ ಪರಮಾರ್ಥವಾಗಿ ಇವೆಯೆಂದು ವಾದಿಸುವ ದ್ವೈತಿಗಳ ಪಕ್ಷದಲ್ಲಿ ಇನ್ನೊಂದು ದೋಷವಿದೆ ಎಂದು ಈಗ ಹೇಳಲಾಗುವುದು.

**ಅನಾದೇರಂತವತ್ತ್ವಂ ಚ ಸಂಸಾರಸ್ಯ ನ ಸೇತ್ಸ್ಯತಿ ।**
**ಅನಂತತಾ ಚಾದಿಮತೋ ಮೋಕ್ಷಸ್ಯ ನ ಭವಿಷ್ಯತಿ ॥೩೦॥**

**ಅನಾದೇಃ** = ಅನಾದಿಯಾದ, **ಸಂಸಾರಸ್ಯ** = ಸಂಸಾರಕ್ಕೆ, **ಅಂತವತ್ತ್ವಂ** = ಅಂತ್ಯವು (ವಿನಾಶವು) **ನ ಭವಿಷ್ಯತಿ** = ಆಗುವುದಿಲ್ಲ, **ಆದಿಮತಃ** = ಆದಿಯುಳ್ಳ ಎಂದರೆ ಹೊಸದಾಗಿ ಹುಟ್ಟುವ, **ಮೋಕ್ಷಸ್ಯ** = ಮೋಕ್ಷಕ್ಕೆ **ಅನಂತತಾ** = ಅಂತ್ಯರಾಹಿತ್ಯವು ಎಂದರೆ ಶಾಶ್ವತ ಸ್ಥಿತಿಯು, **ನ ಭವಿಷ್ಯತಿ** = ಆಗುವುದಿಲ್ಲ.

ಸಂಸಾರಮೋಕ್ಷಗಳು ಪರಮಾರ್ಥವಾಗಿವೆಯೆಂಬ ಪಕ್ಷದಲ್ಲಿ ಮೊದಲು ಸಂಸಾರಬಂಧ, ಅನಂತರ ಮೋಕ್ಷವೆಂಬ ಕ್ರಮವನ್ನೂ ಹೇಳಬೇಕು. ಸಂಸಾರವು ಅನಾದಿಯಾಗಿ ಇದೆಯೆಂದರೆ ಅದಕ್ಕೆ ನಾಶವಿಲ್ಲ, ಅದು ಮುಗಿಯುವುದೇ ಇಲ್ಲ ಎಂದು ಒಪ್ಪಬೇಕಾಗುತ್ತದೆ. ಅನಾದಿಯಾದ ಭಾವವಸ್ತುವಿಗೆ ಅಂತ್ಯವು ಎಲ್ಲಿಯೂ ಕಂಡು ಬರುವುದಿಲ್ಲ. ಅನಾದಿಯಾದ ಆತ್ಮನಿಗೆ ಅಂತ್ಯವಿಲ್ಲವಷ್ಟೇ. ಸಂಸಾರವು ನಿತ್ಯವಾದರೆ ಮೋಕ್ಷಶಾಸ್ತ್ರವು ವ್ಯರ್ಥವಾದೀತು. ಇನ್ನು ಭಕ್ತಿಜ್ಞಾನಗಳಿಂದ ಮೋಕ್ಷವು ಹೊಸದಾಗಿ ಪ್ರಾಪ್ತವಾಗುತ್ತದೆಯೆಂದರೆ, ಮೋಕ್ಷವು ಶಾಶ್ವತವಲ್ಲ ಎಂದಾಗುತ್ತದೆ. ಏಕೆಂದರೆ, ಯಾವುದು ಸಾದಿಯೋ ಹೊಸದಾಗಿ ಹುಟ್ಟುತ್ತದೆಯೋ ಅದು ಶಾಶ್ವತವಲ್ಲ, ವಿನಾಶಿಯೇ ಆಗಿರುತ್ತದೆ. ಹೊಸದಾಗಿ ಹುಟ್ಟುವ ಘಟ

ಮುಂತಾದ ಯಾವ ವಸ್ತುವೂ ಶಾಶ್ವತವಲ್ಲ. ಅದು ನಾಶವಾಗುತ್ತದೆಯೆಂಬುದು ಲೋಕದಲ್ಲಿ ಸ್ಪಷ್ಟವಾಗಿದೆ.

ಸಂಸಾರದುಃಖ ಧ್ವಂಸವೇ ಮೋಕ್ಷ. ಧ್ವಂಸಕ್ಕೆ ಆದಿಯಿದೆ ಅಂತ್ಯವಿಲ್ಲ ಎಂದು ತಾರ್ಕಿಕರು ಹೇಳಬಹುದು. ಧ್ವಂಸವೆಂದರೆ ಅಭಾವ. ಅದು ತಾರ್ಕಿಕರ ವಿಕಲ್ಪವೇ ಹೊರತು ಒಂದು ವಸ್ತುವಲ್ಲ. ಶಶವಿಷಾಣ, ಗಗನ ಕುಸುಮ ಎಂದಂತೆ ಈ ಧ್ವಂಸಾಭಾವ. ಮೋಕ್ಷವು ಧ್ವಂಸಾಭಾವವೆಂದರೆ ಅದೊಂದು ಪರಮಾರ್ಥ ವಸ್ತುವೇ ಆಗುವುದಿಲ್ಲವಾದ್ದರಿಂದ ಸ್ವೋಕ್ತಿವಿರೋಧವಾಗುತ್ತದೆ. ಆದ್ದರಿಂದ ಜೀವಾತ್ಮನಿಗೆ ಸಂಸಾರಬಂಧವೂ ಇಲ್ಲ. ಮೋಕ್ಷವಾಗಬೇಕಾದ್ದೂ ಇಲ್ಲ. ಅವನು ನಿತ್ಯಚೈತನ್ಯ ಸ್ವರೂಪನಾಗಿರುತ್ತಾನೆ.

**ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ।**
**ವಿತಥೈಃ ಸದೃಶಾಃ ಸಂತೋಽವಿತಥಾ ಇವ ಲಕ್ಷಿತಾಃ ॥೩೧॥**

ಯಾವುದು ಆದ್ಯಂತಗಳಲ್ಲಿ ಇರುವುದಿಲ್ಲವೋ ಎಂದರೆ ಯಾವುದಕ್ಕೆ ಉತ್ಪತ್ತಿನಾಶಗಳಿವೆಯೋ ಅದು ವರ್ತಮಾನದಲ್ಲಿರುವುದೂ ಮಿಥ್ಯೆ.

ಇಂತಹ ವಸ್ತುಗಳು, ಅನೃತಗಳೆಂದು ಸಿದ್ಧವಾದ ಬಿಸಿಲ್ಗುದುರೆ, ಗಂಧರ್ವ ನಗರಗಳಂತೆ ತಾತ್ಕಾಲಿಕವಾಗಿ ಕಾಣಿಸತಕ್ಕವು. ಅವು ಅವಿತಥಗಳಂತೆ (ಸತ್ಯವಾಗಿ ಇರುವ ವಸ್ತುಗಳಂತೆ) ಮೂಢರಿಗೆ ತೋರುತ್ತಿವೆ.

**ಸಪ್ರಯೋಜನತಾ ತೇಷಾಂ ಸ್ವಪ್ನೇ ವಿಪ್ರತಿಪದ್ಯತೇ ।**
**ತಸ್ಮಾದಾದ್ಯಂತವತ್ತ್ವೇನ ಮಿಥ್ಯೈವ ಖಲು ತೇ ಸ್ಮೃತಾಃ ॥೩೨॥**

**ತೇಷಾಂ** = ಜಾಗ್ರತ್ತಿನಲ್ಲಿ ಕಾಣಿಸುವ ಪದಾರ್ಥಗಳಿಗೆ, **ಸಪ್ರಯೋಜನತಾ** = ಪ್ರಯೋಜನವಿದೆಯೆಂಬುದು, **ಸ್ವಪ್ನೇ** = ಕನಸಿನಲ್ಲಿ, **ವಿಪ್ರತಿಪದ್ಯತೇ** = ಭಿನ್ನಾಭಿಪ್ರಾಯವನ್ನು ಪಡೆದಿದೆ. **ತಸ್ಮಾತ್** = ಹೀಗೆ ವಿಪ್ರತಿಪತ್ತಿಯು ಉಭಯತ್ರ ಇರುವುದರಿಂದ, **ಆದ್ಯಂತವತ್ತ್ವೇನ** = ಆದ್ಯಂತಗಳು (ಜನ್ಮನಾಶಗಳು) ಇರುವುದರಿಂದ, **ತೇ** = ಸ್ವಪ್ನದೃಶ್ಯಜಾಗರ ದೃಶ್ಯಗಳೆರಡೂ, **ಖಲು** = ನಿಶ್ಚಯ ವಾಗಿ, **ಮಿಥ್ಯೈವ** = ಮಿಥ್ಯೆಗಳೇ ಸರಿಯೆಂದು, **ಸ್ಮೃತಾಃ** = ಶಾಸ್ತ್ರದಲ್ಲಿ ಸ್ಮೃತ ವಾಗಿವೆ.

**ಸೂಚನೆ :** ಮೇಲ್ಕಂಡ ೩೧–೩೨ನೆಯ ಕಾರಿಕೆಗಳು ಹಿಂದೆ ವೈತಥ್ಯ ಪ್ರಕರಣದಲ್ಲಿ (೨–೬, ೭) ವ್ಯಾಖ್ಯಾತವಾಗಿವೆ. ವಿವರಗಳನ್ನು ಅಲ್ಲಿ ನೋಡ ಬಹುದು.

ಜಾಗ್ರತ್ತಿನ ಪದಾರ್ಥಗಳು ಮಿಥ್ಯೆಯೆಂದು ಸಿದ್ಧವಾದ ಮೇಲೆ ಜಾಗ್ರತ್ತಿಗೆ ಸೇರಿದ ಬಂಧಮೋಕ್ಷಗಳೂ ಮಿಥ್ಯೆಯೆಂದು ಸ್ವತಃ ಸಿದ್ಧವಾಗುತ್ತದೆ.

**ಸರ್ವೇ ಧರ್ಮಾ ಮೃಷಾ ಸ್ವಪ್ನೇ ಕಾಯಸ್ಯಾಂತರ್ನಿದರ್ಶನಾತ್ ।**
**ಸಂವೃತೇऽಸ್ಮಿನ್ ಪ್ರದೇಶೇ ವೈ ಭೂತಾನಾಂ ದರ್ಶನಂ ಕುತಃ ॥೩೩॥**

**ಸ್ವಪ್ನೇ** = ಸ್ವಪ್ನದಲ್ಲಿ, **ಸರ್ವೇ ಧರ್ಮಾಃ** = ಸಕಲ ದೃಶ್ಯವಸ್ತುಗಳೂ **ಕಾಯಸ್ಯ** = ದೇಹದ, **ಅಂತರ್ನಿದರ್ಶನಾತ್** = ಒಳಗೇ ಕಾಣುವುದರಿಂದ, **ಮೃಷಾ** = ಮಿಥ್ಯೆಯೇ ಸರಿ, **ಸಂವೃತೇ** = ದೇಹದಿಂದ ಆವರಣಗೊಂಡಿರುವ, **ಅಸ್ಮಿನ್ ಪ್ರದೇಶೇ** = ದೇಹದೊಳಗಿನ ಈ ಪ್ರದೇಶದಲ್ಲಿ **ಭೂತಾನಾಂ** = ಹೊರಗಿರುವ ಭೌತಿಕವಸ್ತುಗಳ, **ದರ್ಶನಂ** = ದರ್ಶನವು, **ಕುತಃ** = ಹೇಗೆ ಆದೀತು?

ಕನಸಿನಲ್ಲಿ ನಮಗೆ ದೂರದಲ್ಲಿರುವ ಬಂಧು ಮಿತ್ರರು, ಆನೆ ಕುದುರೆ ಮೊದಲಾದವು ಕಾಣುತ್ತವೆ. ನಾವು ಅವುಗಳ ಬಳಿಗೆ ಹೋಗಿರುವುದಿಲ್ಲ. ನಮ್ಮ ದೇಹದೊಳಗಿರುವ ಚಿಕ್ಕ ಪ್ರದೇಶದಲ್ಲಿ ಅವುಗಳಾದರೂ ಹೇಗೆ ಬಂದು ಸೇರಿಕೊಳ್ಳಲು ಸಾಧ್ಯ? ಆದ್ದರಿಂದ ಸ್ವಪ್ನದಲ್ಲಿ ಕಾಣತಕ್ಕದ್ದೆಲ್ಲವೂ ಮಿಥ್ಯೆಯೇ ಸರಿ.

**ನ ಯುಕ್ತಂ ದರ್ಶನಂ ಗತ್ವಾ ಕಾಲಸ್ಯಾನಿಯಮಾದ್ಗತೌ ।**
**ಪ್ರತಿಬುದ್ಧಶ್ಚ ವೈ ಸರ್ವಸ್ತಸ್ಮಿನ್ ದೇಶೇ ನ ವಿದ್ಯತೇ ॥೩೪॥**

**ಗತೌ** = (ಸ್ವಪ್ನದಲ್ಲಿ ವಸ್ತುಗಳಿದ್ದಲ್ಲಿಗೇ) ಹೋಗುವ ವಿಚಾರದಲ್ಲಿ, **ಕಾಲಸ್ಯ** = ಕಾಲ (ಮತ್ತು ದೇಶದ) **ಅನಿಯಮಾತ್** = ನಿಯಮವೇ ಇಲ್ಲದೆ ಹೋಗುವುದ ರಿಂದಲೂ, **ಗತ್ವಾ** = ವಸ್ತುಗಳಿದ್ದಲ್ಲಿಗೇ ಹೋಗಿ, **ದರ್ಶನಂ** = ದರ್ಶನವಾಗುತ್ತದೆ ಯೆಂಬುದು, **ನ ಯುಕ್ತಂ** = ಯುಕ್ತವಲ್ಲ, **ಚ ವೈ** = ಮತ್ತು **ಪ್ರತಿಬುದ್ಧಃ** = ಕನಸಿನಿಂದ ಎಚ್ಚರಗೊಂಡ, **ಸರ್ವಃ** = ಸರ್ವರೂ, **ತಸ್ಮಿನ್ ದೇಶೇ** = ಆ ದೂರದೇಶದಲ್ಲಿ, **ನ ವಿದ್ಯತೇ** = ಇರುವುದಿಲ್ಲ.

ಇನ್ನು ಕನಸಿನಲ್ಲಿ ಕಂಡ ವಸ್ತುಗಳಿದ್ದಲ್ಲಿಗೇ ಹೋಗಿ ಈತನು ನೋಡಿ ಬರುತ್ತಾನೆ – ಎಂದೂ ಹೇಳುವಂತಿಲ್ಲ. ಆ ವಸ್ತುಗಳು ಎಷ್ಟು ದೂರದಲ್ಲಿವೆ? ಹೋಗಿ ಬರಲು ಕಾಲವೆಷ್ಟುಬೇಕು ಎನ್ನುವುದು ಜಾಗ್ರತ್ತಿನಲ್ಲಿ ನಿಶ್ಚಿತವಾಗಿರುತ್ತದೆ. ಕನಸಿನಲ್ಲಾದರೂ ಕಾಲದೂರಗಳ ಗೊಡವೆಯೇ ಇಲ್ಲದೆ ನಿಯಮಾತೀತವಾಗಿ ಕನಸನ್ನು ಕಾಣತಕ್ಕವನು ಆ ಸ್ಥಳಕ್ಕೆ ಹೋಗಿ ಬರಲಾರ. ಬರದೆ ಅಲ್ಲಿಯೇ ಇದ್ದಾನೆಂದೂ ಹೇಳಲಾಗದು. ಎಚ್ಚರವಾದೊಡನೆ ಇವನು ತಾನು ಮಲಗಿದ ಹಾಸಿಗೆಯಲ್ಲಿ ಇರುತ್ತಾನೆಯೇ ಹೊರತು ಆ ವಸ್ತುವಿನ ಬಳಿಯಲ್ಲಿ ಇರುವುದಿಲ್ಲ!

**ಸೂಚನೆ :** ಮೇಲ್ಕಂಡ ೩೩–೩೪ನೇ ಕಾರಿಕೆಗಳಿಗೆ ಭಾಷ್ಯದಲ್ಲಿ ಸ್ಪಷ್ಟವಾದ ವಿವರಣೆ ಇಲ್ಲ, ಪದಶಃ ಅರ್ಥವನ್ನೂ ಬರೆದಿಲ್ಲ, ಆನಂದಗಿರಿ ವ್ಯಾಖ್ಯಾನದಲ್ಲಿ

ಒಂದು ಬಗೆಯ ವರ್ಣನೆ ಬಂದಿದೆ. ಮಾಂಡೂಕ್ಯ ವಿವೃತಿಯಲ್ಲಿ ಮತ್ತೊಂದು ಪ್ರಕಾರದ ವಿವೃತಿಯಿದೆ. ನಾನು ಇವೆರಡನ್ನೂ ಬಿಟ್ಟು ಪ್ರಕೃತೋಚಿತವಾದ ರೀತಿಯಲ್ಲಿ ಬರೆದಿದ್ದೇನೆ. ವಿದ್ವಾಂಸರು ಈ ವಿಷಯಲ್ಲಿ ಪ್ರಮಾಣ.

ಕನಸಿನಲ್ಲಿ ಕಂಡುದೆಲ್ಲವೂ ಸುಳ್ಳೆಂದು ಇದರಿಂದ ಗೊತ್ತಾಗುತ್ತದೆ.

**ಮಿತ್ರಾದ್ಯೈಃ ಸಹ ಸಂಮಂತ್ರ್ಯ ಸಂಬುದ್ಧೋ ನ ಪ್ರಪದ್ಯತೇ ।**
**ಗೃಹೀತಂ ಚಾಪಿ ಯತ್ಕಿಂಚಿತ್ ಪ್ರತಿಬುದ್ಧೋ ನ ಪಶ್ಯತಿ ॥೩೫॥**

**ಕನಸಿನಲ್ಲಿ ಮಿತ್ರಾದ್ಯೈಃ ಸಹ** = ಸ್ನೇಹಿತರೇ ಮೊದಲಾದವರೊಡನೆ, **ಸಂಮಂತ್ರ್ಯ** = ಆಲೋಚಿಸಿ ನಿಶ್ಚಯಿಸಿಕೊಂಡದ್ದನ್ನು **ಸಂಬುದ್ಧಃ** = ಎಚ್ಚರಕ್ಕೆ ಬಂದಾತನು, **ನ ಪ್ರಪದ್ಯತೇ** = ಸ್ಮರಿಸಿಕೊಂಡು ಅದರಂತೆ ನಡೆದುಕೊಳ್ಳುವುದಿಲ್ಲ, **ಚಾಪಿ** = ಮತ್ತು **ಗೃಹೀತಂ** = ತಾನು ತೆಗೆದುಕೊಂಡ, **ಯತ್ಕಿಂಚಿತ್** = ಚಿನ್ನ, ಗ್ರಂಥ ಮುಂತಾದ ಯಾವುದೋ ಒಂದು ವಸ್ತುವನ್ನೂ, **ಪ್ರತಿಬುದ್ಧಃ** = ಎಚ್ಚರಗೊಂಡವನು, **ನ ಪಶ್ಯತಿ** = ಕಾಣುವುದಿಲ್ಲ.

ತಾತ್ಪರ್ಯವು ಸ್ಪಷ್ಟವಾಗಿದೆ. ಸ್ವಪ್ನದಲ್ಲಿ ಆದದ್ದು, ಮಾಡಿದ್ದು – ಮುಂತಾದ ಯಾವುದೂ ಜಾಗ್ರತ್ತಿನಲ್ಲಿ ಇಲ್ಲವಾಗುವುದರಿಂದ, ಸ್ವಪ್ನದಲ್ಲಿ ಕಂಡದ್ದೆಲ್ಲವೂ ಮಿಥ್ಯೆಯೇ ಸರಿ.

**ಸ್ವಪ್ನೇ ಚಾವಸ್ತುಕಃ ಕಾಯಃ ಪೃಥಗನ್ಯಸ್ಯ ದರ್ಶನಾತ್ ।**
**ಯಥಾ ಕಾಯಸ್ತಥಾ ಸರ್ವಂ ಚಿತ್ತದೃಶ್ಯಮವಸ್ತುಕಮ್ ॥೩೬॥**

**ಸ್ವಪ್ನೇ** = ಕನಸಿನಲ್ಲಿ, **ಕಾಯಃ** = ಎಲ್ಲಿಯೋ ಸಂಚರಿಸುತ್ತಿರುವಂತೆ ಕಾಣುವ ತನ್ನ ದೇಹವು, **ಪೃಥಕ್** = ಅದಕ್ಕಿಂತ ಬೇರೆಯಾಗಿ, **ಅನ್ಯಸ್ಯ** = ಮಲಗಿದಲ್ಲಿಯೇ ಇರುವ ಇನ್ನೊಂದು ದೇಹದ, **ದರ್ಶನಾತ್** = ದರ್ಶನವಾಗುವುದರಿಂದ, **ಅವಸ್ತುಕಃ** = ವಸ್ತುತಃ ಇಲ್ಲದ್ದು, **ಯಥಾಕಾಯಃ** = ಚಿತ್ತದೃಶ್ಯವಾದ ಕನಸಿನ ದೇಹವು ಹೇಗೋ **ತಥಾ** = ಹಾಗೆಯೇ, ಜಾಗ್ರತ್ತಿನಲ್ಲಿಯೂ, ಚಿತ್ತದೃಶ್ಯವಾದ, **ಸರ್ವಂ** = ಸಮಸ್ತ ಪದಾರ್ಥವೂ, **ಅವಸ್ತುಕಮ್** = ವಸ್ತುತಃ ಇಲ್ಲದ್ದು.

ಕನಸಿನಲ್ಲಿ ಕಂಡದ್ದು ಹೇಗೆ ಮಿಥ್ಯೆಯೋ ಹಾಗೆಯೇ ಜಾಗ್ರತ್ತಿನಲ್ಲಿ ಕಾಣುವುದೆಲ್ಲವೂ ಮಿಥ್ಯೆಯೆಂದು ಈ ಪ್ರಕರಣದ ತಾತ್ಪರ್ಯ.

**ಗ್ರಹಣಾಜ್ಜಾಗತವತ್ ತದ್ಧೇತುಃ ಸ್ವಪ್ನ ಇಷ್ಯತೇ ।**
**ತದ್ಧೇತುತ್ವಾತ್ತು ತಸ್ಯೈವ ಸಜ್ಜಾಗರಿತಮಿಷ್ಯತೇ ॥೩೭॥**

**ಜಾಗರಿತವತ್** = ಜಾಗ್ರತ್ತಿನಲ್ಲಿ ಕಂಡ ವಸ್ತುವಿನ ಹಾಗೆಯೇ, **ಗ್ರಹಣಾತ್**

= ಸ್ವಪ್ನದಲ್ಲಿಯೂ ಅದನ್ನು ಗ್ರಹಿಸುವುದರಿಂದ, **ಸ್ವಪ್ನಃ** = ಸ್ವಪ್ನವು, **ತದ್ಧೇತುಃ** = ಜಾಗ್ರತ್ತೇ ಕಾರಣವಾಗಿ ಉಳ್ಳದ್ದು ಎಂದು, **ಇಷ್ಯತೇ** = ಇಚ್ಛಿಸಲ್ಪಡುತ್ತದೆ. **ತದ್ಧೇತು ತ್ವಾತ್** = ಜಾಗ್ರತ್ತು ಸ್ವಪ್ನಕ್ಕೆ ಕಾರಣವಾದ್ದರಿಂದಲೇ, **ತಸ್ಯೈವ** = ಸ್ವಪ್ನವನ್ನು ಕಂಡವನಿಗೆ ಮಾತ್ರ, **ಜಾಗರಿತಂ** = ಜಾಗ್ರತ್ತಿನ ವಸ್ತು **ಸತ್** = ಇರತಕ್ಕದ್ದು ಎಂದು (ಎಲ್ಲರಿಗೂ ಅಲ್ಲ) **ಇಷ್ಯತೇ** = ಇಚ್ಛಿಸಲ್ಪಡುತ್ತದೆ.

ಜಾಗ್ರತ್ತಿನಲ್ಲಿ ಕಂಡದ್ದು, ಅನುಭವಿಸಿದ್ದು ಅಥವಾ ಕಲ್ಪಿಸಿಕೊಂಡದ್ದು ಸ್ವಪ್ನದಲ್ಲಿ ಕಾಣುತ್ತದೆಯೆಂಬುದು ಸರ್ವಸಂಮತ. ಜಾಗ್ರತ್ತಿನಲ್ಲಿ ಚಿತ್ತಕ್ಕೆ ವಿಷಯವಾಗದ ಯಾವುದೂ ಸ್ವಪ್ನದಲ್ಲಿ ಕಾಣುವುದಿಲ್ಲ. ಆದ್ದರಿಂದ ಸ್ವಪ್ನಕ್ಕೆ ಜಾಗ್ರತ್ತು ಕಾರಣ ಎಂದು ಸಿದ್ಧವಾಗುತ್ತದೆ. ಕನಸಿನಲ್ಲಿ ಕಾಣಿಸಿಕೊಂಡದ್ದು ಮಿಥ್ಯೆಯೆಂಬುದೂ ಸಿದ್ಧವಾಗಿದೆ. ಕನಸು ಕಂಡವನಿಗೆ ಮಾತ್ರ ಆ ವಸ್ತು ಗೋಚರ. ಎಲ್ಲರಿಗೂ ಗೋಚರವಲ್ಲ. ಕನಸು ಕಾಣುತ್ತಿರುವಾಗ ಅವನಿಗೆ ಮಾತ್ರ ಅದು ಸತ್ಯವಾಗಿ ತೋರುತ್ತದೆ, ಹಾಗೆಯೇ ಕನಸಿಗೆ ಕಾರಣವಾದ ಜಾಗ್ರತ್ತಿನ ವಸ್ತುವೂ ಕನಸನ್ನು ಕಂಡು ಜಾಗೃತನಾದವನಿಗೆ ಮಾತ್ರ ಸತ್ಯವೆನಿಸುತ್ತದೆ ಎಂದು ಅಭಿಪ್ರಾಯ. ಮಿಥ್ಯಾವಸ್ತುವಿಗೆ ಕಾರಣವಾದದ್ದೂ ಮಿಥ್ಯಾವಸ್ತುವೇ ಆಗಿರಬೇಕು. ಸತ್ಯದಿಂದ ಮಿಥ್ಯೆ ಹುಟ್ಟುವುದಿಲ್ಲ, ಸತ್ಯವಾದದ್ದು ಎಂದೂ ಮಿಥ್ಯೆಯಾಗುವುದಿಲ್ಲ ವೆಂದು ತಾತ್ಪರ್ಯ. ಕನಸು ಮಿಥ್ಯೆಯಾದ್ದರಿಂದ ಅದಕ್ಕೆ ಕಾರಣವಾದ ಜಾಗ್ರತ್ತೂ ಮಿಥ್ಯೆಯೇ ಸರಿ ಎಂದು ಅಭಿಪ್ರಾಯ.

**ಉತ್ಪಾದಸ್ಯಾಪ್ರಸಿದ್ಧತ್ವಾತ್ ಅಜಂ ಸರ್ವಮುದಾಹೃತಮ್ ।**
**ನ ಚ ಭೂತಾದಭೂತಸ್ಯ ಸಂಭವೋऽಸ್ತಿ ಕಥಂಚನ ॥೩೮॥**

**ಉತ್ಪಾದಸ್ಯ** = ಯಾವುದೇ ವಸ್ತುವಿನ ಉತ್ಪತ್ತಿಯು, **ಅಪ್ರಸಿದ್ಧತ್ವಾತ್** = ಸಿದ್ಧವಾಗುವುದಿಲ್ಲವಾದ್ದರಿಂದ, **ಸರ್ವಂ** = ಸಮಸ್ತ ಪದಾರ್ಥವೂ, **ಅಜಂ** = ಜನ್ಮರಹಿತವಾದ ಬ್ರಹ್ಮವೇ ಎಂದು, **ಉದಾಹೃತಂ** = ವೇದಾಂತದಲ್ಲಿ ಉಕ್ತವಾಗಿದೆ. **ಭೂತಾತ್** = ವಿದ್ಯಮಾನವಸ್ತುವಿನಿಂದ, **ಅಭೂತಸ್ಯ** = ಇಲ್ಲದಿರುವ ವಸ್ತುವಿನ, **ಸಂಭವಃ** = ಉತ್ಪತ್ತಿಯು, **ಕಥಂಚನ** = ಯಾವ ಬಗೆಯಲ್ಲಿಯೂ, **ನ** = ಸಂಭವಿಸುವುದಿಲ್ಲ.

ಹಿಂದಿನ ಕಾರಿಕೆಯಲ್ಲಿ ಹುಟ್ಟುವ ಒಂದು ಶಂಕೆಗೆ ಉತ್ತರವಾಗಿ ಈ ಕಾರಿಕೆ ಬಂದಿದೆ. ಶಂಕೆ ಏನೆಂದರೆ, ಜಾಗ್ರತ್ ಸ್ವಪ್ನಗಳಿಗೆ ಹೇಳಿದ ಕಾರ್ಯಕಾರಣ ಭಾವವೂ ಹೋಲಿಕೆಯೂ ಯುಕ್ತವಲ್ಲ. ಜಾಗ್ರತ್ತಿನಲ್ಲಿ ಕಂಡ ಪ್ರಕಾರವೇ ಸ್ವಪ್ನದಲ್ಲಿಯೂ ಕಾಣುವುದಿಲ್ಲ, ಜಾಗ್ರತ್ತಿನಲ್ಲಿ ಸತ್ತವನು ಸ್ವಪ್ನದಲ್ಲಿ ಬದುಕಿರುವವನಂತೆ ಬಂದು ಮಾತಾಡುತ್ತಾನೆ. ಹುಡುಗನು ಮುದುಕನಂತೆ ಕಾಣಬಹುದು. ಜಾಗ್ರತ್ತಿನಲ್ಲಿ ಇರುವ

ಮನೆ ಕನಸಿನಲ್ಲಿ ಇನ್ನೊಂದು ಆಗಿರುತ್ತದೆ. ಅಲ್ಲದೆ ಸ್ವಪ್ನವು ಕ್ಷಣಿಕವಾದದ್ದು, ಬೇರೆ ಬೇರೆ ಕನಸುಗಳಿಗೆ ಅನ್ಯೋನ್ಯಸಂಬಂಧವಿರುವುದಿಲ್ಲ. ಜಾಗ್ರತ್ತಿಗೆ ಬಂದೊಡನೆ ಕನಸಿನ ಸ್ಮರಣೆಯಾಗುವುದಲ್ಲದೆ, ಅದು ಮಿಥ್ಯೆಯೆಂದೂ ತಿಳಿಯುತ್ತದೆ. ಕನಸಿನಲ್ಲಿ ಜಾಗ್ರತ್ತಿನ ಸ್ಮರಣೆಯೇ ಬರುವುದಿಲ್ಲ. ಜಾಗ್ರತ್ತು ಪ್ರತಿದಿನವೂ ವ್ಯವಸ್ಥಿತವಾಗಿ ಎಲ್ಲರಿಗೂ ಒಂದೇ ರೀತಿಯಾಗಿ ತೋರುತ್ತದೆ. ಈ ದಿನದ ಕಾರ್ಯವು ಮುಂದಿನ ದಿನ ವ್ಯವಸ್ಥಿತವಾಗಿ ಮುಂದುವರಿಯುತ್ತದೆ.

ಸಮಸ್ತ ಜಾಗ್ರತ್ತುಗಳಿಗೂ ಪೂರ್ವಾಪರ ಹೊಂದಾಣಿಕೆ ಇದೆ. ಇವೇ ಮೊದಲಾದ ಹಲವಾರು ಕಾರಣಗಳಿಂದ ಜಾಗ್ರತ್ತು ಸ್ವಪ್ನಕ್ಕಿಂತ ಭಿನ್ನ ಸ್ವರೂಪ ಉಳ್ಳದ್ದು. ಆದ್ದರಿಂದ ಜಾಗ್ರತ್ತು ಕನಸಿಗೆ ಕಾರಣವಾದ್ದರಿಂದ ಇದೂ ಮಿಥ್ಯೆ ಎನ್ನುವುದು ಯುಕ್ತವಲ್ಲ. ಸರ್ಪವೆಂಬ ಭ್ರಾಂತಿಗೆ ಕಾರಣವಾದ ಹಗ್ಗವೇ ಮಿಥ್ಯೆ ಯಲ್ಲ. ಸತ್ಯವಸ್ತುವನ್ನು ನೋಡಿ ಭ್ರಾಂತಿ ಬರಬಹುದು. ಜಾಗ್ರತ್ತು ಸತ್ಯವೆಂದೂ ಕನಸು ಮಿಥ್ಯೆಯೆಂದೂ ಹೇಳಿದರೆ ಬಾಧೆಯೇನು?

ಇದಕ್ಕೆ ಉತ್ತರವೇನೆಂದರೆ – ಚಿತ್ತದೃಶ್ಯವೆಲ್ಲವೂ ಮಿಥ್ಯೆಯಾದ್ದರಿಂದ ಕನಸಿನಲ್ಲಿ ಕಾಣುವಂತೆ ಜಾಗ್ರತ್ತಿನಲ್ಲಿಯೂ ಕಾಣುವ ವಸ್ತುಗಳೂ ಮಿಥ್ಯೆಯೆಂದು ಪ್ರತಿಪಾದಿಸುವುದು ಇಲ್ಲಿ ಉದ್ದಿಷ್ಟವಾಗಿದೆ. ಬ್ರಹ್ಮದಿಂದ ಯಾವುದೂ ಹುಟ್ಟುವುದೇ ಇಲ್ಲವಾದ್ದರಿಂದ ಜಾಗ್ರತ್ತಿನ ಜನ್ಯವಸ್ತುಗಳೆಲ್ಲವೂ ಮಿಥ್ಯೆಯೇ ಸರಿ. **'ಸ ವಾ ಏಷ ಮಹಾನಜ ಆತ್ಮಾ'** (ಬೃಹ ೪–೪–೨೯), **'ಅಜೋ ನಿತ್ಯಃ'** (ಕಠ. ೧–೨–೧೮) ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮವು ಅಜವೆಂದು ವರ್ಣಿಸಿದೆ. ಅಜ ವಾದದ್ದು ಅನಂತ. ಇದೇ ನಿತ್ಯ. ನಿತ್ಯವಸ್ತುವಿನಿಂದ ಇನ್ನಾವುದೂ ಹುಟ್ಟುವುದಿಲ್ಲ. ಹುಟ್ಟತಕ್ಕದ್ದು ಹೊಸದೇ ಆಗಿರಬೇಕು. ಹೊಸದು ಯಾವುದೂ ವಿದ್ಯಮಾನವಾದ ಬ್ರಹ್ಮದಿಂದ ಹುಟ್ಟುವುದಿಲ್ಲ. ಆದ್ದರಿಂದ ಕನಸಿನಂತೆ ಎಚ್ಚರದ ವಸ್ತುವು ಇರುವುದೂ ಸುಳ್ಳು. ಹಿಂದೆ ವೈತಥ್ಯ ಪ್ರಕರಣದಲ್ಲಿ ಇದರ ವಿವರಣೆ ಬಂದಿದೆ.

**ಅಸಜ್ಜಾಗರಿತೇ ದೃಷ್ಟ್ವಾ ಸ್ವಪ್ನೇ ಪಶ್ಯತಿ ತನ್ಮಯಃ ।**
**ಅಸತ್ ಸ್ವಪ್ನೇಽಪಿ ದೃಷ್ಟ್ವಾ ಚ ಪ್ರತಿಬುದ್ಧೋ ನ ಪಶ್ಯತಿ ॥೩೯॥**

**ಅಸತ್** = ವಸ್ತುತಃ ಇಲ್ಲದೆ ಕಲ್ಪಿತವಾದ ವಸ್ತುವನ್ನು, **ಜಾಗತೇ** = ಜಾಗ್ರತ್ತಿನಲ್ಲಿ, **ದೃಷ್ಟ್ವಾ** = ನೋಡಿ, **ತನ್ಮಯಃ** = ನೋಡಿದ ಆ ಸಂಸ್ಕಾರದಿಂದ ಭಾವಿತನಾದ ಮನುಷ್ಯನು, **ಸ್ವಪ್ನೇ** = ಕನಸಿನಲ್ಲಿ, **ಪಶ್ಯತಿ** = ಅದನ್ನು ಕಾಣುತ್ತಾನೆ. **ಸ್ವಪ್ನೇಽಪಿ** = ಕನಸಿನಲ್ಲಿಯೂ, **ಅಸತ್** = ವಸ್ತುತಃ ಇಲ್ಲದ ವಿಕಲ್ಪಿತ ವಸ್ತುವನ್ನೇ **ದೃಷ್ಟ್ವಾ** = ನೋಡಿ, **ಪ್ರತಿಬುದ್ಧಃ** = ಎಚ್ಚರವಾದವನು

ಮಾತ್ರ, **ನ ಪಶ್ಯತಿ** = ಅದನ್ನು ಕಾಣುವುದಿಲ್ಲ! **ಚ** = ಹಾಗೆಯೇ, ಜಾಗ್ರತ್ತಿನಲ್ಲಿ ನೋಡಿದ್ದನ್ನು, ಕನಸಿನಲ್ಲಿ ಕಾಣದೆಯೂ ಇರಬಹುದು ಎಂದು ಚ ಶಬ್ದದಿಂದ ದೊರೆಯುವ ಅರ್ಥ.

ಹಿಂದಿನ ಕಾರಿಕೆಯಲ್ಲಿ ಹೇಳಿದಂತೆ ದೃಶ್ಯವಸ್ತುವಿಗೆ ಉತ್ಪತ್ತಿಯೇ ಇಲ್ಲದಿರುವಾಗ ''ಜಾಗ್ರತ್ತಿನಲ್ಲಿ ಕಂಡದ್ದನ್ನು, ಕನಸಿನಲ್ಲಿ ಕಾಣುತ್ತಾನೆ'' ಎಂದು ಹಿಂದೆ ಹೇಳಿದ್ದು ಹೇಗೆ? ಜಾಗ್ರತ್ತಿನಲ್ಲಿ ನೀವು ಹೇಳುವಂತೆ ಯಾವ ವಸ್ತುವೂ ಇರುವುದೇ ಇಲ್ಲವಲ್ಲ! ಎಂಬ ಶಂಕೆಗೆ ಇದು ಉತ್ತರ. ಜಾಗ್ರತ್ತಿನಲ್ಲಿ ವಾಸ್ತವಿಕವಾಗಿ ದೃಶ್ಯವಸ್ತುವಿಲ್ಲದಿದ್ದರೂ ಅವಿದ್ಯೆಯಿಂದ ಕಲ್ಪಿತವಾದದ್ದನ್ನು ನೋಡುತ್ತಾನಷ್ಟೆ? ಅದರಿಂದಾದ ಸಂಸ್ಕಾರವು ಕನಸಿನಲ್ಲಿ ಕಾಣುವುದಕ್ಕೆ ಹೇತುವಾಗುತ್ತದೆ. ವಿಕಲ್ಪಿತವಾದದ್ದೂ ದೃಶ್ಯವಾದಾಗ ಇನ್ನೊಂದು ವಿಕಲ್ಪಿತಕ್ಕೆ ಕಾರಣವಾಗಬಹುದು.

**ನಾಸ್ತ್ಯಸದ್ಧೇತುಕಮಸತ್ ಸದಸದ್ಧೇತುಕಂ ತಥಾ ।**
**ಸಚ್ಚ ಸದ್ಧೇತುಕಂ ನಾಸ್ತಿ ಸದ್ಧೇತುಕಮಸತ್ ಕುತಃ ॥೪೦॥**

**ಅಸದ್ಧೇತುಕಂ** = ಅಸತ್ ಆದ ಶಶವಿಷಾಣಾದಿಯು ಕಾರಣವಾದ, **ಅಸತ್** = ಗಗನಕುಸುಮವೇ ಮೊದಲಾದ **ಅಸತ್** = ಪದಾರ್ಥವು, **ನಾಸ್ತಿ** = ಇಲ್ಲ. **ಅಸದ್ಧೇತುಕಂ** = ಅಸತ್ ಕಾರಣವಾಗಿ ಉಳ್ಳ **ಸತ್** = ಸದ್ವಸ್ತುವೂ ಸಹ, **ತಥಾ** = ಹಾಗೆಯೇ ಇಲ್ಲ. **ಸದ್ಧೇತುಕಂ** = ಸದ್ವಸ್ತುವೇ ಹೇತುವಾಗಿ ಉಳ್ಳ **ಸತ್** = ಸದ್ವಸ್ತುವೂ, **ನಾಸ್ತಿ** = ಇಲ್ಲ. ಹೀಗಿರುವಾಗ **ಸದ್ಧೇತುಕಂ** = ಸದ್ವಸ್ತು ಕಾರಣವಾಗಿರುವ **ಅಸತ್** = ಅಸತ್ ಎಂಬುದು, **ಕುತಃ** = ಹೇಗೆ ಇದ್ದೀತು?

ಹಿಂದೆ **''ಸ್ವತೋ ವಾ ಪರತೋ ವಾಽಪಿ''** (೪–೩೨) ಎಂಬಲ್ಲಿ ಯಾವುದಕ್ಕೂ ನೂತನವಾದ ಉತ್ಪತ್ತಿ ಇಲ್ಲ ಎಂಬುದನ್ನು ಪ್ರತಿಪಾದಿಸಲಾಗಿದೆ. ಇಲ್ಲಿ ಕಾರ್ಯಕಾರಣ ಭಾವವೇ ಇಲ್ಲವೆಂದು ಅಜಾತಿವಾದವನ್ನೇ ಬೇರೊಂದು ಬಗೆಯಲ್ಲಿ ಪ್ರತಿಪಾದಿಸಿದ್ದಾರೆ. ಈ ವಾದವನ್ನು ಶೂನ್ಯವಾದಿಗಳಾದ ಮಾಧ್ಯಮಿಕರೂ ಹೇಳಿದ್ದಾರೆ. ಆದರೆ ಅವರದು ಜಾಗ್ರತ್ತಿಗೆ ಮೀಸಲಾದದ್ದು. ಶ್ರೀ ಗೌಡಪಾದಾ–ಚಾರ್ಯರು ಹೇಳುವುದು ಹಾಗಲ್ಲ. ಜಾಗ್ರತ್ ಸ್ವಪ್ನಗಳೆರಡೂ ಮಿಥ್ಯೆಯೆಂದು ತಿಳಿಸಿ, ಸಾಕ್ಷಿಯಾದ ಆತ್ಮನೊಬ್ಬನೇ ಸತ್ಯನೆಂದು ಅವರು ಸಿದ್ಧಾಂತಿಸಿದ್ದಾರೆ.

**ವಿಪರ್ಯಾಸಾದ್ ಯಥಾ ಜಾಗ್ರದಚಿಂತ್ಯಾನ್ ಭೂತವತ್ ಸ್ಪೃಶೇತ್ ।**
**ತಥಾ ಸ್ವಪ್ನೇ ವಿಪರ್ಯಾಸಾದ್ಧರ್ಮಾಂಸ್ತತ್ರೈವ ಪಶ್ಯತಿ ॥೪೧॥**

**ವಿಪರ್ಯಾಸಾತ್** = ಅವಿವೇಕವೆಂಬ ತಪ್ಪು ತಿಳಿವಳಿಕೆಯಿಂದ, **ಜಾಗ್ರತ್** = ಜಾಗ್ರತ್ತಿನಲ್ಲಿ, **ಅಚಿಂತ್ಯಾನ್** = ಹೀಗೆಂದು ಊಹೆಗೆ ನಿಲುಕದ ರಜ್ಜುಸರ್ಪ

ದಂತಿರುವ ದೃಶ್ಯವಸ್ತುಗಳನ್ನು, **ಭೂತವತ್** = ಸತ್ಯ ವಸ್ತುಗಳನ್ನು ಹೇಗೋ ಹಾಗೆ, **ಯಥಾ** = ಯಾವ ರೀತಿಯಲ್ಲಿ, **ಸ್ಪೃಶೇತ್** = ಕೈಯಿಂದ ಮುಟ್ಟಿದಂತೆ ವಿಕಲ್ಪಿಸಿಕೊಳ್ಳುತ್ತಾನೋ, **ತಥಾ** = ಹಾಗೆಯೇ, **ಸ್ವಪ್ನೇ** = ಕನಸಿನಲ್ಲಿಯೂ, **ವಿಪರ್ಯಾಸಾತ್** = ಅವಿವೇಕದಿಂದಲೇ **ಧರ್ಮಾನ್** = ವಿಕಲ್ಪಿತ ವಸ್ತುಗಳನ್ನು, **ತತ್ರೈವ** = ಆ ಸ್ವಪ್ನದಲ್ಲಿ ಮಾತ್ರ, **ಪಶ್ಯತಿ** = ಕಾಣುತ್ತಾನೆ.

ಜಾಗ್ರತ್ ಸ್ವಪ್ನಗಳಿಗೆ ಕಾರ್ಯಕಾರಣ ಭಾವವಿಲ್ಲವೆಂಬುದನ್ನು ಹೇಳಿದ್ದಾಯಿತು. ಜಾಗ್ರತ್ತು ಸ್ವಪ್ನದೃಶ್ಯಕ್ಕೆ ಕಾರಣವಲ್ಲವೆಂದರೆ ನಮಗೆ ಬಾಧೆಯೇನೂ ಇಲ್ಲ. ಅದರ ದೃಢೀಕರಣಕ್ಕಾಗಿ ಈ ಶ್ಲೋಕ ಬಂದಿದೆ. **ವಿಪರ್ಯಾಸಾತ್** = ಪರಮಾರ್ಥ ಸತ್ ಆದ ಆತ್ಮನ ವಿವೇಚನೆ ಇಲ್ಲದ್ದರಿಂದ ಎಂದು ಪ್ರಕೃತೋಚಿತವಾದ ಅರ್ಥ. ಕಾರಿಕೆಯಲ್ಲಿ **'ಜಾಗ್ರದಚಿಂತ್ಯಾನ್'** ಎಂದು ಪಾಠವಿದೆ. ಜಾಗ್ರತ್ ಶಬ್ದಕ್ಕೆ ಸ್ಪೃಶೇತ್ ಎಂಬಲ್ಲಿ ಅನ್ವಯವಿರುವುದರಿಂದ ಅದು ಸಮಸ್ತ ಪದವಲ್ಲ. ಆದ್ದರಿಂದ **''ಜಾಗ್ರತ್ಯಚಿಂತ್ಯಾನ್''** ಎಂಬುದು ಶುದ್ಧಪಾಠವಾಗಿರಬೇಕು. ಉತ್ತರಾರ್ಧದಲ್ಲಿ ಸ್ವಪ್ನೇ ಎಂದು ಪೃಥಕ್ ಪದವಿದೆಯೆಂಬುದನ್ನು ಗಮನಿಸಬಹುದು.

**ಉಪಲಂಭಾತ್ ಸಮಾಚಾರಾದಸ್ತಿ ವಸ್ತುತ್ವವಾದಿನಾಮ್ ।**
**ಜಾತಿಸ್ತು ದೇಶಿತಾ ಬುದ್ಧೈರಜಾತೇಸ್ತ್ರಸತಾಂ ಸದಾ ॥೪೨॥**

**ಉಪಲಂಭಾತ್** = ಜಗತ್ತಿನಲ್ಲಿರುವ ಬಾಹ್ಯವಸ್ತುಗಳ ಉಪಲಬ್ಧಿಯು ಇರುವುದರಿಂದಲೂ, **ಸಮಾಚಾರಾತ್** = ವರ್ಣಾಶ್ರಮಾದಿಧರ್ಮಗಳ ಆಚರಣೆ ಯಿರುವುದರಿಂದಲೂ, **ಅಜಾತೇಃ** = ಜಗತ್ತು ಹುಟ್ಟಿಯೇ ಇಲ್ಲವೆಂಬ ಅಜಾತಿ ವಾದಕ್ಕೆ, **ಸದಾ** = ಯಾವಾಗಲೂ, **ತ್ರಸತಾಂ** = ಹೆದರುವ, **ಅಸ್ತಿವಸ್ತುತ್ವ ವಾದಿನಾಂ** = ವಸ್ತುತಃ ಜಗತ್ತು ಇದೆಯೆಂದು ವಾದಿಸತಕ್ಕವರ ಹಿತಕ್ಕಾಗಿ, **ಜಾತಿಃ** = ಜಗತ್ತಿನ ಉತ್ಪತ್ತಿಯು, **ಬುದ್ಧೈಃ** = ಜ್ಞಾನಿಗಳಾದ ಋಷಿಗಳಿಂದ, **ದೇಶಿತಾ** = ಉಪದಿಷ್ಟವಾಗಿದೆ.

ಅಜಾತಿವಾದವನ್ನಂಗೀಕರಿಸಿದರೆ ಈ ವಚನಗಳು ಹೇಗೆ ಸಂಗತವಾಗುತ್ತವೆ? – **''ಆತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ'' ... ಅನ್ನಾತ್ ಪುರುಷಃ । ಯತೋ ವಾ ಇಮಾನಿ ಭೂತಾನಿ ಜಾಯಂತೇ''** ಎಂದು ತೈತ್ತಿರೀಯೋಪನಿಷತ್ತಿನಲ್ಲಿದೆ. **'ಅಹಂ ಸರ್ವಸ್ಯ ಪ್ರಭವಃ'** (ಗೀತಾ. ೧೦–೮), **ಸ ಸರ್ಗಕಾಲೇ ಚ ಕರೋತಿ ಸರ್ವಂ, ಸಂಹಾರ ಕಾಲೇ ಚ ತದತ್ತಿ ಭೂಯಃ** (ಮೋಕ್ಷ. ಧ. ೩೦೨–೧೨). **'ಜನ್ಮಾದ್ಯಸ್ಯಯತಃ'** ಎಂದು ಬ್ರಹ್ಮಸೂತ್ರದ ಆದಿ ಯಲ್ಲಿಯೇ ಇದೆ. ಧರ್ಮಶಾಸ್ತ್ರವು ವಿಧಿನಿಷೇಧಗಳನ್ನು ಹೇಳಿದೆ. ಪುಣ್ಯವಂತರಿಗೆ

ಸ್ವರ್ಗವೂ, ಪಾಪಿಗಳಿಗೆ ನರಕವೂ ಬರುತ್ತದೆಯೆಂದು ಪುರಾಣಗಳು ಹೇಳುತ್ತವೆ. ಜಗತ್ತೇ ಹುಟ್ಟಿಲ್ಲವಾದರೆ ಧರ್ಮಶಾಸ್ತ್ರಗಳ ವಿಧಿ ನಿಷೇಧಗಳು ಯಾರಿಗೆ ಅನ್ವಯಿಸುತ್ತವೆ? ಶಿಷ್ಟರು ಅವನ್ನು ಈಗಲೂ ಪಾಲಿಸುತ್ತಿದ್ದಾರಲ್ಲ? – ಇತ್ಯಾದಿ ಶಂಕೆಗಳು ಹುಟ್ಟುತ್ತವೆ. ಜಗದ್ವ್ಯವಹಾರಗಳೇ ಮಿಥ್ಯೆಯೆಂದಾದರೆ ನೀತಿನಿಯಮಗಳ ಕಟ್ಟು ಒಡೆದು ಹೋದೀತು ಎಂದು ಜನರು ವ್ಯಾಕುಲರಾಗಿ ಬಿಡುತ್ತಾರೆ. ಈ ಅಜಾತಿವಾದವು ನಮಗೆ ಬೇಡ – ಎಂದು ಶ್ರೋತ್ರಿಯರೇ ಹಿಂದೆ ಸರಿದು ಬಿಡುತ್ತಾರೆ. ದ್ವೈತವಾದವೇ ನಮಗೆ ಹಿತಕರ – ಎಂದು ಹೇಳತಕ್ಕವರಿದ್ದಾರೆ.

ಅಂತಹ ಸಾಮಾನ್ಯಬುದ್ಧಿಯ ಜನರಿಗೆ ಒಂದು ದಾರಿಯನ್ನು ತೋರಿಸಿ, ಕ್ರಮವಾಗಿ ಅವರ ಬುದ್ಧಿಯನ್ನು ಪರಿಷ್ಕರಿಸಿ ಪರಮಾರ್ಥವನ್ನು ತಿಳಿಯುವ ಅರ್ಹತೆಯನ್ನು ದೊರಕಿಸಿಕೊಡುವುದಕ್ಕಾಗಿ ''ಜಗತ್ತು ಹುಟ್ಟಿದೆ, ಇದೆಲ್ಲವೂ ಸತ್ಯ'' ಎಂದು ಜಾತಿವಾದವನ್ನು ಋಷಿಗಳು ಹೇಳಿದ್ದಾರೆ. ಶ್ರುತಿ ಸ್ಮೃತಿ ಪುರಾಣಗಳೆಲ್ಲವೂ ಈ ಜಾತಿವಾದವನ್ನು ಪುರಸ್ಕರಿಸಿರುವುದುಂಟು. ಪರಮಾರ್ಥವು ಅದ್ವೈತವೆಂಬುದನ್ನೂ ಯೋಗ್ಯ ಅಧಿಕಾರಿಗಳಿಗಾಗಿ ಶ್ರುತಿಸ್ಮೃತ್ಯಾದಿಗಳು ಹೇಳಿವೆ. ವಿವೇಕಿಗಳು ವಿಚಾರಮಾಡಿ ಸತ್ಯವೇನೆಂಬುದನ್ನು ನಿಶ್ಚಯಿಸಿಕೊಳ್ಳಬೇಕು. ಅಧಿಕಾರವನ್ನು ಗಳಿಸದೆ, ಮೊದಲೇ ಪರಮಾರ್ಥಕ್ಕೆ ಕೈಹಾಕಿದರೆ ಗುರುಶಿಷ್ಯ ಸಂಪ್ರದಾಯವೂ ಮಿಥ್ಯೆಯಾದೀತು. ಮೊದಲು ಅಸತ್ಯದಲ್ಲಿ ನಿಂತು ಕ್ರಮವಾಗಿ ಸತ್ಯದ ಮೆಟ್ಟಿಲನ್ನು ಹತ್ತಬೇಕು. ಆದ್ದರಿಂದಲೇ ಭರ್ತೃಹರಿಯು ವಾಕ್ಯಪದೀಯದಲ್ಲಿ **''ಅಸತ್ಯೇ ವರ್ತ್ಮನಿ ಸ್ಥಿತ್ವಾ ತತಃ ಸತ್ಯಂ ಸಮೀಹತೇ''** ಎಂದು ಹೇಳಿದ್ದಾನೆ.

**ಅಜಾತೇಸ್ತ್ರಸತಾಂ ತೇಷಾಮುಪಲಂಭಾದ್ವಿಯಂತಿ ಯೇ ।**
**ಜಾತಿದೋಷಾ ನ ಸೇತ್ಸ್ಯಂತಿ ದೋಷೋಽಪ್ಯಲ್ಪೋಭವಿಷ್ಯತಿ ॥೪೩॥**

**ಉಪಲಂಭಾತ್** = ಬಾಹ್ಯವಸ್ತುಗಳ ಉಪಲಬ್ಧಿಯಿಂದ (ಮತ್ತು ಧಾರ್ಮಿಕ ಆಚಾರಗಳನ್ನು ಶಿಷ್ಯರು ನಡೆಸುವುದರಿಂದ, **ಯೇ** = ಯಾವ ಶಿಷ್ಯರು, **ವಿಯಂತಿ** = ವಿರುದ್ಧವಾಗಿ ದ್ವೈತಮಾರ್ಗದಲ್ಲಿ ಹೋಗುತ್ತಾರೋ, ಅಂತಹ, **ಅಜಾತೇಃ** = ಅಜಾತಿವಾದಕ್ಕೆ, **ತ್ರಸತಾಂ** = ಹೆದರುತ್ತಿರುವ, **ತೇಷಾಂ** = ಆ ಜನರಿಗೆ, **ಜಾತಿದೋಷಾಃ** = ಬ್ರಹ್ಮದಿಂದ ಜಗತ್ತಿನ ಜನ್ಮವಾಗುತ್ತದೆ ಎಂಬ ದ್ವೈತವನ್ನವಲಂಬಿಸಿದ ದೋಷಗಳು, **ನ ಸೇತ್ಸ್ಯಂತಿ** = ಸಿದ್ಧಿಸುವುದಿಲ್ಲ ಎಂದರೆ – ಆ ದೋಷಗಳು ಬರುವುದಿಲ್ಲ, **ದೋಷೋಽಪಿ** = ಬಂದರೂ ಆ ದೋಷವು, **ಅಲ್ಪಃ** = ಕಡಿಮೆ ಪ್ರಮಾಣವುಳ್ಳದ್ದು, **ಭವಿಷ್ಯತಿ** = ಆಗುವುದು.

**ಟಿಪ್ಪಣಿ :** ವಿ + ಯಂತಿ = ವಿಯಂತಿ. ಇಣ್‌ಗತೌ ಎಂಬ ಧಾತುವಿನ ವರ್ತಮಾನ ಕಾಲ – ಪ್ರ. ಪುರುಷ – ಬ. ವಚನ. ವಿರುದ್ಧವಾಗಿ ಹೋಗುತ್ತಾರೆ ಎಂದು ಶಬ್ದಾರ್ಥ.

ಜಾತಿವಾದವು ದ್ವೈತಮತವಾಗುತ್ತದೆ. ನಿತ್ಯಶುದ್ಧ ಬುದ್ಧ ಮುಕ್ತವಾದ ನಿಷ್ಕಲ ಬ್ರಹ್ಮವು ಹುಟ್ಟುತ್ತದೆ ಅಥವಾ ಅದರಿಂದ ಜಗತ್ತು ಹುಟ್ಟುತ್ತದೆ ಎಂದರೆ ಬ್ರಹ್ಮವು ವಿಕೃತವಾಗುತ್ತದೆ ಎಂದು ಬ್ರಹ್ಮವನ್ನು ನಿಂದಿಸಿದಂತಾಯಿತು. **''ಉದರಮಂತರಂ ಕುರುತೇ । ಅಥ ತಸ್ಯಭಯಂ ಭವತಿ''** (ತೈತ್ತಿ ೨–೭) ಇತ್ಯಾದಿ ಶ್ರುತಿವಚನದಂತೆ ದ್ವೈತವಾದಿಗಳಿಗೆ ದೋಷ ಬರುವದಿಲ್ಲವೆ? ಎಂದು ಶಂಕೆ. ಅದಕ್ಕೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ – ಆದರೆ ಜಾತಿವಾದಿಗಳೂ ಶ್ರೋತ್ರಿಯರು. ಧರ್ಮಕಾರ್ಯಗಳನ್ನು ಶ್ರದ್ಧೆಯಿಂದ ಆಚರಿಸುತ್ತಾರೆ. ವಿವೇಕ ಮಾರ್ಗದಲ್ಲಿಯೇ ನಡೆಯುತ್ತಾರೆ. ಪರಮಾರ್ಥವನ್ನರಿಯದೆ ಮಂದಪ್ರಜ್ಞರಾದರೂ ಸನ್ಮಾರ್ಗಗಾಮಿಗಳು. ಸಮ್ಯಗ್‌ದರ್ಶನಕ್ಕೆ ಸಹಕಾರಿಯಾದ ದಾರಿಯಲ್ಲಿ ಹೋಗತಕ್ಕವರಾದ್ದರಿಂದ ಅವರಿಗೆ ದೋಷಗಳು ಅಂಟುವುದಿಲ್ಲ. ಆದರೂ ಸ್ವಲ್ಪದೋಷ ಇದ್ದೇ ಇರುತ್ತದೆ. ಅದರ ಫಲವಾಗಿ ಪುನರ್ಜನ್ಮ ಮುಂತಾದದ್ದು ಅವರಿಗೆ ಸಂಭವಿಸುತ್ತದೆ.

**ಉಪಲಂಭಾತ್ ಸಮಾಚಾರಾತ್ ಮಾಯಾಹಸ್ತೀ ಯಥೋಚ್ಯತೇ ।**
**ಉಪಲಂಭಾತ್ ಸಮಾಚಾರಾತ್ ಅಸ್ತಿ ವಸ್ತು ತಥೋಚ್ಯತೇ ॥೪೪॥**

ಹಿಂದೆ ಹೇಳಿದ ಉಪಲಬ್ಧಿ, ಸಮಾಚಾರಗಳಿರುವುದರಿಂದ ಇಂದ್ರಜಾಲದಲ್ಲಿ ಕಾಣುವ ಆನೆಯೂ ಇದೆಯೆಂದು ಹೇಗೆ ಉಕ್ತವಾಗುವುದೋ ಅದೇ ರೀತಿಯಲ್ಲಿ ಉಪಲಬ್ಧಿ ಸಮಾಚಾರಗಳಿರುವುದರಿಂದ ಬಾಹ್ಯವಸ್ತುವೂ ಇದೆಯೆಂದು ಹೇಳಲಾಗುತ್ತಿದೆ.

ಉಪಲಬ್ಧಿ, ಸಮಾಚಾರಗಳೆಂಬ ಹೇತುಗಳಿರುವಾಗ ಬಾಹ್ಯ ವಸ್ತುವಿಲ್ಲ ಎಂದು ಹೇಳುವುದು ಹೇಗೆ? ಇದು ಯುಕ್ತವಲ್ಲ ಎಂದು ಆಕ್ಷೇಪಿಸಬಹುದು. ಹಾಗಲ್ಲ. ಉಪಲಬ್ಧಿ ಸಮಾಚಾರಗಳಿದ್ದ ಮಾತ್ರಕ್ಕೆ ದೃಶ್ಯವಾದ ವಸ್ತು ಸತ್ಯವಾಗಬೇಕಾಗಿಲ್ಲ. ಹೇಗೆಂದರೆ ಐಂದ್ರಜಾಲಿಕನು ಮಾಯಾಶಕ್ತಿಯಿಂದ ಆನೆಯನ್ನು ತೋರಿಸುತ್ತಾನೆ. ಅದು ಎದುರಿಗೆ ಕಾಣಿಸುತ್ತದೆ. ಆತನು ಆ ಮಾಯಾಹಸ್ತಿಯನ್ನು ಸರಪಳಿಯಿಂದ ಕಟ್ಟುತ್ತಾನೆ. ಅದರ ಮೇಲೆ ಹತ್ತಿಕುಳಿತುಕೊಳ್ಳುತ್ತಾನೆ. ಇಷ್ಟಾದರೂ ಆ ಹಸ್ತಿಯು ಮಿಥ್ಯೆಯೇ. ಉಪಲಬ್ಧಿ ಸಮಾಚಾರಗಳಿದ್ದ ಮಾತ್ರದಿಂದ ಪದಾರ್ಥವು ಸತ್ಯವಾಗಬೇಕಾಗಿಲ್ಲ. ಅವು ವ್ಯಭಿಚರಿತಹೇತುಗಳು. ಆದ್ದರಿಂದ ಜಾಗ್ರತ್ತಿನಲ್ಲಿ ಕಾಣುವ ವಸ್ತು ಮಿಥ್ಯೆಯೆನ್ನುವುದು ಸರಿಯೆಂದು ಅಭಿಪ್ರಾಯ. ಮಾಯಾ ಹಸ್ತಿ ಎಂದರೆ ಕನಸಿನಲ್ಲಿ ಕಾಣುವ ಆನೆಯೆಂದೂ ಹೇಳಬಹುದು.

**ಜಾತ್ಯಾಭಾಸಂ ಚಲಾಭಾಸಂ ವಸ್ತ್ವಾಭಾಸಂ ತಥೈವ ಚ ।**
**ಅಜಾಚಲಮವಸ್ತುತ್ವಂ ವಿಜ್ಞಾನಂ ಶಾಂತಮದ್ವಯಮ್ ॥೪೫॥**

ಪರಮಾರ್ಥ ವಸ್ತುವಾದರೋ, **ಜಾತ್ಯಾಭಾಸಂ** = ಹುಟ್ಟಿದಂತೆ ತೋರತಕದ್ದು, **ಚಲಾಭಾಸಂ** = ಚಲಿಸುವಂತೆ ತೋರತಕದ್ದು **ವಸ್ತ್ವಾಭಾಸಂ** = ದ್ರವ್ಯ ದಂತೆ ತೋರತಕ್ಕದ್ದು, ಆ ಪರಮಾರ್ಥವಸ್ತುವು **ಅಜ** = ಜನ್ಮರಹಿತ, **ಅಚಲ** = ಚಲನರಹಿತ, **ಅವಸ್ತು** = ಧರ್ಮವಿಶಿಷ್ಟವಾದ ದ್ರವ್ಯಕ್ಕೆ ಭಿನ್ನವಾದದ್ದು ಯಾವ ಧರ್ಮವೂ ಇಲ್ಲದ್ದು **ವಿಜ್ಞಾನಂ** = ಪ್ರಜ್ಞಪ್ತಿಸ್ವರೂಪವಾದದ್ದು, **ಶಾಂತಂ** = ಜಾತ್ಯಾದಿ ಧರ್ಮರಹಿತ, **ಅದ್ವಯಂ** = ಅದ್ವಿತೀಯ, ಎರಡನೆಯ ವಸ್ತುವೇ ಇಲ್ಲದ್ದು.

ದೃಶ್ಯವಾದ ಮಾಯಾಕಲ್ಪಿತವಸ್ತುವಿಗೆ ಮೇಲೆ ನಿಷಿದ್ಧವಾದ ಧರ್ಮಗಳಿರುತ್ತವೆ. ಉದಾ –

ಚೈತ್ರನು ಹುಟ್ಟುತ್ತಾನೆ. ಇಲ್ಲಿ ಜನ್ಮ.

ರಾಮನು ಹೋಗುತ್ತಾನೆ. ಇಲ್ಲಿ ಚಲನೆ.

ಅವನು ಬಾಲಕ. ಎತ್ತು ಬಿಳಿಯದು. ಹಗ್ಗ ಉದ್ದವಾಗಿದೆ.ಇಲ್ಲಿ ಬಿಳುಪು, ದೀರ್ಘತೆ, ಬಾಲ್ಯ ಇವು ವಸ್ತು ಧರ್ಮಗಳು.

ಇಲ್ಲೊಂದು ಆಕ್ಷೇಪ ಹುಟ್ಟಬಹುದು. ಹುಟ್ಟಿದಂತೆ ತೋರುತ್ತದೆ, ಹೋದಂತೆ ಕಾಣುತ್ತದೆ – ಇತ್ಯಾದಿಯಾಗಿ ಹೇಳಿದೆಯಷ್ಟೆ. ಆಗ ಹುಟ್ಟತಕ್ಕವನೂ ಹೋಗತಕ್ಕ ವನೂ ಲೋಕದಲ್ಲಿ ಇರಬೇಕಷ್ಟೆ. ಇಲ್ಲದ್ದು ಉಪಮಾನವಾಗುವುದಿಲ್ಲ. ಹಾಗೆ ಉಪಮಾನವಾಗುವ ಬಾಹ್ಯವಸ್ತುವೇ ಇಲ್ಲವಲ್ಲ? ಆಗ ಈ ವರ್ಣನೇ ಹೇಗೆ ಹೊಂದುತ್ತದೆ? ಅದಕ್ಕೆ ಸಮಾಧಾನ ಹೀಗೆ – ಅವಿದ್ಯಾಕಲ್ಪಿತವಾದ ಬಾಹ್ಯವಸ್ತು ನಮಗೆ ಕಾಣುವುದಷ್ಟೆ. ಅದನ್ನೇ ಉಪಮಾನವಾಗಿಟ್ಟುಕೊಂಡು ಹೀಗೆ ವರ್ಣಿಸಿದ್ದಾರೆ. ಇದರಲ್ಲಿ ದೋಷವೇನೂ ಇಲ್ಲ. ಕಲ್ಪಿತವಾದದ್ದೂ ತೋರುವುದರಿಂದ ವ್ಯಾವಹಾರಕವಾಗಿ ಇದೆಯೆಂದರೆ ತಪ್ಪಲ್ಲ. ವೇದದಲ್ಲಿ **''ಸತ್ಯಂ ಚಾನೃತಂ ಚ ಸತ್ಯಮಭವತ್''** (ತೈ. ೨–೬) ಎಂದು ಹೇಳಿದೆ. ಸತ್ಯಾನೃತಗಳ ಮಿಶ್ರಣದಿಂದ ಲೋಕವ್ಯವಹಾರ ನಡೆಯುತ್ತದೆ.

**ಏವಂ ನ ಜಾಯತೇ ಚಿತ್ತಮೇವಂ ಧರ್ಮಾ ಅಜಾಃ ಸ್ಮೃತಾಃ ।**
**ಏವಮೇವ ವಿಜಾನಂತೋ ನ ಪತಂತಿ ವಿಪರ್ಯಯೇ ॥೪೬॥**

**ಏವಂ** = ಈ ಪ್ರಕಾರವಾಗಿ ದ್ವೈತವು ಇಲ್ಲವೆಂದು ಸಿದ್ಧವಾಗುವುದರಿಂದ,

**ಚಿತ್ತಂ** = ಚಿತ್ತವೂ ಸಹ, **ನ ಜಾಯತೇ** = ಹುಟ್ಟುವುದಿಲ್ಲ. **ಏವಂ** = ಈ ಹೇತುಗಳಿರುವುದರಿಂದ, **ಧರ್ಮಾಃ** = ಜೀವಾತ್ಮರೂ ಚಿತ್ತದೃಶ್ಯ ವಸ್ತುಗಳೂ, **ಅಜಾಃ** = ಹುಟ್ಟಿಯೇ ಇಲ್ಲವೆಂದು, **ಸ್ಮೃತಾಃ** = ಬ್ರಹ್ಮಜ್ಞಾನಿಗಳಿಂದ ಸ್ಮೃತ ವಾಗಿವೆ. **ಏವಮೇವ** = ಆತ್ಮತತ್ತ್ವವು ಜಾತ್ಯಾದಿರಹಿತವೂ ಅದ್ವಯವೂ ಆದ ವಿಜ್ಞಾನ ಸ್ವರೂಪವೆಂದೇ, **ವಿಜಾನಂತಃ** = ಸ್ಫುಟವಾಗಿ ತಿಳಿದುಕೊಂಡ ತತ್ತ್ವ ಜ್ಞಾನಿಗಳು, **ವಿಪರ್ಯಯೇ** = ವಿರುದ್ಧವಾದ ದ್ವೈತದಿಂದ ಪ್ರಾಪ್ತವಾಗುವ ಅವಿದ್ಯಾಧ್ವಾಂತಸಾಗರದಲ್ಲಿ, **ನ ಪತಂತಿ** = ಬೀಳುವುದಿಲ್ಲ.

ಹೀಗೆ ಅದ್ವಯಾತ್ಮನನ್ನು ತಿಳಿದ ತತ್ತ್ವಜ್ಞರಿಗೆ ಶೋಕ, ಮೋಹಗಳು ಸಂಭವಿಸುವುದಿಲ್ಲ **''ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ''** (ಈಶಾ– ೭) ಎಂದು ಶ್ರುತಿಯಿದೆ. ಶೋಕ, ಮೋಹ, ಭಯ ಮುಂತಾದವು ಇನ್ನೊಂದು ವಸ್ತುವಿನಿಂದ ಬರತಕ್ಕವು. ಇನ್ನೊಂದು ವಸ್ತುವೇ ಇಲ್ಲದಾಗ ಶೋಕ ಮೋಹಾದಿಗಳಿಗೆ ಅವಕಾಶವೇ ಇರುವುದಿಲ್ಲ. ಪ್ರತಿಬಿಂಬವೆನಿಸಿದ ಜೀವವು ಪರಮಾರ್ಥವಾಗಿ ಬಿಂಬವೆಂಬ ಬ್ರಹ್ಮವೇ ಆಗಿದೆ.

**ಋಜುವಕ್ರಾದಿಕಾಭಾಸಮಲಾತಸ್ಪಂದಿತಂ ಯಥಾ ।**
**ಗ್ರಹಣಗ್ರಾಹಕಾಭಾಸಂ ವಿಜ್ಞಾನಸ್ಪಂದಿತಂ ತಥಾ ॥೪೭॥**

ಪಂಜುದೀಪದ ಚಲನೆಯು ನೇರ, ಡೊಂಕು ಮುಂತಾದ ವಿವಿಧ ರೂಪ ವನ್ನು ತಳೆದಿರುವಂತೆ ಹೇಗೆ ಕಾಣುತ್ತದೆಯೋ **ತಥಾ** = ಹಾಗೆಯೇ **ವಿಜ್ಞಾನ ಸ್ಪಂದಿತಂ** = ವಿಜ್ಞಾನವಾದ ಪರಬ್ರಹ್ಮದ ಸ್ಪಂದನವು ಗ್ರಾಹ್ಯಗ್ರಾಹಕ ಭಾವ ವನ್ನು – ಎಂದರೆ – ವಿಷಯವಿಷಯಿಭಾವವನ್ನು ತಳೆದಂತೆ ತೋರುವುದು.

ವಿಜ್ಞಾನಕ್ಕೆ ಪರಮಾರ್ಥವಾದ ಸ್ಪಂದಿತವಿಲ್ಲ. ಅವಿದ್ಯೆಯಿಂದ ಅದು ಸ್ಪಂದಿಸಿ ದಂತೆ ತೋರುವುದು. ಇದನ್ನು ಶಾಸ್ತ್ರೀಯಪರಿಭಾಷೆಯಲ್ಲಿ ವಿವರ್ತ ಎನ್ನುತ್ತಾರೆ. **''ಅಪ್ರಚ್ಯುತ ಪೂರ್ವರೂಪಸ್ಯ ಅಸತ್ಯನಾನಾಕಾರಾವಭಾಸೋ ವಿವರ್ತಃ''** ತನ್ನ ಸ್ವಸ್ವರೂಪಕ್ಕೆ ತೋರುವುದು ವಿವರ್ತವೆನಿಸುತ್ತದೆ.

ಅದ್ವೈತವು ವಿವರ್ತವಾದವನ್ನು ಅಂಗೀಕರಿಸಿದೆ. ಪಂಜನ್ನು ಅಲ್ಲಾಡಿಸುತ್ತಿದ್ದರೆ ದೀಪವು ನಾನಾಕಾರವುಳ್ಳದ್ದಾಗಿ ತೋರುವುದು. ಹಾಗೆಯೇ ವಿಜ್ಞಾನವೆಂಬ ಪರಬ್ರಹ್ಮವು ಅವಿದ್ಯೆಯಿಂದ ಜಗದ್ರೂಪವಾಗಿಯೂ ಆ ವೈಚಿತ್ರ್ಯವನ್ನು ಗ್ರಹಿಸುವ ಚಿತ್ತವಾಗಿಯೂ ತೋರುತ್ತದೆ. ಹೀಗೆ ತೋರುವುದೆಲ್ಲವೂ ವಿವರ್ತವೆಂದು ತಾತ್ಪರ್ಯ.

ಕಾರಿಕೆಯಲ್ಲಿ ಗ್ರಹಣವೆಂದರೆ ಗ್ರಹಣಕ್ಕೆ ವಿಷಯವಾದ ಗ್ರಾಹ್ಯ ಎಂದರ್ಥ. ಗ್ರಾಹ್ಯವೇ ವಿಷಯ. ಚಿತ್ತವು ವಿಷಯಿ.

**ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ** (ಶ್ವೇತ. ೬–೧), **ಸೋಽ-ಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸತಪೋಽತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ** (ತೈತ್ತಿ ೨–೬) ಇತ್ಯಾದಿ ಶ್ರುತಿಗಳಲ್ಲಿ ಪರಬ್ರಹ್ಮಕ್ಕೆ ನಾನಾ ವಿಧಶಕ್ತಿಗಳಿವೆಯೆಂದೂ ಅದು ತಪಸ್ಸನ್ನಾಚರಿಸಿ ಈ ಜಗತ್ತೆಲ್ಲ ವನ್ನೂ ಸೃಜಸಿತೆಂದೂ ವರ್ಣನೆ ಇರುವುದು ನಿಜವೇ. ಸೃಷ್ಟಿ ಮೊದಲಾದದ್ದೆಲ್ಲವೂ ಮಾಯೆಯಿಂದ ಆಗಿದ್ದು. ಚಿತ್ತ ದೃಶ್ಯವೆಲ್ಲವೂ ಮಾಯಿಕವೇ ಹೊರತು ಪರಮಾರ್ಥವಲ್ಲವೆಂದು ತಿಳಿಯಬೇಕು.

**ಅಸ್ಪಂದಮಾನಮಲಾತಮನಾಭಾಸಮಜಂ ಯಥಾ ।**
**ಅಸ್ಪಂದಮಾನಂ ವಿಜ್ಞಾನಮನಾಭಾಸಮಜಂ ತಥಾ ॥೪೮॥**

**ಅಸ್ಪಂದಮಾನಂ** = ಚಲಿಸದಿರುವ, **ಆಲಾತಂ** = ಅದೇ, ಪಂಜು ದೀಪವು **ಅನಾಭಾಸಂ** = ನೇರ, ಡೊಂಕು ಮುಂತಾದ ಯಾವ ಆಭಾಸವೂ (ವಿಕಾರವೂ) ಇಲ್ಲದೆ. ಆದ್ದರಿಂದಲೇ **ಅಜಂ** = ಆಭಾಸರೂಪವಾದ ಜನ್ಮವೂ ಇಲ್ಲದೆ ಇರುವುದೋ, **ತಥಾ** = ಹಾಗೆಯೇ, **ಅಸ್ಪಂದಮಾನಂ** = ಸ್ಪಂದನವಿಲ್ಲದ, **ವಿಜ್ಞಾನಂ** = ಪರಬ್ರಹ್ಮವು, **ಅನಾಭಾಸಂ** = ಜಾತ್ಯಾದಿವಿಕಾರವಿಲ್ಲದೆ, **ಅಜಂ** = ಅಜಸ್ವರೂಪವಾಗಿಯೇ ಇರುತ್ತದೆ.

ಅಭಿಪ್ರಾಯವು ಸ್ಪಷ್ಟವಾಗಿದೆ. **'ಅಲಾತಮೇವ ಆಲಾತಂ'** ಸ್ವಾರ್ಥೇ ಅಣ್ ಪ್ರತ್ಯಯ ಬಂದು ಆಲಾತವೆಂಬ ರೂಪವಾಗಿದೆ.

**ಅಲಾತೇ ಸ್ಪಂದಮಾನೇ ವೈ ನಾಽಽಭಾಸಾ ಅನ್ಯತೋಭುವಃ ।**
**ನ ತತೋಽನ್ಯತ್ರ ನಿಸ್ಪಂದಾನ್ನಾಲಾತಂ ಪ್ರವಿಶಂತಿತೇ ॥೪೯॥**

**ಅಲಾತೇ** = ಅಲಾತವು, **ಸ್ಪಂದಮಾನೇ** = ಚಲಿಸುತ್ತಿರುವಾಗ ತೋರುವ, **ಆಭಾಸಾಃ** = ಋಜುತ್ವ, ವಕ್ರತ್ವ ಮುಂತಾದ ಆಭಾಸಗಳು, **ಅನ್ಯತೋಭುವಃ** = ಬೇರೊಂದು ಕಡೆ ಹುಟ್ಟಿ ಬಂದವುಗಳು, **ನ** = ಅಲ್ಲ, **ನಿಸ್ಪಂದಾತ್** = ಸ್ಪಂದನವಿಲ್ಲದ, **ತತಃ** = ಅಲಾತದಿಂದ, **ಅನ್ಯತ್ರ** = ಬೇರೊಂದು ಕಡೆಗೆ ಆಭಾಸಗಳು ಹೋದವೆಂಬುದೂ **ನ** = ಇಲ್ಲ, **ತೇ** = ಆ ಆಭಾಸಗಳು, **ಅಲಾತಂ** = ಅಲಾತವನ್ನೇ, **ನ ಪ್ರವಿಶಂತಿ** = ಪ್ರವೇಶಿಸುವುದೂ ಇಲ್ಲ.

ಪರಬ್ರಹ್ಮದಲ್ಲಿ ತೋರುವ ದೃಶ್ಯ ವಸ್ತುಗಳೆಲ್ಲವೂ ಮಾಯಿಕಗಳು ಎಂದೂ ಅನಿರ್ವಚನೀಯಗಳೆಂದೂ ಅಲಾತದೃಷ್ಟಾಂತದಿಂದ ದೃಢಪಡಿಸಲಾಗುತ್ತದೆ.

ಅಲಾತದಲ್ಲಿ ಸ್ಪಂದನವಾದಾಗ ಮಾತ್ರ ದೀಪದ ಆಭಾಸಗಳು ಕಾಣುತ್ತವೆ. ಅವು ಮೊದಲು ಎಲ್ಲಿದ್ದವು? ಬೇರೆ ಎಲ್ಲಿಯೂ ಇರಲಿಲ್ಲ. ಅವು ಹೊರಗಿಂದ

ಬಂದು ಅಲಾತದಲ್ಲಿ ಸೇರಿಕೊಳ್ಳುವುದಿಲ್ಲ. ಅಲಾತದ ಚಲನೆ ನಿಂತಾಗ ಅವು ಬೇರೆ ಕಡೆಗೆ ಹೋಗುವುದೂ ಇಲ್ಲ. ಏಕೆಂದರೆ, ಅವು ಇನ್ನೊಂದು ಕಡೆ ಕಾಣಿಸುವುದಿಲ್ಲ. ಅವು ಏಕೆ ಕಾಣುಸುವುದಿಲ್ಲ? ಜನರು ಮನೆಯೊಳಗೆ ಹೋಗುವಂತೆ, ಆಭಾಸಗಳು ಅಲಾತದೊಳಗೆ ಹೋಗಿ ಸೇರಿಕೊಳ್ಳುವುದಿಲ್ಲ!

**ನ ನಿರ್ಗತಾ ಅಲಾತಾತ್ತೇ ದ್ರವ್ಯತ್ವಾಭಾವಯೋಗತಃ ।**
**ವಿಜ್ಞಾನೇಽಪಿ ತಥೈವ ಸ್ಯುರಾಭಾಸತ್ವಾ ವಿಶೇಷತಃ ॥೫೦॥**

**ತೇ** = ವಕ್ರತ್ವ ಮುಂತಾದ ಆ ಆಭಾಸಗಳು, **ದ್ರವ್ಯತ್ವಾಭಾವಯೋಗತಃ** = ದ್ರವ್ಯತ್ವವಿಲ್ಲವೆಂಬ ಯುಕ್ತಿಯಿಂದ (ವಸ್ತುಗಳೇ ಅಲ್ಲವಾದ್ದರಿಂದ) **ಅಲಾತಾತ್** = ಅಲಾತದಿಂದ, **ತೇ** = ವಕ್ರತ್ವ ಮುಂತಾದ ಆಭಾಸಗಳು, **ನ ನಿರ್ಗತಾಃ** = ಹೊರಗೆ ಹೋಗಲೂ ಇಲ್ಲ. **ವಿಜ್ಞಾನೇಽಪಿ** = ವಿಜ್ಞಾನದ ವಿಷಯದಲ್ಲಿಯೂ ಸಹ ಜಗತ್ತಿನ ಜನ್ಮಾದ್ಯಾಭಾಸಗಳು, **ಆಭಾಸತ್ವಾವಿಶೇಷಾತ್** = ಆಭಾಸತ್ವವು ಸಮಾನವಾದ್ದರಿಂದ, **ತಥೈವ** = ಹಾಗೆಯೇ ಆಗುತ್ತವೆ.

ಜಗತ್ತಿನ ಜನ್ಮಾದಿಗಳು ವಿಜ್ಞಾನದಲ್ಲಿ ಇಲ್ಲದಿದ್ದರೂ ಅದರಲ್ಲಿ ತೋರತಕ್ಕ ಆಭಾಸಗಳು ಅವಿದ್ಯೆಯಿಂದ ಕಾಣತಕ್ಕವು. ಅವು ವಿಜ್ಞಾನವೆಂಬ ಪರಬ್ರಹ್ಮದಲ್ಲಿ ಹೊರಗಿನಿಂದ ಬಂದವುಗಳಲ್ಲ. ವಸ್ತುತಃ ಇರುವ ದ್ರವ್ಯಗಳಲ್ಲವಾದ್ದರಿಂದ ಹೊರಗೆ ಹೋಗತಕ್ಕವೂ ಅಲ್ಲ. ಪರಬ್ರಹ್ಮದಲ್ಲಿ ಅಡಗತಕ್ಕವೂ ಅಲ್ಲ. ಅವುಗಳಿಗೆ ನಿಮಿತ್ತವಾದ ಅವಿದ್ಯೆಯು ತೊಲಗಿದಾಗ ಆಭಾಸವಾವುದೂ ತೋರುವುದೇ ಇಲ್ಲ. ಈ ವಿಷಯವನ್ನೇ ಮುಂದಿನ ಎರಡು ಕಾರಿಕೆಗಳು ವಿವರಿಸುತ್ತವೆ.

**ವಿಜ್ಞಾನೇ ಸ್ಪಂದಮಾನೇ ವೈ ನಾಭಾಸಾ ಅನ್ಯತೋಭುವಃ ।**
**ನ ತತೋಽನ್ಯತ್ರ ನಿಸ್ಪಂದಾನ್ನ ವಿಜ್ಞಾನಂ ವಿಶಂತಿ ತೇ ॥೫೧॥**

ನಮ್ಮಲ್ಲಿರುವ ಅವಿದ್ಯೆಯಿಂದ ವಿಜ್ಞಾನವು ಸ್ಪಂದಿಸಿದಂತೆ ತೋರಿದಾಗ ಕಾಣುವ ದೃಶ್ಯಗಳೆಂಬ ಆಭಾಸಗಳು ಹೊರಗಿನಿಂದ ಹುಟ್ಟಿ ಬರುವುದಿಲ್ಲ. ವಿಜ್ಞಾನವು ಸ್ಪಂದಿಸದಿದ್ದಾಗ ಆಭಾಸಗಳು ಸೇರಿ ಅಡಗಿಕೊಳ್ಳುವುದೂ ಇಲ್ಲ.

**ನ ನಿರ್ಗತಾಸ್ತೇ ವಿಜ್ಞಾನಾತ್ ದ್ರವ್ಯತ್ವಾಭಾವಯೋಗತಃ ।**
**ಕಾರ್ಯಕಾರಣತಾಭಾವಾವಾದ್ಯತೋಽಚಿಂತ್ಯಾಃ ಸದೈವ ತೇ ॥೫೨॥**

ಆಭಾಸಗಳು ವಾಸ್ತವಿಕ ದ್ರವ್ಯಗಳಲ್ಲವಾದ್ದರಿಂದ (ಮನೆಯಿಂದ ಜನರು ಹೊರಟು ಹೋಗುವಂತೆ) ವಿಜ್ಞಾನವು ಸ್ಪಂದಿಸದಿದ್ದಾಗ ಅದನ್ನು ಬಿಟ್ಟು ಹೊರಗೆ ಹೋಗಲೂ ಇಲ್ಲ. **ಕಾರ್ಯಕಾರಣ ತಾಭಾವಾತ್** = ಜನ್ಯ ಜನಕತ್ವವು

ಅಸಂಭವವಾದ್ದರಿಂದ, **ತೇ** = ಆಭಾಸಗಳು, **ಸದೈವ** = ಯಾವಾಗಲೂ, **ಅಚಿಂತ್ಯಾಃ** = ಊಹೆಗೆ ನಿಲುಕತಕ್ಕವುಗಳಲ್ಲ.

ಜಗತ್ತಿನ ಸೃಷ್ಟಿಸ್ಥಿತಿಲಯಗಳು ನಮ್ಮ ಚಿಂತನಕ್ಕೆ ನಿಲುಕತಕ್ಕವುಗಳಲ್ಲ. ಪೃಥ್ವೀ ಜಲ – ಮುಂತಾದವುಗಳಿಗೆ ಪರಮಾಣುಗಳು ಉಪಾದಾನ ಕಾರಣಗಳೆಂದೂ ಈಶ್ವರನು ಕರ್ತನೆಂದೂ ದ್ವೈತಿಗಳಾದ ತಾರ್ಕಿಕರು ಹೇಳುತ್ತಾರೆ. ವೇದಾಂತವು ಆ ಪ್ರಕ್ರಿಯೆಯನ್ನು ಒಪ್ಪುವುದಿಲ್ಲ. ಅದ್ವಿತೀಯವಾದ ಪರಬ್ರಹ್ಮ ಒಂದೇ ಇರುವಾಗ ಪರಮಾಣುಗಳು ಎಲ್ಲಿಂದ ಬರುತ್ತವೆ? ಪರಬ್ರಹ್ಮದಲ್ಲಿ ಕರ್ತೃತ್ವವೂ ಇಲ್ಲ. ಮಾಯಾ ವಿಶಿಷ್ಟವಾದ ಈಶ್ವರನು ಕರ್ತೃವೆನ್ನುವುದು ಔಪಚಾರಿಕ. ಸಾಧನ ಮಾರ್ಗದಲ್ಲಿರ ತಕ್ಕವರಿಗಾಗಿ ಹೇಳಿದ ನುಡಿ.

ಈ ಪ್ರಕರಣದಲ್ಲಿ ದ್ರವ್ಯವೆಂದರೆ ವಸ್ತುಭೂತವಾಗಿ ಇರುವ ಪದಾರ್ಥ. ಅದು ಪರಬ್ರಹ್ಮ ಒಂದೇ. ಉಳಿದ ಚಿತ್ತದೃಶ್ಯಗಳಾದ ಬಾಹ್ಯವಸ್ತುಗಳೂ, ಜೀವವೂ, ಚಿತ್ತವೂ ಸಹ ಧರ್ಮಗಳು–ಎಂದರೆ ಆಭಾಸವಾಗಿ ತೋರುವ ಮಿಥ್ಯಾ ಪದಾರ್ಥ ಗಳು. ತಾರ್ಕಿಕ ಪ್ರಕ್ರಿಯೆಯಂತೆ ದ್ರವ್ಯವೆಂದರೆ ಸಪ್ತಪದಾರ್ಥಗಳಲ್ಲಿ ಒಂದು. ಅದು ಗುಣಕ್ಕೆ ಆಶ್ರಯವಾಗಿರುತ್ತದೆ. ಸಮವಾಯಸಂಬಂಧದಿಂದ ಇರುವ ಅವಯವ ಅಥವಾ ಅವಯವ ಸಮುದಾಯವೂ ದ್ರವ್ಯವೆನಿಸುತ್ತದೆ. ವೇದಾಂತದ ಪ್ರಕಾರ ಪರಬ್ರಹ್ಮದಲ್ಲಿ ಯಾವ ಗುಣವೂ ಇಲ್ಲ. ಅದು ಯಾವುದಕ್ಕೂ ಅವಯವವೂ ಅಲ್ಲ. ಅವಯವಸಮುದಾಯವೂ ಅಲ್ಲ. ಆದ್ದರಿಂದ ಪರಬ್ರಹ್ಮವು ತಾರ್ಕಿಕ ಪ್ರಕ್ರಿಯೆಯಂತೆ ದ್ರವ್ಯವಾಗುವುದಿಲ್ಲ. ಅವರ ಪ್ರಕ್ರಿಯೆ ಹೇಗಾದರೂ ಇರಲಿ. ಪ್ರಕೃತದಲ್ಲಿ ಪರಮಾರ್ಥವಾಗಿರುವ ಪರಬ್ರಹ್ಮವನ್ನು ದ್ರವ್ಯವೆಂದು ತಿಳಿಯುವುದು ಉತ್ತಮವೆಂದೂ ಶ್ರೀ ಗೌಡಪಾದರಿಗೆ ಸಂಮತವೆಂದೂ ಹೇಳಬಹುದು.

ಹಿಂದೆ ಹೇಳಿದಂತೆ ಕಾರ್ಯಕಾರಣ ಭಾವವಿಲ್ಲವಾದ್ದರಿಂದ ಈ ಧರ್ಮ ಗಳೆಲ್ಲವೂ ಅಚಿಂತ್ಯವೆಂಬುದನ್ನು ಉಪಪಾದಿಸಲಾಗುವುದು.

**ದ್ರವ್ಯಂ ದ್ರವ್ಯಸ್ಯ ಹೇತುಃ ಸ್ಯಾದನ್ಯದನ್ಯಸ್ಯ ಚೈವ ಹಿ ।**
**ದ್ರವ್ಯತ್ವಮನ್ಯಭಾವೋ ವಾ ಧರ್ಮಾಣಾಂ ನೋಪಪದ್ಯತೇ ॥೫೩॥**

**ಅನ್ಯತ್ ದ್ರವ್ಯಂ** = ಇನ್ನೊಂದು ದ್ರವ್ಯವು, **ಅನ್ಯಸ್ಯ ದ್ರವ್ಯಸ್ಯೈವ** = ತನಗಿಂತ ಭಿನ್ನವಾದ ಮತ್ತೊಂದು ದ್ರವ್ಯಕ್ಕೆ ಮಾತ್ರ, **ಹೇತುಃ** = ಕಾರಣವು, **ಸ್ಯಾತ್** = ಆದೀತು, **ಧರ್ಮಾಣಾಂ** = ಆಭಾಸವಾಗಿ ತೋರುವ ಜೀವ, ಚಿತ್ತ – ಮುಂತಾದ ಧರ್ಮಗಳಿಗೆ, **ದ್ರವ್ಯತ್ವಂ** = ದ್ರವ್ಯತ್ವವಾಗಲಿ, **ವಾ** = ಅಥವಾ, **ಅನ್ಯಥಾ ಭಾವಃ** = ಪರಸ್ಪರ ಅನ್ಯತ್ವವಾಗಲಿ, **ನೋಪಪದ್ಯತೇ** = ಉಪಪನ್ನ ವಾಗುವುದಿಲ್ಲ.

ಆಭಾಸಗಳು ಇನ್ನೊಂದರಿಂದ ಹುಟ್ಟಿದ ಕಾರ್ಯಗಳೂ ಅಲ್ಲ. ಅವು ಯಾವುದಕ್ಕೆ ಕಾರಣಗಳೂ ಅಲ್ಲ. ಆದ್ದರಿಂದಲೇ ಅವು ಊಹೆಗೆ ನಿಲುಕದ ಅಚಿಂತ್ಯಮಿಥ್ಯಾ ವಸ್ತುಗಳು.

ಕಾರ್ಯಕಾರಣ ಭಾವವನ್ನು ಹೇಳುವ ಇತರ ದರ್ಶನಕಾರರ ಮತದಂತೆಯೂ ಅದು ಹೊಂದುವುದಿಲ್ಲ. ಹೇಗೆಂದರೆ, ದ್ರವ್ಯವು ಇನ್ನೊಂದು ದ್ರವ್ಯಕ್ಕೆ ಕಾರಣ ವಾಗುತ್ತದೆ. ಉದಾಹರಣೆಗೆ ಪರಮಾಣುಗಳಿಂದ ಪೃಥಿವೀ ಹುಟ್ಟುತ್ತದೆ. ನೂಲಿ ನಿಂದ ವಸ್ತ್ರವಾಗುತ್ತದೆ. ಇಲ್ಲಿ ಕಾರ್ಯಕಾರಣಗಳೆರಡೂ ದ್ರವ್ಯಗಳು. ನಮಗೆ ಪರಬ್ರಹ್ಮವು ದ್ರವ್ಯವಾದರೂ ಆಭಾಸಗಳು ದ್ರವ್ಯಗಳಲ್ಲ. ತಾರ್ಕಿಕರ ಪ್ರಕಾರ ಪರಬ್ರಹ್ಮವು ದ್ರವ್ಯವಲ್ಲ. ಆದ್ದರಿಂದ ಪರಬ್ರಹ್ಮವು ಯಾವುದಕ್ಕೂ ಕಾರಣವಲ್ಲ. ಅಲ್ಲದೆ ತನಗೆ ತಾನೇ ಕಾರಣವೆನ್ನುವುದು ಅಸಂಗತ. **'ಸರ್ವಂ ಖಲ್ವಿದಂ ಬ್ರಹ್ಮ'** ಇತ್ಯಾದಿ ಶ್ರುತಿಯು ಸಮಸ್ತವೂ ಬ್ರಹ್ಮವೇ ಸರಿ, ಇನ್ನೊಂದು ವಸ್ತುವೇ ಇಲ್ಲವೆನ್ನುತ್ತದೆ. ಆದ್ದರಿಂದ ಆಭಾಸಗಳೂ ಪರಬ್ರಹ್ಮಸ್ವರೂಪವೇ ಆಗುವುದರಿಂದ, ತನಗೆ ತಾನೇ ಕಾರಣವಾಗದು. ಆಭಾಸಗಳು ದ್ರವ್ಯಗಳಲ್ಲವಾದ್ದರಿಂದಲೂ, ಅವು ಸನ್ಮಾತ್ರ ಸ್ವರೂಪಗಳಾದ್ದರಿಂದಲೂ ಕಾರ್ಯಗಳೇ ಅಲ್ಲ.

**ಏವಂ ನ ಚಿತ್ತಜಾ ಧರ್ಮಾಶ್ಚಿತ್ತಂ ವಾಪಿ ನ ಧರ್ಮಜಮ್ ।**
**ಏವಂ ಹೇತುಫಲಾಜಾತಿಂ ಪ್ರವಿಶಂತಿ ಮನೀಷಿಣಃ ।।೫೪।।**

ಈ ಕಾರಣಗಳಿಂದ **ಧರ್ಮಾಃ** = ಆಭಾಸಸ್ವರೂಪಗಳಾದ ಧರ್ಮಗಳು, **ಚಿತ್ತಜಾಃ** = ಚಿತ್ತದಿಂದ ಹುಟ್ಟಿದವು, **ನ** = ಅಲ್ಲ, **ಚಿತ್ತಂ ವಾऽಪಿ** = ಚಿತ್ತವೂ ಸಹ, **ಧರ್ಮಜಂ ನ** = ಆಭಾಸಗಳಿಂದ ಜನಿಸಿದ್ದು ಅಲ್ಲ. **ಏವಂ** = ಈ ಪ್ರಕಾರವಾಗಿ, **ಹೇತು ಫಲಾಜಾತಿಂ** = ಹೇತು – ಕಾರಣ, ಫಲ ಕಾರ್ಯ ಇವುಗಳ **ಅಜಾತಿಂ** = ಜನ್ಮಾಭಾವವನ್ನು, **ಮನೀಷಿಣಃ** = ಬ್ರಹ್ಮವಿದರು, **ಪ್ರವಿಶಂತಿ** = ಅಂಗೀಕರಿಸುತ್ತಾರೆ.

ಹೀಗೆ ಕಾರ್ಯಕಾರಣಭಾವವೇ ಘಟಿಸುವುದಿಲ್ಲವಾದ್ದರಿಂದ ಜೀವ, ಶರೀರ, ಚಿತ್ತ ಜಗತ್ತುಗಳು ಮಿಥ್ಯೆಯೆಂದೂ ಜೀವಾದ್ಯಾಭಾಸಗಳೆಲ್ಲವೂ ಆತ್ಮ ಸ್ವರೂಪಗಳೇ ಎಂದು ಸಿದ್ಧವಾಗುತ್ತದೆ. **'ಸರ್ವಂ ಖಲ್ವಿದಂ ಬ್ರಹ್ಮ' 'ಆತ್ಮೈವೇದಂ ಸರ್ವಂ'** ಎಂಬ ಶ್ರುತಿವಚನವೇ ಸಿದ್ಧಾಂತವಾಗಿ ನಿಲ್ಲುವುದೆಂದೇ ತಿಳಿಯಬೇಕು.

**ಯಾವದ್ಧೇತುಫಲಾವೇಶಸ್ತಾವದ್ಧೇತುಫಲೋದ್ಭವಃ ।**
**ಕ್ಷೀಣೇ ಹೇತುಫಲಾವೇಶೇ ನಾಸ್ತಿ ಹೇತುಫಲೋದ್ಭವಃ ।।೫೫।।**

**ಯಾವತ್** = ಎಲ್ಲಿಯವರೆಗೆ ಜನರಿಗೆ, **ಹೇತು ಫಲಾವೇಶಃ** = ಹೇತುವೂ

ಫಲವೂ ಇದೆಯೆಂಬ ಆಗ್ರಹ ಬುದ್ಧಿಯು ಇರುತ್ತದೆಯೋ, **ತಾವತ್** = ಅಲ್ಲಿಯವರೆಗೆ, **ಹೇತುಫಲೋದ್ಭವಃ** = ಹೇತುಫಲಗಳ ಪ್ರಾಪ್ತಿಯು ಅವರಿಗೆ ಇರುತ್ತದೆ. **ಹೇತುಫಲಾವೇಶೇ** = ಹೇತು ಫಲಗಳಿವೆಯೆಂಬ ಆಗ್ರಹಬುದ್ಧಿಯು, **ಕ್ಷೀಣೇ** = ಕ್ಷೀಣವಾಗಿ ಹೋದ ಮೇಲೆ, **ಹೇತು ಫಲೋದ್ಭವಃ** = ಹೇತು ಫಲಗಳ ಉತ್ಪತ್ತಿಯು, **ನಾಸ್ತಿ** = ಇರುವುದಿಲ್ಲ.

ಆದರೆ ಲೋಕವ್ಯವಹಾರದಲ್ಲಿ ಕಾರ್ಯಕಾರಣಭಾವವಿದೆ. ಹೇತು ಫಲಗಳನ್ನು ನಂಬಿಕೊಂಡೇ ಜನರು ವ್ಯವಹರಿಸುತ್ತಾರೆ. ದುಡಿತವು ಹೇತು. ಸಂಬಳದ ಪ್ರಾಪ್ತಿ ಫಲ. ಬಟ್ಟೆ ಒಗೆಯುವುದು ಹೇತು. ಬಟ್ಟೆ ಸ್ವಚ್ಛವಾಗುವುದು ಫಲ. ಊಟವು ಹೇತು. ಹಸಿವು ನೀಗಿ ತೃಪ್ತಿಯಾಗುವುದು ಫಲ. ಹೀಗೆಯೇ ಧರ್ಮಾಧರ್ಮಗಳಿಗೆ ಫಲವಿದೆಯೆಂದು ಧರ್ಮಶಾಸ್ತ್ರವು ಹೇಳುತ್ತದೆ. ಧರ್ಮವು ಹೇತು, ಸುಖವು ಫಲ. ಅಧರ್ಮಕ್ಕೆ ದುಃಖವು ಫಲ. ಜನರು ಹೇತುಫಲಭಾವವನ್ನು ಅಂಗೀಕರಿಸದಿದ್ದರೆ ಲೋಕವ್ಯವಹಾರವೇ ನಿಂತು ಹೋದೀತು–ಎಂದು ಯಾರಾದರೂ ಆಕ್ಷೇಪಿಸಬಹುದು. ನಿಜ; ಇದೆಲ್ಲವೂ ಅಜ್ಞಾನ ವಿಜೃಂಭಿತ. ಜನರು ಈ ಹೇತು ಫಲಗಳಿವೆಯೆಂದು ಆವೇಶ ಹೊಂದಿದ್ದಾರೆ. ಇಲ್ಲದ್ದನ್ನು ಆರೋಪಿಸಿಕೊಂಡಿದ್ದಾರೆ. ಈ ಆಗ್ರಹಬುದ್ಧಿಯೆಂಬ ಆವೇಶವಿರುವವರೆಗೂ ಹೇತು ಫಲೋದ್ಭವಗಳು ಇದ್ದೇ ಇರುತ್ತವೆ. ಪಾಪದಿಂದ ಕಷ್ಟವೂ ಪುಣ್ಯದಿಂದ ಸುಖವೂ ಬರುತ್ತಲೇ ಇರುವವು. ಈ ಆಗ್ರಹವೆಂಬ ಆವೇಶವು ಭೂತಾವೇಶವಿದ್ದಂತೆ. ಮಂತ್ರ, ಔಷಧಗಳಿಂದ ಭೂತಾವೇಶವಿಳಿದಂತೆ, ಗುರೂಪದೇಶದಿಂದ ಅಜ್ಞಾನವು ತೊಲಗಲಾಗಿ ಯಾವ ಆವೇಶವೂ ಇರುವುದಿಲ್ಲ. ಆಗ ಹೇತುವೂ ಇರುವುದಿಲ್ಲ. ಫಲವೂ ಇರುವುದಿಲ್ಲ. ಸರ್ವವೂ ಬ್ರಹ್ಮಮಯವಾಗಿ ಬಿಡುತ್ತದೆ. **"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ"** (ಮುಂಡಕ. ೩–೧–೩).

**ಯಾವದ್ಧೇತು ಫಲಾವೇಶಃ ಸಂಸಾರಸ್ತಾವದಾಯತಃ ।**
**ಕ್ಷೀಣೇ ಹೇತುಫಲಾವೇಶೇ ಸಂಸಾರಂ ನ ಪ್ರಪದ್ಯತೇ ॥೫೬॥**

ಹೇತು ಫಲಗಳಿವೆಯೆಂಬ ಮೂಢವಿಶ್ವಾಸವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಸಂಸಾರವೂ ವಿಸ್ತರಿಸಿಕೊಂಡು ಇರುತ್ತದೆ. ಈ ಮೂಢವಿಶ್ವಾಸವು ಹೋದೊಡನೆ ಸಂಸಾರ ಕಾರಣವೇ ಇಲ್ಲವಾದ್ದರಿಂದ ಆತನು ಮತ್ತೆ ಸಂಸಾರವನ್ನು ಪಡೆಯುವುದಿಲ್ಲ (ಮುಕ್ತನಾಗುತ್ತಾನೆ).

**ಸಂವೃತ್ಯಾ ಜಾಯತೇ ಸರ್ವಂ ಶಾಶ್ವತಂ ನಾಸ್ತಿ ತೇನ ವೈ ।**
**ಸದ್ಭಾವೇನ ಹ್ಯಜಂ ಸರ್ವಮುಚ್ಛೇದಸ್ತೇನ ನಾಸ್ತಿ ವೈ ॥೫೭॥**

**ಸಂವೃತ್ಯಾ**= ವಿದ್ಯಾಜನ್ಯವಾದ ಲೋಕವ್ಯವಹಾರದಿಂದ, **ಸರ್ವಂ** = ಸಂಸಾರದ ಉತ್ಪತ್ತಿನಾಶ ಮೊದಲಾದದ್ದೆಲ್ಲವೂ, **ಜಾಯತೇ** = ಉತ್ಪನ್ನವಾಗುತ್ತದೆ. **ತೇನ** = ಆದ್ದರಿಂದ ಅವಿದ್ಯಾವಿಷಯದಲ್ಲಿ, **ಶಾಶ್ವತಂ** = ಶಾಶ್ವತವಾದದ್ದು ಯಾವುದೂ ಇಲ್ಲ. **ಸದ್ಭಾವೇನ** = ಪರಮಾರ್ಥ ದೃಷ್ಟಿಯಿಂದಲಾದರೋ, **ಸರ್ವಂ** = ಸರ್ವವೂ, **ಅಜಂ** = ಜನ್ಮರಹಿತವಾದ ಬ್ರಹ್ಮವೇ ಆಗಿದೆ. **ತೇನ** = ಆದ್ದರಿಂದ ಯಾವುದಕ್ಕೂ ಜನ್ಮವೇ ಇಲ್ಲವಾದ್ದರಿಂದ, **ಉಚ್ಛೇದಃ** = ನಾಶ ವೆಂಬುದೂ, **ನಾಸ್ತಿ ವೈ** = ಇಲ್ಲವಷ್ಟೆ.

ಸರ್ವವೂ ಬ್ರಹ್ಮವೇ ಆದಾಗ ಹೇತುಫಲಗಳಿಗಾಗಲಿ, ಸಂಸಾರಕ್ಕಾಗಲಿ ಉತ್ಪತ್ತಿ ಹೇಗಾಗುತ್ತದೆ? ಎಂಬ ಪ್ರಶ್ನೆಗೆ ಇದು ಉತ್ತರ. ಅವಿದ್ಯೆ ಎಂಬುದೊಂದು ಇದ್ದೇ ಇದೆಯಷ್ಟೆ. ಅದರಿಂದ ಹೇತು ಫಲಾತ್ಮಕವಾದ ಸಂಸಾರಕ್ಕೆ ಯಾವ ಕೊರತೆಯೂ ಇಲ್ಲ. ಸಂವೃತಿ ಎಂದರೆ ಸತ್ಯವನ್ನು ಮರೆಮಾಚುವ ಅವಿದ್ಯೆ. ಅದೇ ಹೇತು ಫಲಾತ್ಮಕವಾದ ಸಂಸಾರಕ್ಕೆ ಮೂಲ. ಹೇತುಫಲಗಳ ಉತ್ಪತ್ತಿ ನಾಶ ಗಳೆರಡೂ ಲೋಕದಲ್ಲಿ ಅವಿದ್ಯಾವಿಜೃಂಭಣವಿರುವುದರಿಂದ ಆವಶ್ಯಕವಾದವು. ಸಂಸಾರವು ಲೋಕ ವ್ಯವಹಾರದಲ್ಲಿ ದೀರ್ಘವಾಗಿರುತ್ತದೆ. ಧರ್ಮಾಧರ್ಮಗಳ ವ್ಯವಸ್ಥೆಯೂ ಆವಶ್ಯಕ. ಪಾಪಪುಣ್ಯಗಳೂ ಇವೆ. ಅವುಗಳ ಫಲದಾಗಿ ಸುಖ ದುಃಖಗಳೂ ಇವೆ. ಇದನ್ನೇ ವ್ಯಾವಹಾರಿಕ ಸತ್ಯವೆನ್ನುತ್ತಾರೆ. ಅವಿದ್ಯೆ ಇರುವವರೆಗೆ ದ್ವೈತಪೂರ್ವಕವಾದ ಪ್ರವೃತ್ತಿ ನಿವೃತ್ತಿಗಳು ಇರುತ್ತವೆ.

**ಧರ್ಮಾಯ ಇತಿ ಜಾಯಂತೇ ಜಾಯಂತೇ ತೇ ನ ತತ್ತ್ವತಃ ।**
**ಜನ್ಮ ಮಾಯೋಪಮಂ ತೇಷಾಂ ಸಾ ಚ ಮಾಯಾ ನ ವಿದ್ಯತೇ ॥೫೮॥**

**ಇತಿ** = ಈ ಪ್ರಕಾರವಾದ ಸಂವೃತಿಯಿಂದ, **ಯೇ** = ಯಾವ, **ಧರ್ಮಾಃ** = ಜೀವಾತ್ಮಗಳೂ ಬಾಹ್ಯಧರ್ಮಗಳೂ, **ಜಾಯಂತೇ** = ಹುಟ್ಟುತ್ತವೆಯೆಂದು ಕಲ್ಪಿತವಾಗಿದೆಯೋ, **ತೇ** = ಅವು, **ತತ್ತ್ವತಃ** = ಪರಮಾರ್ಥವಾಗಿ, **ನ ಜಾಯಂತೇ** = ಹುಟ್ಟುವುದಿಲ್ಲ. (ಸಂವೃತಿಯಿಂದ ಹುಟ್ಟುತ್ತವೆ) **ತೇಷಾಂ** = ಆಭಾಸಗಳಾದ ಆ ಧರ್ಮಗಳ **ಜನ್ಮ** = ಜನ್ಮವು, **ಮಾಯೋಪಮಂ** = ಮಾಯೆಗೆ ಸದೃಶವಾದದ್ದು ಮಾಯಿಕವಾದದ್ದು. **ಸಾ ಚ ಮಾಯಾ** = ಆ ಮಾಯೆ ಯೆಂಬುದು, **ನ ವಿದ್ಯತೇ** = ಇಲ್ಲವೇ ಇಲ್ಲ.

ವ್ಯವಹಾರವೆಲ್ಲವೂ ಅವಿದ್ಯೆಯಿಂದ ಆದದ್ದು – ಎಂಬುದನ್ನೇ ಇಲ್ಲಿ ಸ್ಪಷ್ಟ ಪಡಿಸಿದ್ದಾರೆ. ಇದೆಲ್ಲವೂ ಮಾಯಾ ಪ್ರಪಂಚವೆಂದು ಲೋಕದಲ್ಲಿ ಹೇಳುವು ದುಂಟು. ಮಾಯೆಯೆಂಬ ಒಂದು ನಿಜವಾದ ವಸ್ತುವಿಲ್ಲ. ಶಶಶೃಂಗ,

ಗಗನಕುಸುಮ ಮುಂತಾದವು ಇಲ್ಲದ ವಸ್ತುವಿಗಾಗಿ ಕಲ್ಪಿಸಿಕೊಂಡ ಹೆಸರು. ಹಾಗೆ ಇಲ್ಲದ ವಸ್ತುವನ್ನು, ಮಾಯೆಯೆಂದು ವ್ಯವಹರಿಸುತ್ತೇವೆ. ಇದು ಮಾಯಾ ಪ್ರಪಂಚವೆಂದರೆ ಇಲ್ಲದ ಜಗತ್ತು, ಕಲ್ಪಿಸಿಕೊಂಡ ಜಗತ್ತು ಎಂದರ್ಥ. ಮಾಯೆ ಯೆಂದರೆ ಇಲ್ಲದಿರುವುದು.

**ಯಥಾ ಮಾಯಾಮಯಾದ್ಬೀಜಾತ್ ಜಾಯತೇ ತನ್ಮಯೋಂಕುರಃ ।**
**ನಾಸೌ ನಿತ್ಯೋ ನ ಚೋಚ್ಛೇದೀ ತದ್ವದ್ಧರ್ಮೇಷು ಯೋಜನಾ ॥೫೯॥**

**ಯಥಾ** = ಹೇಗೆ, **ಮಾಯಾಮಯಾತ್** = ಮಾಯಾಸ್ವರೂಪವಾದ, **ಬೀಜಾತ್** = ಮಾವಿನ ಒರಟೆ ಮುಂತಾದ ಬೀಜದಿಂದ, **ತನ್ಮಯಃ** = ಮಾಯಾಮಯವಾದ, **ಅಂಕುರಃ** = ಮೊಳಕೆಯು ಹುಟ್ಟುವುದೋ, **ಅಸೌ** = ಆ ಮೊಳಕೆಯು, **ನ ನಿತ್ಯಃ** = ಶಾಶ್ವತವೂ ಅಲ್ಲ, **ನ ಚ ಉಚ್ಛೇದೀ** = ವಿನಾಶಿಯೂ ಅಲ್ಲ ಎಂಬುದು ಹೇಗೋ, **ತದ್ವತ್** = ಹಾಗೆಯೇ, **ಧರ್ಮೇಷು** = ಸಕಲ ಆಭಾಸವಸ್ತುಗಳಲ್ಲಿಯೂ, **ಯೋಜನಾ** = ಯುಕ್ತಿಯು ಇರುತ್ತದೆ (ಯೋಜಿಸಿ ಕೊಳ್ಳಬೇಕು).

ಮಾಯಾಮಯವೆಂದರೆ ಪ್ರತೀತಿ ಮಾತ್ರ ಶರೀರವುಳ್ಳದ್ದು ಎಂದರ್ಥ. ಸರ್ವ ಧರ್ಮಗಳ ಜನ್ಮನಾಶಗಳೂ ಮಾಯಾಮಯವಾದವುಗಳು ಎಂಬುದಕ್ಕೆ ಇದೊಂದು ಉದಾಹರಣೆ ಮಾತ್ರ. ಬೀಜದಿಂದ ಅಂಕುರವು ಹುಟ್ಟುತ್ತದೆ ಯೆಂಬುದು ಲೋಕವ್ಯವಹಾರದಲ್ಲಿದೆ. ಪರಮಾರ್ಥ ದೃಷ್ಟಿಯಲ್ಲಿ ಬೀಜವು ಪ್ರತೀತಿ ಮಾತ್ರ ಗೋಚರವೇ ಹೊರತು ವಸ್ತುತಃ ಇಲ್ಲ. ಅದರಿಂದ ಮೊಳಕೆಯು ಹುಟ್ಟಿತೆಂಬುದೂ ಪ್ರತೀತಿ ಮಾತ್ರವೇ. ಈ ಮೊಳಕೆಯೂ ನಿತ್ಯವೂ ಅಲ್ಲ, ವಿನಾಶಿಯೂ ಅಲ್ಲ. ವಸ್ತುತಃ ಇಲ್ಲದಿರುವ ಆಭಾಸಕ್ಕೆ ವಾಸ್ತವಿಕವಾದ ಜನ್ಮವಿನಾಶ ಗಳು ಇರುವುದೇ ಇಲ್ಲ. ವಸ್ತುತಃ ಇಲ್ಲದ ಶಶಶೃಂಗವೆಂಬುದು ವಾಸ್ತವಿಕವಾಗಿ ಹುಟ್ಟುವುದೂ ಇಲ್ಲ, ನಾಶವಾಗುವುದೂ ಇಲ್ಲ. ಈ ಪ್ರಕಾರವಾಗಿ ಸಮಸ್ತ ಧರ್ಮ ಗಳಿಗೂ ಎಂದರೆ – ಆಭಾಸಗಳಿಗೂ ವಾಸ್ತವಿಕವಾದ ಜನ್ಮವೂ ಇಲ್ಲ, ನಾಶವೂ ಇಲ್ಲ, ಅವು ಕಾಣಿಸಿದಾಗ ಜನ್ಮವಾಯಿತೆಂದೂ ಕಾಣದಾಗ ನಾಶವಾಯಿತೆಂದು ಲೋಕವ್ಯವಹಾರವಿದೆಯೇ ಹೊರತು, ವಸ್ತುತಃ ಏನೂ ಆಗಿರುವುದಿಲ್ಲವೆಂದು ತಿಳಿಯಬೇಕು.

**ನಾಜೇಷು ಸರ್ವಧರ್ಮೇಷು ಶಾಶ್ವತಾಶಾಶ್ವತಾಭಿಧಾ ।**
**ಯತ್ರ ವರ್ಣಾ ನ ವರ್ತಂತೇ ವಿವೇಕಸ್ತತ್ರ ನೋಚ್ಯತೇ ॥೬೦॥**

**ಅಜೇಷು** = ಜನ್ಮರಹಿತವಾದ ಆತ್ಮ ಸ್ವರೂಪಗಳೇ ಆದ, **ಸರ್ವಧರ್ಮೇಷು** = ಸಕಲ ಆಭಾಸಗಳ ವಿಷಯದಲ್ಲಿ, **ಶಾಶ್ವತಾಶಾಶ್ವತಾಭಿಧಾ** = ಇದು

ಶಾಶ್ವತ– ಇದು ಅಶಾಶ್ವತ ಎಂಬ ಹೇಳಿಕೆಯೇ, **ನ** = ಯುಕ್ತವಲ್ಲ, **ಯತ್ರ** = ಯಾವುದರ ವಿಷಯದಲ್ಲಿ, **ವರ್ಣಾಃ** = ವರ್ಣಾತ್ಮಕ ಶಬ್ದಗಳು, **ನ ವರ್ತಂತೇ** = ಸಮರ್ಥಗಳಾಗಿಲ್ಲವೋ, **ತತ್ರ** = ಆ ವಿಷಯದಲ್ಲಿ, **ವಿವೇಕಃ** = ನಿತ್ಯ ಅನಿತ್ಯವೆಂಬ ವಿವೇಚನೆಯು, **ನೋಚ್ಯತೇ** = ಹೇಳಲ್ಪಡುವುದಿಲ್ಲ.

ಹಿಂದಿನ ಕಾರಿಕೆಯಲ್ಲಿ ಆಭಾಸಗಳು ಮಾಯೋಪಮಗಳಾದ್ದರಿಂದ, ಅವು ನಿತ್ಯಗಳೆಂದಾಗಲಿ ವಿನಾಶಿಗಳೆಂದಾಗಲಿ ಹೇಳುವುದು ಶಕ್ಯವಲ್ಲವೆಂದು ಹೇಳಲಾಗಿತ್ತು. ಈಗಲಾದರೋ ಆಭಾಸಗಳು ಆತ್ಮಸ್ವರೂಪಗಳೇ ಆದ್ದರಿಂದ ಅವುಗಳ ನಿತ್ಯಾನಿತ್ಯ ವಿವೇಚನೆಯನ್ನು ಮಾಡಲು ಶಬ್ದಗಳು ಸಮರ್ಥವಾಗಿಲ್ಲ ಎಂದು ಹೇಳಿದೆ. ಆತ್ಮವು ಸರ್ವವಿಶೇಷರಹಿತವಾದ್ದರಿಂದ ಶಬ್ದಗೋಚರವಲ್ಲ. ಮನೋಗೋಚರವೂ ಅಲ್ಲ. **"ಯತೋವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ"** (ತೈತ್ತಿ.೨–೯) ಎಂದು ಶ್ರುತಿ ಇದೆ.

ಜಗತ್ತು ಮುಂತಾದ ಆಭಾಸವೆಲ್ಲವೂ ನಿತ್ಯವೆ? ಅಥವಾ ಅನಿತ್ಯವೆ? ಎಂದು ನಿರ್ಣಯಿಸುವುದು ಶಕ್ಯವಲ್ಲ. "ಅದು ತಿಳಿಯದು" ಎಂದು ಹೇಳಿ ಕೈ ಬಿಡುವುದು ಉತ್ತಮವೆಂದು ತಾತ್ಪರ್ಯ.

**ಯಥಾ ಸ್ವಪ್ನೇ ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ ।**
**ತಥಾ ಜಾಗ್ರದ್ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ ॥೬೧॥**

ಸ್ವಪ್ನದಲ್ಲಿ ಮನಸ್ಸು ದ್ವೈತರೂಪವಾಗಿ ಹೇಗೆ ಸ್ಪಂದಿಸುತ್ತ ಕಾಣಿಸಿಕೊಳ್ಳುವುದೋ ಹಾಗೆಯೇ ಜಾಗ್ರತ್ತಿನಲ್ಲಿಯೂ ಮನಸ್ಸು ದ್ವೈತರೂಪವಾಗಿ ಮಾಯೆಯಿಂದ ಸ್ಪಂದಿಸುತ್ತ ಕಾಣಿಸಿಕೊಳ್ಳುತ್ತದೆ.

**ಅದ್ವಯಂ ಚ ದ್ವಯಾಭಾಸಂ ಚಿತ್ತಂ ಸ್ವಪ್ನೇ ನ ಸಂಶಯಃ ।**
**ಅದ್ವಯಂ ಚ ದ್ವಯಾಭಾಸಂ ತಥಾ ಜಾಗ್ರನ್ನ ಸಂಶಯಃ ॥೬೨॥**

ಸ್ವಪ್ನದಲ್ಲಿ ಚಿತ್ತವು ಪರಮಾರ್ಥವಾದ ಆತ್ಮ ಸ್ವರೂಪವಾದ್ದರಿಂದ ಅದ್ವಯವೂ ಮತ್ತು ದೃಶ್ಯವಾಗಿ ದ್ವೈತದಂತೆ ತೋರತಕ್ಕದ್ದೂ ಆಗಿದೆ. ಇದರಲ್ಲಿ ಸಂದೇಹವಿಲ್ಲ. ಹಾಗೆಯೇ ಜಾಗ್ರತ್ತಿನಲ್ಲಿ ಚಿತ್ತವು ಅದ್ವಿತೀಯಾತ್ಮಸ್ವರೂಪವಾಗಿದ್ದು ದ್ವೈತ ರೂಪವಾದ ಜಗತ್ತೂ ಆಗಿದೆ. ಇದರಲ್ಲಿ ಸಂದೇಹವಿಲ್ಲ.

(ಮೇಲ್ಕಂಡ ಎರಡು ಶ್ಲೋಕಗಳು ಅದ್ವೈತ ಪ್ರಕರಣದಲ್ಲಿ ಬಂದಿವೆ (ಕಾರಿಕೆ ೨೯–೩೦).

ಲೋಕ ವ್ಯವಹಾರದಲ್ಲಿ ಇದು ನಿತ್ಯ, ಇದು ಅನಿತ್ಯ, ಇದು ಕಪ್ಪು, ಇದು ಬಿಳಪು – ಇತ್ಯಾದಿಯಾಗಿ ಹೇಳುವುದೂ ತಿಳಿಯುವುದೂ ಇದೆ. ಪರಮಾರ್ಥ

ವಾದ ಆತ್ಮದ ವಿಷಯದಲ್ಲಿಯೂ ಶಾಸ್ತ್ರಗ್ರಂಥಗಳೂ ಇವೆ. ಪ್ರವಚನಗಳೂ ನಡೆಯುತ್ತವೆ. ಹೀಗಿರುವಾಗ ಇದೆಲ್ಲವೂ ವಾಕ್ಕಿಗೂ ಮನಸ್ಸಿಗೂ ನಿಲುಕುವುದಿಲ್ಲ ಎಂದು ಹೇಳುವುದು ಹೇಗೆ? ಎಂಬ ಪ್ರಶ್ನೆಗೆ ಇದು ಉತ್ತರ. ಆಭಾಸಗಳು ಆತ್ಮ ಸ್ವರೂಪಗಳೇ ಆದ್ದರಿಂದ ವರ್ಣಿಸುವುದು ಶಕ್ಯವಾದ್ದಲ್ಲ. ಲೋಕದಲ್ಲಿ ನಡೆಯುವ ವ್ಯವಹಾರವೆಲ್ಲವೂ ಸ್ವಪ್ನದಲ್ಲಿ ಕಾಣುವ ದ್ವೈತದಂತೆ ನಡೆಯುತ್ತದೆ. ಗ್ರಂಥರಚನೆ, ಪ್ರವಚನಾದಿಗಳೂ ಸ್ವಪ್ನದೃಶ್ಯಗಳಂತೆಯೇ ಆಭಾಸಗಳು. ಇದೆಲ್ಲವೂ ಕೇವಲ ಚಿತ್ತ ಸ್ಪಂದಿತಗಳು.

ಅದ್ವೈತ ಪ್ರಕರಣದಲ್ಲಿ ಸದ್ವಸ್ತುವಿಗೆ ಮಾಯೆಯಿಂದ ಜನ್ಮವು ಸಂಭವಿಸುತ್ತದೆ ಎಂದು ಪ್ರತಿಪಾದಿಸುವುದಕ್ಕಾಗಿ ಈ ಎರಡು ಶ್ಲೋಕಗಳು ಬಂದಿದ್ದವು. ಮಾಯಾ ಸೃಷ್ಟಿಯಾದರೂ ವಾಕ್ಕಿಗೂ ಮನಸ್ಸಿಗೂ ಗೋಚರವಾಗಬಹುದೆಂಬುದನ್ನು ಉಪಪಾದಿಸುವುದಕ್ಕಾಗಿ ಈ ಶ್ಲೋಕಗಳು ಇಲ್ಲಿ ಬಂದಿವೆ. ಇವು ಆಭಾಸರೂಪ ವಾಗಿಯೇ ಗೋಚರಿಸುತ್ತವೆ. ಮುಂದಿನ ನಾಲ್ಕು ಕಾರಿಕೆಗಳಲ್ಲಿ, ಸಮಸ್ತ ದ್ವೈತ ಪ್ರಪಂಚವೂ ಚೈತನ್ಯಕ್ಕೆ ವ್ಯತಿರಿಕ್ತವಾದದ್ದಲ್ಲ ಎಂಬುದನ್ನು ಪ್ರತಿಪಾದಿಸಲಾಗುವುದು.

**ಸ್ವಪ್ನದೃಕ್ ಪ್ರಚರನ್ ಸ್ವಪ್ನೇ ದಿಕ್ಷು ವೈ ದಶಸು ಸ್ಥಿತಾನ್ ।**
**ಅಂಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ ॥೬೩॥**

**ಸ್ವಪ್ನದೃಕ್‌ಚಿತ್ತದೃಶ್ಯಾಸ್ತೇ ನ ವಿದ್ಯಂತೇ ತತಃ ಪೃಥಕ್ ।**
**ತಥಾ ತದ್ದೃಶ್ಯಮೇವೇದಂ ಸ್ವಪ್ನದೃಕ್ ಚಿತ್ತಮಿಷ್ಯತೇ ॥೬೪॥**

**ಸ್ವಪ್ನದೃಕ್** = ಕನಸು ಕಾಣತಕ್ಕವನು, **ಸ್ವಪ್ನೇ** = ಸ್ವಪ್ನದಲ್ಲಿಯೇ, **ಪ್ರಚರನ್** = ಅತ್ತಿತ್ತ ತಿರುಗುತ್ತ, **ದಶಸು ದಿಕ್ಷು** = ಹತ್ತು ದಿಕ್ಕುಗಳಲ್ಲಿಯೂ, **ಸ್ಥಿತಾನ್** = ಇರತಕ್ಕ **ಅಂಡಜಾನ್** = ಅಂಡಜಗಳಾದ, **ವಾऽಪಿ** = ಅಥವಾ, **ಸ್ವೇದಜಾನ್** = ಸ್ವೇದದಿಂದ ಹುಟ್ಟುವ, **ಜೀವಾನ್** = ಹಕ್ಕಿಗಳೋ ಅಥವಾ ಕ್ರಿಮಿಕೀಟಗಳೋ ಆದ, **ಯಾನ್ ಜೀವಾನ್** = ಯಾವ ಜೀವಿಗಳನ್ನು, **ಸದಾ** = ಯಾವಾಗಲೂ, **ಪಶ್ಯತಿ** = ನೋಡುವನೋ, **ತೇ** = ಆ ಜೀವಿಗಳು, **ಸ್ವಪ್ನದೃಕ್ ಚಿತ್ತದೃಶ್ಯಾಃ** = ಕನಸುಕಾಣತಕ್ಕವನ ಚಿತ್ತಕ್ಕೆ ಮಾತ್ರ ಗೋಚರಿಸ ತಕ್ಕವುಗಳು. **ತತಃ** = ಆ ಚಿತ್ತಕ್ಕಿಂತ, **ಪೃಥಕ್** = ಹೊರಗಡೆ, **ನ ವಿದ್ಯಂತೇ** = ಇರುವುದಿಲ್ಲ, **ತಥಾ** = ಹಾಗೆಯೇ, **ಇದಂ** = ಈ **ಸ್ವಪ್ನ ದೃಕ್ ಚಿತ್ತಂ** = ಕನಸು ಕಾಣತಕ್ಕವನ ಚಿತ್ತವೂ, **ತದ್ದೃಶ್ಯಮೇವ** = ಕನಸು ಕಾಣತಕ್ಕವನಿಗೆ ಮಾತ್ರ ಗೋಚರವಾದದ್ದು ಅವನಿಗಿಂತ ಬೇರೆಯಾಗಿ ಚಿತ್ತವೆಂಬುದಿಲ್ಲ ಎಂಬುದು. **ಇಷ್ಯತೇ** = ಸಂಮತವಾಗಿದೆ.

ಕನಸಿನಲ್ಲಿ ಮನುಷ್ಯನು ಹಾಸಿಗೆಯ ಮೇಲೆ ಮಲಗಿದ್ದರೂ ಎಲ್ಲೆಲ್ಲಿಗೋ ಹೋದಂತೆ ಅನುಭವವಾಗುತ್ತದೆ. ಸುತ್ತಲೂ ಇರುವ ಅಷ್ಟದಿಕ್ಕುಗಳು, ಮೇಲೆ ಆಕಾಶದ ಕಡೆಗೆ, ಕೆಳಗೆ ಪಾತಾಳದ ಕಡೆಗೆ ಇರುವ ಎರಡು ದಿಕ್ಕುಗಳು ಸೇರಿದರೆ ಹತ್ತು ದಿಕ್ಕುಗಳಾಗುತ್ತದೆ. ಕನಸ್ಸು ಕಾಣತಕ್ಕವನು ಎಲ್ಲದಿಕ್ಕುಗಳಿಗೂ ಕನಸಿನಲ್ಲಿಯೇ ಹೋಗುತ್ತಾನೆ. ಅಲ್ಲಿ ನಾನಾ ದೃಶ್ಯಗಳು ಕಾಣಬಹುದು. ಹಕ್ಕಿ, ಹುಳು ಮುಂತಾದವೂ ಕಾಣಬಹುದು. ಹಾಸಿಗೆಯಲ್ಲಿ ಮಲಗಿದವನು ನಾನಾ ದಿಕ್ಕುಗಳಿಗೆ ಹೋಗುವುದಾಗಲಿ, ಹಲವಾರು ಪ್ರಾಣಿಗಳನ್ನು ನೋಡುವುದಾಗಲಿ ವಾಸ್ತವವಲ್ಲ. ಅದೆಲ್ಲವೂ ಮಿಥ್ಯೆ ಎಂಬುದು ಸ್ಪಷ್ಟವಾಗಿದೆ. ಆವೆಲ್ಲವೂ ಚಿತ್ತದ ವಿಕಾರಗಳು. ಚಿತ್ತ ಸ್ವರೂಪವೇ ಹೊರತು ಇನ್ನೊಂದಲ್ಲ. ಚಿತ್ತದೃಶ್ಯವು ಚಿತ್ತಸ್ವರೂಪವೇ ಆದಮೇಲೆ ಚಿತ್ತವು ಯಾವುದು? ಚಿತ್ತದ ದೃಕ್ ಯಾರೋ ತದ್ರೂಪವೇ ಎಂದು ನಿಶ್ಚಯಿಸ ಬೇಕು. ಚಿತ್ತದ ದೃಕ್ ಎಂದರೆ ಪ್ರತ್ಯಗಾತ್ಮ ಆದ್ದರಿಂದ ಚಿತ್ತವೂ ಮಿಥ್ಯೆ. ಆತನೇ ಪ್ರಕೃತದಲ್ಲಿ ಕನಸು ಕಾಣತಕ್ಕವನು. ಅವನೇ ಪ್ರತ್ಯಗಾತ್ಮ ಎಂದು ತಾತ್ಪರ್ಯ.

**ಚರನ್ ಜಾಗರಿತೇ ಜಾಗ್ರದ್ದಿಕ್ಷು ವೈ ದಶಸು ಸ್ಥಿತಾನ್ ।**
**ಅಂಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ ॥೬೫॥**

**ಜಾಗ್ರಚ್ಚಿತ್ತೇಕ್ಷಣೀಯಾಸ್ತೇ ನ ವಿದ್ಯಂತೇ ತತಃ ಪೃಥಕ್ ।**
**ತಥಾ ತದ್ದೃಶ್ಯಮೇವೇದಂ ಜಾಗ್ರತಶ್ಚಿತ್ತಮಿಷ್ಯತೇ ॥೬೬॥**

ಹಾಗೆಯೇ ಜಾಗ್ರತ್ತಿನಲ್ಲಿರತಕ್ಕವನು ಜಾಗ್ರತ್ತಿನಲ್ಲಿ ಅತ್ತಿತ್ತ ತಿರುಗಾಡುತ್ತಾ ಹತ್ತುದಿಕ್ಕುಗಳಲ್ಲಿಯೂ ಇರುವ ಅಂಡಜ, ಸ್ವೇದಜ ಮುಂತಾದ ಯಾವ ಜೀವಿ ಗಳನ್ನು ಸದಾ ನೋಡುತ್ತಿರುವನೋ ಆ ಜೀವಿಗಳು ಎಚ್ಚರದಲ್ಲಿರುವವನ ಚಿತ್ತಕ್ಕೆ ಮಾತ್ರ ಗೋಚರಿಸತಕ್ಕವುಗಳು. ಚಿತ್ತಕ್ಕಿಂತ ಹೊರಗಡೆ ಅವು ವಾಸ್ತವವಾಗಿ ಇಲ್ಲ. ಹಾಗೆಯೇ ಎಚ್ಚರದಲ್ಲಿರುವವನ ಚಿತ್ತವೂ ಅದನ್ನು ನೋಡುವ ದೃಕ್ ಆದವನಿಗಿಂತ ಬೇರೆ ಇಲ್ಲ.

ಜಾಗ್ರದವಸ್ಥೆಯೂ ಸಹ ಸ್ವಪ್ನಾವಸ್ಥೆಗಿಂತ ಬೇರೆಯಾದ್ದಲ್ಲ. ಸ್ವಪ್ನದಲ್ಲಿ ಕಾಣುವ ವಸ್ತುಗಳು ಹೇಗೆ ಚಿತ್ತದ ವಿಕಾರಗಳೋ ಹಾಗೆಯೇ ಜಾಗ್ರತ್ತಿನಲ್ಲಿ ಕಾಣ ತಕ್ಕವೂ ಸಹ ಚಿತ್ತದ ವಿಕಾರಗಳು. ಚಿತ್ತವು ದೃಕ್ ಸ್ವರೂಪಕ್ಕಿಂತ ಬೇರೆಯಾದ್ದಲ್ಲ. ಆದ್ದರಿಂದ ಪ್ರತ್ಯಗಾತ್ಮನೇ ಸರ್ವವೂ ಎಂದು ತಿಳಿಯಬೇಕು. ಪರಮಾರ್ಥದಲ್ಲಿ ಆತ್ಮನಿಗಿಂತ ಬೇರೆಯಾದ ವಸ್ತುವೇ ಇಲ್ಲ. ಕನಸು ಅಲ್ಪಕಾಲವಿರುತ್ತದೆ. ಜಾಗ್ರತ್ತಿಗೆ ಬಂದೊಡನೆ ಕನಸಿನಲ್ಲಿ ಕಂಡದ್ದೆಲ್ಲವೂ ಮಿಥ್ಯೆ ಎಂದು ಗೊತ್ತಾಗುತ್ತದೆ. ಆದರೆ ಜಾಗ್ರತ್ತು ದೀರ್ಘ ಕಾಲ ಇರತಕ್ಕದ್ದು. ಆಗ ಪ್ರತಿದಿನ ಹಿಂದಿನದೇ ಮುಂದು

ವರಿಯುವುದು ಕಾಣುತ್ತದೆ. ಇಷ್ಟೇ ಭೇದ. ಆತ್ಮಜ್ಞಾನವಾದಾಗ ಜಾಗ್ರತ್ತು ಸಹ ಮಿಥ್ಯೆಯೆಂಬುದು ತಿಳಿಯುತ್ತದೆ.

**ಉಭೇ ಹ್ಯನ್ಯೋನ್ಯದೃಶ್ಯೇ ತೇ ಕಿಂ ತದಸ್ತೀತಿ ನೋಚ್ಯತೇ ।**
**ಲಕ್ಷಣಾಶೂನ್ಯಮುಭಯಂ ತನ್ಮತೇನೈವ ಗೃಹ್ಯತೇ ॥೬೭॥**

**ತೇ ಉಭೇ** = ಚಿತ್ತ ಮತ್ತು ಚೇತ್ಯವಾದ ದೃಶ್ಯವಸ್ತು ಇವೆರಡೂ, ಅನ್ಯೋನ್ಯವಾದ ದೃಶ್ಯಗಳಾಗಿವೆ. **ಕಿಂ ತದಸ್ತೀತಿ** = ಆ ಚಿತ್ತಚೇತ್ಯಗಳೆಂಬ ವಸ್ತುದ್ವಯವು ಇದೆಯೇ ಎಂಬ ಪ್ರಶ್ನೆಗೆ, **ನೋಚ್ಯತೇ** = ವಿವೇಕಿಯಿಂದ ಇದೆಯೆಂದು ಹೇಳಲ್ಪಡುವುದಿಲ್ಲ. ಏಕೆಂದರೆ, **ಉಭಯಂ** = ಅವೆರಡೂ, **ಲಕ್ಷಣಾಶೂನ್ಯಂ** = ಪ್ರಮಾಣ ರಹಿತವಾದವುಗಳು. ಅವೆರಡೂ **ತನ್ಮತೇನೈವ** = ಚಿತ್ತವಿದೆಯೆಂಬ ಗ್ರಹಿಕೆಯಿಂದ ಮಾತ್ರ, **ಗೃಹ್ಯತೇ** = ತಿಳಿಯಲ್ಪಡುತ್ತವೆ.

ಯಾವುದು ಜೀವ ಮತ್ತು ಬಾಹ್ಯದೃಶ್ಯಗಳನ್ನು **ಚೇತಯತೇ** = ಚೈತನ್ಯ ಯುಕ್ತವನ್ನಾಗಿ ಮಾಡುವುದೋ ಅದು ಚಿತ್ತ. ಚಿತ್ತಕ್ಕೆ ಗೋಚರವಾದದ್ದು ಚೇತ್ಯ. ಚೈತನ್ಯಯುಕ್ತವೆಂದರ್ಥ. ಜೀವವನ್ನು ಇಲ್ಲಿ ಚೇತ್ಯವೆಂದು ತಿಳಿಯಬೇಕು. ಚಿತ್ತ ವಿದ್ದರೆ ದೃಶ್ಯವಾದ್ದರ ದರ್ಶನವಾಗುತ್ತದೆ. ದೃಶ್ಯವಸ್ತುವಿದ್ದರೆ ಚಿತ್ತದಿಂದ ದರ್ಶನ ವಾಗುತ್ತದೆ. ಎಂದರೆ ಚಿತ್ತವಿದ್ದರೆ ಚೇತ್ಯವು ಸಿದ್ಧಿಸುತ್ತದೆ. ಚೇತ್ಯವು ಇದ್ದರೆ ಚಿತ್ತವು ಸಿದ್ಧಿಸುತ್ತದೆ. ಘಟಜ್ಞಾನವಿದ್ದರೆ ಘಟದ ಸಿದ್ಧಿ. ಘಟವಿದ್ದರೆ ಘಟಜ್ಞಾನದ ಸಿದ್ಧಿ. ಹೀಗೆ ಇವು ಅನ್ಯೋನ್ಯಾಶ್ರಯ ದೋಷಗ್ರಸ್ತವಾಗುತ್ತವೆ. ಪ್ರಮಾಣವಿಲ್ಲದೆ ವಸ್ತುಸಿದ್ಧಿ ಯಾಗುವುದಿಲ್ಲವಾದ್ದರಿಂದ ಚಿತ್ತವೂ ಇಲ್ಲ, ಚಿತ್ತದೃಶ್ಯವಾದ ಬಾಹ್ಯಧರ್ಮವೂ ಇಲ್ಲ ವೆಂದೂ ನಿಶ್ಚಯಿಸಬೇಕು. ವಿವೇಕಿಗಳನ್ನು ಕೇಳಿದರೆ ಅವೆರಡೂ ಇಲ್ಲವೆಂದೇ ಹೇಳುತ್ತಾರೆ. ಕನಸಿನಲ್ಲಿ ಕಾಣಿಸಿದ ಆನೆ ವಾಸ್ತವವಾಗಿ ಇರುವುದಿಲ್ಲ. ಅದನ್ನು ನೋಡುವ ಚಿತ್ತವೂ ವಾಸ್ತವವಾಗಿ ಇರುವುದಿಲ್ಲ. ಪ್ರಮಾಣ ಶೂನ್ಯವಾದ್ದರಿಂದ ಜಾಗ್ರತ್ತಿನಲ್ಲಿಯೂ ಚಿತ್ತವಾಗಲಿ ಚಿತ್ತದೃಶ್ಯವಾಗಲಿ ಇರುವುದಿಲ್ಲ. ಚಿತ್ತವಿದೆಯೆಂಬ ಸಂಸ್ಕಾರ ಬಲವೂ ಬಾಹ್ಯ ವಸ್ತುವಿದೆಯೆಂಬ ಭ್ರಮೆಯೂ ಯಾರಿಗೆ ಬಲವಾಗಿ ಅಂಟಿಕೊಂಡಿರುತ್ತವೆಯೋ ಅವರಿಗೆ ಮಾತ್ರ ಚಿತ್ತವೂ ಚಿತ್ತ ದೃಶ್ಯಗಳೂ ಇರುತ್ತವೆ. ಆದರೆ ಅದೊಂದು ಭ್ರಮೆ.

**ಯಥಾ ಸ್ವಪ್ನಮಯೋ ಜೀವೋ ಜಾಯತೇ ಮ್ರಿಯತೇಽಪಿ ಚ ।**
**ತಥಾ ಜೀವಾ ಅಮೀ ಸರ್ವೇ ಭವಂತಿ ನ ಭವಂತಿ ಚ ॥೬೮॥**

ಕನಸಿನಲ್ಲಿ ಒಂದು ಜೀವಿಯು ಹೇಗೆ ಹುಟ್ಟುತ್ತದೆಯೋ ಕನಸಿನಲ್ಲಿಯೇ ಸಾಯುತ್ತದೆಯೋ ಹಾಗೆ ಜಾಗ್ರತ್ತಿನಲ್ಲಿ ಕಾಣುವ ಈ ಜೀವಿಗಳು ಹುಟ್ಟುತ್ತವೆ ಮತ್ತು ಸಾಯುತ್ತವೆ.

**ಯಥಾ ಮಾಯಾಮಯೋ ಜೀವೋ ಜಾಯತೇ ಮ್ರಿಯತೇಽಪಿ ಚ ।**
**ತಥಾ ಜೀವಾ ಅಮೀ ಸರ್ವೇ ಭವಂತಿ ನ ಭವಂತಿ ಚ ॥೬೯॥**

ಮಾಯಾವಿಯಿಂದ ನಿರ್ಮಿತವಾದ ಜೀವಿಯು ಹೇಗೆ ಹುಟ್ಟಿ ಸಾಯುವುದೋ ಹಾಗೆ ಜಾಗ್ರತ್ತಿನಲ್ಲಿ ಕಾಣುವ ಎಲ್ಲ ಜೀವಿಗಳು ಹುಟ್ಟಿದ್ದಾರೆ, ಸಾಯುತ್ತಾರೆ.

**ಯಥಾ ನಿರ್ಮಿತಕೋ ಜೀವೋ ಜಾಯತೇ ಮ್ರಿಯತೇಽಪಿ ಚ ।**
**ತಥಾ ಜೀವಾ ಅಮೀ ಸರ್ವೇ ಭವಂತಿ ನ ಭವಂತಿ ಚ ॥೭೦॥**

ಮಂತ್ರ, ಮೂಲಿಕೆ ಮೊದಲಾದವುಗಳಿಂದ ನಿರ್ಮಿತವಾದ ಜೀವಿಯು ಹುಟ್ಟಿ ಸಾಯುವಂತೆ ಜಾಗ್ರತ್ತಿನಲ್ಲಿ ಕಾಣುವ ಜೀವಿಗಳು ಹುಟ್ಟಿ ಸಾಯುತ್ತವೆ.

ಯಾವ ಪ್ರಾಣಿಯೂ ವಾಸ್ತವವಾಗಿ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಜಾಗ್ರತ್ತಿನಲ್ಲಿ ನಾವು ನೋಡುವ ಎಲ್ಲ ದೃಶ್ಯಗಳೂ ಸ್ವಪ್ನದೃಶ್ಯಗಳಂತೆಯೇ ಸರಿ. ಇವು ವಾಸ್ತವವಾಗಿ ಇಲ್ಲ. ಎಲ್ಲವೂ ಚಿತ್ತದ ವಿಕಲ್ಪಗಳು ಎಂದು ಅಭಿಪ್ರಾಯ.

**ನ ಕಶ್ಚಿಜ್ಜಾಯತೇ ಜೀವಃ ಸಂಭವೋಽಸ್ಯ ನ ವಿದ್ಯತೇ ।**
**ಏತತ್ತದುತ್ತಮಂ ಸತ್ಯಂ ಯತ್ರ ಕಿಂಚಿನ್ನ ಜಾಯತೇ ॥೭೧॥**

ಈ ಕಾರಿಕೆಯು ಹಿಂದೆ ಬಂದಿದೆ (೩–೪೮). ಅಜನೂ ಏಕನೂ ಆದ ಆತ್ಮನಿಗೆ ಉತ್ಪತ್ತಿಕಾರಣವಾದ ಇನ್ನೊಂದು ವಸ್ತುವೇ ಇಲ್ಲವಾದ್ದರಿಂದ ಅವನು ಜೀವ ನಾಗಿಯೂ ಹುಟ್ಟುವುದಿಲ್ಲ. ಜೀವನ ಶರೀರವಾಗಿಯೂ ಹುಟ್ಟುವುದಿಲ್ಲ. ಯಾವುದಾಗಿಯೂ ಹುಟ್ಟುವುದಿಲ್ಲ. ದೇವತೋಪಾಸನೆ, ರಾಜ್ಯಪಾಲನೆ, ವಾಣಿಜ್ಯ, ಕೃಷಿ, ಅವುಗಳಿಗೆ ಸಂಬಂಧಿಸಿದ ವಿಧಿನಿಷೇಧಗಳೆಲ್ಲವೂ ವ್ಯಾವಹಾರಿಕ ಸತ್ಯಗಳು. ಪರಮಾತ್ಮನೊಬ್ಬನೇ ಇದ್ದಾನೆ. ಎಂಬುದೊಂದೇ ಪಾರಮಾರ್ಥಿಕವಾದ ಸತ್ಯ.

**ಚಿತ್ತಸ್ಪಂದಿತಮೇವೇದಂ ಗ್ರಾಹ್ಯಗ್ರಾಹಕವದ್ದ್ವಯಮ್ ।**
**ಚಿತ್ತಂ ನಿರ್ವಿಷಯಂ ನಿತ್ಯಮಸಂಗಂ ತೇನ ಕೀರ್ತಿತಮ್ ॥೭೨॥**

ಗ್ರಾಹ್ಯ, ಗ್ರಾಹಕ ಎಂಬ ಎರಡು ಅಂಶಗಳಿಂದ ಕೂಡಿದ ಸರ್ವವೂ ಚಿತ್ತದ ಸ್ಫುರಣವೇ ಸರಿ. ಚಿತ್ತವು ಪರಮಾರ್ಥದಲ್ಲಿ ಆತ್ಮವೇ ಆಗಿರುವುದರಿಂದ – ಅದು **ನಿರ್ವಿಷಯಂ** = ವಿಷಯರಹಿತವಾದ್ದರಿಂದ, **ನಿತ್ಯಂ** = ಸರ್ವದಾ, **ಅಸಂಗಂ** = ಸಂಗರಹಿತವೆಂದು, **ತೇನ** = ಆ ಕಾರಣದಿಂದ, **ಪ್ರೋಕ್ತಂ** = ಉಕ್ತವಾಗಿದೆ.

ಸಮಸ್ತ ಬಾಹ್ಯಪದಾರ್ಥವೂ ಚಿತ್ತದಿಂದ ಗೃಹೀತವಾಗುವುದಾದ್ದರಿಂದ ಚಿತ್ತವು ಗ್ರಾಹಕವೆಂದು, ಪದಾರ್ಥವು ಗ್ರಾಹ್ಯವೆಂದೂ ಲೋಕ ವ್ಯವಹಾರವಿದೆ.

ವಾಸ್ತವವಾಗಿ ಇವೆರಡೂ ಚಿತ್ತದ ಸ್ಫುರಣವೇ ಹೊರತು ಬೇರೆಯಲ್ಲ. ಚಿತ್ತವೂ ಇಲ್ಲ, ಚೇತ್ಯವೆನಿಸುವ ಬಾಹ್ಯವಸ್ತುವೂ ಇಲ್ಲ. ಪರಮಾರ್ಥದಲ್ಲಿ ಚಿತ್ತವು ಆತ್ಮವೇ ಆಗಿದೆ. ಅದಕ್ಕೆ ಗ್ರಾಹ್ಯವಾದ ವಿಷಯವೇ ಇಲ್ಲ. ವಿಷಯವಿಲ್ಲದ್ದರಿಂದ ಆತ್ಮನು ಸದಾ ನಿಃಸಂಗನೆನಿಸಿದ್ದಾನೆ. **''ಅಸಂಗೋ ಹ್ಯಯಂ ಪುರುಷಃ''** ಎಂದು ಶ್ರುತಿಯು ಹೇಳಿದೆ.

**''ಏತಸ್ಮಾಜ್ಜಾಯತೇ ಸರ್ವಂ ಮನಃ ಸರ್ವೇಂದ್ರಿಯಾಣಿ ಚ''** (ಮುಂ ೨–೧–೩), **''ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ ವಾಯುಃ, ವಾಯೋರಗ್ನಿಃ''** (ತೈತ್ತಿ ೨–೧) – ಇವೇ ಮೊದಲಾದ ಸೃಷ್ಟಿಯನ್ನು ಹೇಳುವ ಶ್ರುತಿಗಳು ಸಂವೃತಿ ವಿಷಯಗಳು. ಎಂದರೆ ಅವಿದ್ಯಾಗೋಚರವಾದ ವ್ಯವಹಾರಕ್ಕೆ ಸಂಬಂಧಿಸಿದವು. ಪಾರಮಾರ್ಥಿಕವಾದದ್ದು ಅದ್ವೈತಚೈತನ್ಯ ಒಂದೇ. **''ಬ್ರಹ್ಮ ಸತ್ಯಂ ಜಗನ್ಮಿಥ್ಯಾ''.**

**ಯೋಽಸ್ತಿ ಕಲ್ಪಿತಸಂವೃತ್ಯಾ ಪರಮಾರ್ಥೇನ ನಾಸ್ತ್ಯಸೌ ।**
**ಪರತಂತ್ರಾಭಿಸಂವೃತ್ಯಾ ಸ್ಯಾನ್ನಾಸ್ತಿ ಪರಮಾರ್ಥತಃ ॥೭೩॥**

**ಯಃ** = ಗುರು, ಶಿಷ್ಯ, ಶಾಸ್ತ್ರ – ಮುಂತಾದ ಯಾವ ಪದಾರ್ಥವು, **ಅಸ್ತಿ** = ಇದೆಯೋ (ಸಃ = ಅದು) **ಕಲ್ಪಿತ ಸಂವೃತ್ಯಾ** = ಪರಮಾರ್ಥವನ್ನರಿಯಲು ಕಲ್ಪಿತವಾದ, **ಸಂವೃತ್ಯಾ** = ಅವಿದ್ಯಾವಿಷಯ ವ್ಯವಹಾರದಿಂದ ಆಗಿರುತ್ತದೆ. **ಅಸೌ** = ಹಾಗೆ ಅವಿದ್ಯಾಕಲ್ಪಿತವಾಗಿ ಯಾವುದಿದೆಯೋ ಅದು, **ಪರಮಾರ್ಥೇನ** = ಪರಮಾರ್ಥವಾಗಿ, **ನಾಸ್ತಿ** = ಇಲ್ಲ. **ಪರತಂತ್ರಾಭಿಸಂವೃತ್ಯಾ** = ಇನ್ನು ಸಾಂಖ್ಯಾದಿ ಪರಶಾಸ್ತ್ರದವರು ವ್ಯವಹಾರಕ್ಕಾಗಿ ಹೇಳಿಕೊಂಡಿರುವ ಪ್ರಧಾನ, ಪರಮಾಣು ಮುಂತಾದ ಪದಾರ್ಥವು ಆವಿದ್ಯಕವಾಗಿ **ಸ್ಯಾತ್** = ಇರಬಹುದು. **ಪರಮಾರ್ಥತಃ** = ಪರಮಾರ್ಥವಾಗಿ, **ನಾಸ್ತಿ** = ಇಲ್ಲ.

ಈಗ ಒಂದು ಶಂಕೆ ಹುಟ್ಟುತ್ತದೆ. ವಿಷಯವೇ ಇಲ್ಲದ್ದರಿಂದ ಚಿತ್ತವು (ಆತ್ಮನು) ಸದಾ ಅಸಂಗ ಎನ್ನುವುದು ಸರಿಯಲ್ಲ, ಗುರು, ಶಿಷ್ಯ, ಶಾಸ್ತ್ರ ಮುಂತಾದ ವಿಷಯಗಳಿಲ್ಲವೆ? ಅವು ಇಲ್ಲ ಎಂದರೆ ಪರಮಾರ್ಥವೂ ಇಲ್ಲ ಎಂದೇ ಆಗುತ್ತದೆ. ಅದು ಇದೆ ಎಂದು ತಿಳಿಸತಕ್ಕವರು ಯಾರು? ಶಾಸ್ತ್ರಾಧ್ಯಯನಾದಿಗಳು ವ್ಯರ್ಥವೆಂದಾಗಿ ಬಿಡುತ್ತದೆ. ಮತ್ತು ನೀವು ಅಲ್ಲಲ್ಲಿ ವೈಶೇಷಿಕಾದಿಗಳ ವಾದಗಳನ್ನು ಖಂಡಿಸಿದ್ದೀರಿ. ಆ ವಾದಗಳು ಇವೆಯೆಂದು ಒಪ್ಪಿಕೊಂಡಲ್ಲವೆ ಖಂಡಿಸಿದ್ದೀರಿ? ವಾದಗಳಿಲ್ಲದಿದ್ದರೆ ಖಂಡಿಸಬೇಕಾಗಿಯೇ ಇರಲಿಲ್ಲ, ಅಥವಾ ಖಂಡನೆಯೇ ಇಲ್ಲವೆಂದು ಹೇಳಬೇಕಾದೀತು. ಆದ್ದರಿಂದ ಚಿತ್ತಕ್ಕೆ ಗುರು, ಶಿಷ್ಯಾದಿಗಳೂ ದ್ರವ್ಯ, ಗುಣ –

ಮುಂತಾದ ಪದಾರ್ಥಗಳೂ ಖಂಡನೆಗಳೂ ವಿಷಯವಾಗಿವೆಯೆಂದು ಹೇಳಬೇಕಲ್ಲವೆ?

ಈ ಶಂಕೆಗೆ ಸಮಾಧಾನವು ಕಲ್ಪಿತಸಂವೃತಿ ಎಂಬುದೇ. ಪರಮಾರ್ಥವನ್ನರಿಯಲು ಕಲ್ಪಿತವಾದ ಅವಿದ್ಯಾ ವಿಷಯವ್ಯವಹಾರವಾದ್ದರಿಂದ ಗುರು, ಶಿಷ್ಯ, ಶಾಸ್ತ್ರ– ಮೊದಲಾದವು ಇರುತ್ತವೆ. ಲೋಕ ವ್ಯವಹಾರವಿರುವವರೆಗೆ ಇವೆಲ್ಲವೂ ಅಧ್ಯಾರೋಪದಿಂದ ಕಲ್ಪಿತವಾಗಿರುತ್ತವೆ. ಪರಮಾರ್ಥದಲ್ಲಿ ಇವು ಇಲ್ಲ. ಹಾಗೆಯೇ ವೈಶೇಷಿಕಾದಿಗಳೂ ಇತರರೂ ವ್ಯವಹಾರದೃಷ್ಟಿಯಿಂದ ಪದಾರ್ಥಗಳನ್ನು ಕಲ್ಪಿಸಿರುವುದೂ ಅವಿದ್ಯಾ ವ್ಯವಹಾರವೇ. ವಾದಗಳೂ, ಖಂಡನೆಗಳೂ ವ್ಯಾವಹಾರಿಕವಾಗಿ ಇವೆ. ಪರಮಾರ್ಥದಲ್ಲಿ ಇಲ್ಲ ಎಂಬುದೇ ಸತ್ಯವಾದದ್ದು.

**ಅಜಃ ಕಲ್ಪಿತಸಂವೃತ್ಯಾ ಪರಮಾರ್ಥೇನ ನಾಪ್ಯಜಃ ।**
**ಪರತಂತ್ರಾಭಿನಿಷ್ಪತ್ಯಾ ಸಂವೃತ್ಯಾ ಜಾಯತೇ ತು ಸಃ ॥೭೪॥**

**ಅಜಃ** = ಆತ್ಮನು ಅಜ ಎನ್ನುವುದು, **ಕಲ್ಪಿತಸಂವೃತ್ಯಾ** = ಸಾಂಖ್ಯಾದಿ ಪರ ಶಾಸ್ತ್ರದಿಂದ ಕಲ್ಪಿತವಾದ ಆವಿದ್ಯಕವ್ಯವಹಾರದಿಂದ ಮಾತ್ರವೇ. **ಪರಮಾರ್ಥೇನ** = ಪರಮಾರ್ಥದೃಷ್ಟಿಯಿಂದ, **ನಾಪ್ಯಜಃ** = ಆತ್ಮನು ಅಜನೆನ್ನುವುದು ಯುಕ್ತವಲ್ಲ. **ಪರತಂತ್ರಾಭಿನಿಷ್ಪತ್ಯಾ** = ಅನ್ಯ ಶಾಸ್ತ್ರದ ಪ್ರಕ್ರಿಯೆಗೆ ಅನುಸಾರವಾಗಿ, **ಸಃ** = ಆತ್ಮನು ಅಜ ಎನ್ನುವುದು, **ಸಂವೃತ್ಯಾ** = ಆವಿದ್ಯಕ ವ್ಯವಹಾರದಿಂದ **ಜಾಯತೇ** = ಉಂಟಾಗುತ್ತದೆ.

ಶಾಸ್ತ್ರಾದಿಗಳನ್ನೂ ನೀವು ಅವಿದ್ಯಾ ಕಲ್ಪಿತವ್ಯವಹಾರ ಎನ್ನುವುದಾದರೆ, ವೇದಾದಿಶಾಸ್ತ್ರಗಳು ಆತ್ಮನನ್ನು 'ಅಜ' ಎಂದು ಹೇಳಿರುವುದೂ ಆವಿದ್ಯಕವೇ ಆಗಿ ಬಿಡುತ್ತದೆ? ಆಗ ಆತ್ಮನು ಅಜ – ಜನ್ಮರಹಿತ ಎಂದು ಹೇಳುವುದೂ ಆಯುಕ್ತವಾಗಿ ಬಿಡುತ್ತದೆಯಲ್ಲವೆ? ಹೌದು; ಪರಮಾರ್ಥದಲ್ಲಿ ಅಜ–ಜನ್ಮರಹಿತ ಎಂದು ಹೇಳುವುದೂ ಆಯುಕ್ತವೇ! ಯಾವುದೇ ಒಂದು ವಸ್ತುವಿಗೆ ಜನ್ಮವಿದ್ದರೆ, ಇದು ಜನ್ಮರಹಿತ ಎಂದು ಹೇಳಬಹುದು. ಜನ್ಮವಿರುವ ಇನ್ನೊಂದು ವಸ್ತುವೇ ಇಲ್ಲದಾಗ ಆತ್ಮನು ಅಜ–ಜನ್ಮರಹಿತ ಎಂದು ಹೇಳುವುದು ಪರಮಾರ್ಥ ದೃಷ್ಟಿಯಿಂದ ಸರಿಯಲ್ಲ. ಸಾಂಖ್ಯ, ವೈಶೇಷಿಕಾದಿ ಶಾಸ್ತ್ರಗಳು ಅವಿದ್ಯಾಪ್ರಭಾವದಿಂದ ಜನ್ಮವಿರುವ ವಸ್ತುಗಳನ್ನು ಒಪ್ಪಿಕೊಂಡಿವೆ. ಗುರುಶಿಷ್ಯ ಬೋಧನಾದಿಗಳು ಅವಿದ್ಯಾ ವ್ಯವಹಾರಗಳಾದ್ದರಿಂದ ಬೋಧನಾದೃಷ್ಟಿಯಿಂದ ಆತ್ಮನು ಅಜನೆಂದು ಹೇಳಬೇಕಾಯಿತು.

**ಅಭೂತಾಭಿನಿವೇಶೋಽಸ್ತಿ ದ್ವಯಂ ತತ್ರ ನ ವಿದ್ಯತೇ ।**
**ದ್ವಯಾಭಾವಂ ಸ ಬುದ್ಧ್ವೈವ ನಿರ್ನಿಮಿತ್ತೋ ನ ಜಾಯತೇ ॥೭೫॥**

**ಅಭೂತಾಭಿನಿವೇಶಃ** = ಅಭೂತ–ಅಸತ್ಯವಾದ ದ್ವೈತದಲ್ಲಿ, **ಅಭಿನಿವೇಶಃ** = ಅದು ಸತ್ಯವೆಂಬ ಆಗ್ರಹವು, **ಅಸ್ತಿ** = ಮನುಷ್ಯನಿಗೆ ಇದ್ದು ಬಿಟ್ಟಿದೆ. ಆದರೆ **ತತ್ರ** = ಆ ಅದ್ವೈತಾತ್ಮನಲ್ಲಿ, **ದ್ವಯಂ** = ದ್ವೈತವು, **ನ ವಿದ್ಯತೇ** = ಇಲ್ಲ, **ಸಃ** = ಆ ಮನುಷ್ಯನು, **ದ್ವಯಾಭಾವಂ** = ದ್ವೈತದ ಅಭಾವವನ್ನು, **ಬುದ್ಧ್ವಾ ಏವ** = ತಿಳಿದ ಮೇಲೆ ಮಾತ್ರ, **ನಿರ್ನಿಮಿತ್ತಃ** = ಮಿಥ್ಯೆಯಾದ ದ್ವೈತ ಜ್ಞಾನವೆಂಬ ನಿಮಿತ್ತವಿಲ್ಲದವನಾಗಿ, **ನ ಜಾಯತೇ** = ಮತ್ತೆ ಹುಟ್ಟುವುದಿಲ್ಲ, ಮುಕ್ತನಾಗುತ್ತಾನೆ.

ಮಾನವನಿಗೆ ದ್ವೈತವು ಸತ್ಯದೆಂದೇ ತೋರುತ್ತದೆ. ಎಷ್ಟೋ ಜನ್ಮಗಳ ಸಂಸ್ಕಾರ ಬಲದಿಂದ ದ್ವೈತವೆಂಬುದು ವಜ್ರಲೇಪದಂತೆ ಹಿಡಿದುಕೊಂಡಿದೆ. ಪರಮಾರ್ಥವಾಗಿ ದ್ವೈತವು ಅದ್ವೈತನಾದ ಪರಮಾತ್ಮನಲ್ಲಿ ಇಲ್ಲವೇ ಇಲ್ಲ. ಈ ಸತ್ಯವನ್ನು ಅವನು ತಿಳಿದುಕೊಂಡ ಮೇಲೆ ಮಾತ್ರ ದ್ವೈತದ ಆಗ್ರಹವು ತೊಲಗಿ ಹೋಗುವುದರಿಂದ ಅವನು ಮುಕ್ತನಾಗುತ್ತಾನೆ.

**ಯದಾ ನ ಲಭತೇ ಹೇತೂನುತ್ತಮಾಧಮಮಧ್ಯಮಾನ್ ।**
**ತದಾ ನ ಜಾಯತೇ ಚಿತ್ತಂ ಹೇತ್ವಭಾವೇ ಫಲಂ ಕುತಃ ॥೭೬॥**

**ಯದಾ** = ಯಾವಾಗ–ಅದ್ವಿತೀಯವಾದ ಆತ್ಮತತ್ತ್ವವನ್ನು ತಿಳಿದಾಗ, **ಹೇತೂನ್** = ಜನ್ಮ ಪ್ರಾಪ್ತಿಗೆ ಕಾರಣಗಳಾದ, **ಉತ್ತಮಾಧಮಮಧ್ಯಮಾನ್** = ಉತ್ತಮ, ಮಧ್ಯಮ, ಅಧಮ ಎಂದು ವರ್ಗೀಕೃತವಾದ ಕರ್ಮಫಲಗಳನ್ನು, **ನ ಲಭತೇ** = ಕಾಣುವುದಿಲ್ಲವೋ – ಪಡೆಯುವುದಿಲ್ಲವೋ, **ತದಾ** = ಆಗ, **ಚಿತ್ತಂ** = ಚಿತ್ತವು – ಚಿತ್ತೋಪಾಧಿಕನಾದ ಜೀವಾತ್ಮನು, **ನ ಜಾಯತೇ** = ಪುನರ್ಜನ್ಮವನ್ನು ಪಡೆಯುವುದಿಲ್ಲ, **ಹೇತ್ವಭಾವೇ** = ಕಾರಣವಿಲ್ಲದಾಗ, **ಫಲಂ** = ಅದರ ಫಲವು, **ಕುತಃ** = ಹೇಗೆ ಬಂದೀತು?

ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳೂ ಸಾಮಾನ್ಯ ಧರ್ಮಗಳೂ ಸ್ವರ್ಗವೇ ಮೊದಲಾದ ಫಲಗಳನ್ನು ಕೊಡುವ ಉತ್ತಮ ಧರ್ಮವರ್ಗಕ್ಕೆ ಸೇರುತ್ತವೆ. ಮನುಷ್ಯತ್ವಾದಿ ಸಾಮಾನ್ಯಫಲಗಳನ್ನು ಕೊಡತಕ್ಕವು ಮಧ್ಯಮ ವರ್ಗದವು. ಪಶು, ಕ್ರಿಮಿ, ಕೀಟಾದಿ ಜನ್ಮಗಳನ್ನು ಕೊಡುವ ಪಾಪ ಕರ್ಮಗಳು ಅಧಮವರ್ಗದವು. ಅದ್ವಿತೀಯಾತ್ಮತತ್ತ್ವವನ್ನರಿತ ಜ್ಞಾನಿಯು ಲೋಕಸಂಗ್ರಹ ಕ್ಕಾಗಿ ಉತ್ತಮ ಮಧ್ಯಮ ಕರ್ಮಗಳನ್ನು ಆಚರಿಸಬಹುದು. ಅವನು ಅಧರ್ಮ ಕರ್ಮಗಳನ್ನು ಮಾಡುವುದೇ ಇಲ್ಲ. ಉತ್ತಮ ಮಧ್ಯಮಕರ್ಮಗಳನ್ನೂ ಸಹ ಜ್ಞಾನಿಯು ಫಲಾಪೇಕ್ಷೆಯಿಲ್ಲದೆ ಮಾಡುತ್ತಾನೆ. ಹೀಗಿರುವಾಗ ಈ ಕರ್ಮ

ಗಳಾವುವೂ ಅವನಿಗೆ ಫಲವನ್ನು ಕೊಡಲಾರವು. ವಾಸ್ತವವಾಗಿ ಆತ್ಮಾತಿರಿಕ್ತ ವಸ್ತುಗಳೇ ಜ್ಞಾನಿಗೆ ತೋರುವುದಿಲ್ಲವಾದ್ದರಿಂದ ಕರ್ಮವೂ ಇಲ್ಲ, ಫಲವೂ ಇಲ್ಲ– ಎಂದು ಅವನು ತಿಳಿದಿರುತ್ತಾನೆ. ಅಧರ್ಮವೇ ಅಧಮಕರ್ಮ.

ಜ್ಞಾನಿಯಲ್ಲದ ಅಜ್ಞಾನಿಯ ಕರ್ಮವು ಉತ್ತಮಾಧಮ ಮಧ್ಯಮಗಳಲ್ಲಿ ಒಂದಾಗಿರುತ್ತದೆ. ಅದು ಪಾಪಪುಣ್ಯಗಳ ಫಲವನ್ನು ನೀಡುತ್ತದೆಯೆಂಬುದು ಶಾಸ್ತ್ರಸಿದ್ಧವಾದದ್ದು. ಅಂತಹ ಫಲಗಳನ್ನು ಅನುಭವಿಸುವುದಕ್ಕಾಗಿ ಅವನಿಗೆ ಮರಣಾನಂತರದಲ್ಲಿ ಮತ್ತೆ ಜನ್ಮ ಉಂಟು.

ಹಿಂದೆ ಹೇಳಿದ ಮಿಥ್ಯಾಭಿನಿವೇಶವೇ ಇಲ್ಲದಾಗ ದ್ವೈತವೇ ಇಲ್ಲವಾದ್ದರಿಂದ ಆತನಿಗೆ ಧರ್ಮ ಅಧರ್ಮಗಳೆರಡೂ ಇರುವುದಿಲ್ಲ. ಈ ಧರ್ಮಾಧರ್ಮಗಳು ಜನ್ಮ ಹೇತುಗಳು. ಈ ಹೇತುಗಳೇ ಇಲ್ಲದಾಗ ಅವುಗಳ ಫಲವಾದ ಜನ್ಮವೂ ಇರುವುದಿಲ್ಲ. ಬೀಜವೇ ಇಲ್ಲದಾಗ ಸಸ್ಯವು ಹೇಗೆ ಹುಟ್ಟುತ್ತದೆ?

**ಅನಿಮಿತ್ತಸ್ಯ ಚಿತ್ತಸ್ಯ ಯಾಽನುತ್ಪತ್ತಿಃ ಸಮಾಽದ್ವಯಾ ।**
**ಅಜಾತಸ್ಯೈವ ಸರ್ವಸ್ಯ ಚಿತ್ತದೃಶ್ಯಂ ಹಿ ತದ್ಯತಃ ॥೭೭॥**

**ಅನಿಮಿತ್ತಸ್ಯ** = ಧರ್ಮಾಧರ್ಮಗಳೆಂಬ ಜನ್ಮನಿಮಿತ್ತಗಳಿಲ್ಲದ **ಚಿತ್ತಸ್ಯ** = ಚಿತ್ತಕ್ಕೆ ಜೀವಾತ್ಮನಿಗೆ, **ಯಾ** = ಯಾವ, **ಅನುತ್ಪತ್ತಿಃ** = ಪುನರುತ್ಪತ್ತಿಯಿಲ್ಲವೆಂಬ ಮೋಕ್ಷವು ಉಕ್ತವಾಯಿತೋ ಅದು, **ಸರ್ವದಾ ಸಮಾ** = ನಿರ್ವಿಶೇಷವೂ, **ಅದ್ವಯಾ** = ದ್ವೈತ ಶೂನ್ಯವೂ ಆಗಿರುತ್ತದೆ. **ಯತೋ ಹಿ** = ಏಕೆಂದರೆ, ಮೊದಲೂ ಸಹ **ಅಜಾತಸ್ಯೈವ** = ಉತ್ಪತ್ತಿರಹಿತನೇ ಆಗಿದ್ದ, **ಸರ್ವಸ್ಯ** = ಸರ್ವಸ್ವರೂಪನಾದ ಅದ್ವಯ ಚಿತ್ತನಿಗೆ, **ತತ್** = (ಜ್ಞಾನೋದಯಕ್ಕೆ ಮೊದಲು ಇದ್ದ) ಜನ್ಮವಿದೆಯೆಂಬುದೂ (ದ್ವೈತವೂ) **ಚಿತ್ತದೃಶ್ಯಂ** = ಕೇವಲ ಚಿತ್ತದೃಶ್ಯವಾದದ್ದು.

**ಚಿತ್ತದೃಶ್ಯಂ ನ ಜಾಯತೇ** (೪–೨೮), **ಚಿತ್ತದೃಶ್ಯಮವಸ್ತುಕಂ** (೪–೩೩) – ಎಂದು ಹಿಂದೆ ಹೇಳಿದ್ದಾಗಿದೆ. ಚಿತ್ತದೃಶ್ಯವಾದದ್ದು ಕೇವಲ ಚಿತ್ತಸ್ಫುರಣ ಮಾತ್ರವೇ ಹೊರತು ಸತ್ಯವಾದದ್ದಲ್ಲ. ಅದು ವಸ್ತುತಃ ಹುಟ್ಟುವುದೇ ಇಲ್ಲ ವಾದ್ದರಿಂದ ದ್ವೈತವು ಮಿಥ್ಯೆಯಾದದ್ದು. ಆದ್ದರಿಂದ ಚಿತ್ತವು – ಎಂದರೆ – ಚಿತ್ತೋಪಾಧಿಕನಾದ ಆತ್ಮನು ಸದಾ ಅಜಾತನೂ ಅದ್ವಯನೂ ಆಗಿದ್ದಾನೆ. ಜ್ಞಾನೋದಯಕ್ಕೆ ಮೊದಲು ಹೇಗಿದ್ದನೋ ಹಾಗೆಯೇ ಜ್ಞಾನೋದಯವಾದ ಮೇಲೂ ಇರುತ್ತಾನೆ. ಸಂಸಾರವು ಭ್ರಮೆಯಿಂದ ಕಲ್ಪಿತವಾದದ್ದು. ಆತ್ಮನು ಬದ್ಧನೂ ಅಲ್ಲ, ಮುಕ್ತನಾಗಬೇಕಾದದ್ದೂ ಇಲ್ಲ. ಅಜ್ಞಾನವು ನಿವೃತ್ತವಾಗಬೇಕು ಎಂಬುದೊಂದೇ ವಿವಕ್ಷಿತವಾದದ್ದು.

**ಬುದ್ಧ್ವಾ�ऽನಿಮಿತ್ತತಾಂ ಸತ್ಯಾಂ ಹೇತುಂ ಪೃಥಗನಾಪ್ನುವನ್ ।**
**ವೀತಶೋಕಂ ತಥಾऽಕಾಮಮಭಯಂ ಪದಮಶ್ನುತೇ ॥೭೮॥**

**ಅನಿಮಿತ್ತತಾಂ** = ಜನ್ಮಕ್ಕೆ ನಿಮಿತ್ತವಾದ ದ್ವೈತವಿಲ್ಲವೆಂಬುದನ್ನು, **ಸತ್ಯಂ** = ಪರಮಾರ್ಥ ಸತ್ಯವೆಂದು, **ಬುದ್ಧ್ವಾ** = ತಿಳಿದು, **ಹೇತುಂ** = ಜನ್ಮ ಹೇತುವಾದ ಧರ್ಮಾಧರ್ಮಗಳನ್ನು, **ಪೃಥಕ್** = ಬೇರೆಬೇರೆಯಾಗಿ, **ಅನಾಪ್ನುವನ್** = ಪಡೆಯದೆ ಇರತಕ್ಕವನು, **ವೀತಶೋಕಂ** = ಶೋಕ ರಹಿತವೂ, **ಅಕಾಮಂ** = ಸರ್ವಕಾಮನಾಶೂನ್ಯವೂ, **ಅಭಯಂ** = ಭಯ ರಹಿತವೂ ಆದ, **ಪದಂ** = ಸ್ಥಿತಿಯನ್ನು, **ಅಶ್ನುತೇ** = ಪಡೆಯುತ್ತಾನೆ.

ದೃಶ್ಯವೆಲ್ಲವೂ ಚಿತ್ತಸ್ಪಂದಿತವಾದ್ದರಿಂದ ಮಿಥ್ಯೆಯೆಂದು ತಿಳಿದಾಗ ಹಿಂದೆ ಹೇಳಿದ ಅಭೂತಾಭಿನಿವೇಶವು ಇರುವುದಿಲ್ಲ. ನಿರ್ವಿಷಯವಾದ ಚಿತ್ತವೇ ಚಿತ್–ಎಂದರೆ–ಅದ್ವಯಾತ್ಮ. ''ಚಿತ್ತಂ'' **ಚಿತಂ ವಿಜಾನೀಯಾತ್ ತಕಾರ ರಹಿತಂ ಯದಾ''** ಎಂಬ ಸೂಕ್ತಿಯೊಂದು ಇದೆ. ತಕಾರವೆಂದರೆ ಶಬ್ದ ಸ್ಪರ್ಶರೂಪ ರಸಗಂಧಗಳೆಂಬ ಪಂಚ ವಿಷಯಗಳಿಗೆ ಪ್ರತಿನಿಧಿಯಾದ ತವರ್ಗ – ತ, ಥ, ದ, ಧ, ನ. ಕೇವಲ ಚಿತ್ತಕ್ಕಾಗಲಿ ಕೇವಲಾತ್ಮನಿಗಾಗಲಿ ಜನ್ಮವಿಲ್ಲ. ಅಧ್ಯಸ್ತವಾದ ದ್ವೈತ ಸ್ಪಂದಿತವಿಲ್ಲದಾಗ ಚಿತ್ತವು ಇರುವುದೇ ಇಲ್ಲ. ಕೇವಲಾತ್ಮನಿಗೆ ಜನ್ಮವಿಲ್ಲ. ಆಗ ಧರ್ಮಾಧರ್ಮಗಳ ಸಂಬಂಧವೇ ಇರುವುದಿಲ್ಲವಾದ್ದರಿಂದ ಜನ್ಮವೂ ಇರುವುದಿಲ್ಲ. ಇದನ್ನರಿತವನು ಮುಕ್ತನಾಗುತ್ತಾನೆ ಎಂದು ಅಭಿಪ್ರಾಯ.

**ಅಭೂತಾಭಿನಿವೇಶಾದ್ಧಿ ಸದೃಶೇ ತತ್ ಪ್ರವರ್ತತೇ ।**
**ವಸ್ತ್ವಭಾವಂ ಸ ಬುದ್ಧ್ವೈವ ನಿಃಸಂಗಂ ವಿನಿವರ್ತತೇ ॥೭೯॥**

**ಹಿ** = ಏಕೆಂದರೆ, **ಅಭೂತಾಭಿನಿವೇಶಾತ್** = **ಅಭೂತ** = ದ್ವೈತವಿಲ್ಲದಿದ್ದರೂ, **ಅಭಿನಿವೇಶಾತ್** = ದ್ವೈತವಿದೆಯೆಂಬ ನಿಶ್ಚಯದಿಂದ, **ತತ್** = ಆ ಚಿತ್ತವು, **ಸದೃಶೇ** = ಚಿತ್ತಕ್ಕೆ ಅನುಗುಣವಾದ ದ್ವೈತದಲ್ಲಿ, **ಪ್ರವರ್ತತೇ** = ಪ್ರವರ್ತಿಸುತ್ತದೆ, **ಸಃ** = ಆ ಮುಮುಕ್ಷುವು **ವಸ್ತ್ವಭಾವಂ** = ದ್ವೈತ ವಸ್ತುವು ಇಲ್ಲವೆಂಬುದನ್ನು, **ಬುದ್ಧ್ವೈವ** = ತಿಳಿದಮೇಲೆಯೇ, **ತತ್** = ಆ ಚಿತ್ತವು, **ನಿಃಸಂಗಂ** = ವಿಷಯಸಂಗ ರಹಿತವಾಗಿ, **ವಿನಿವರ್ತತೇ** = ಹಿಂದಿರುಗುತ್ತದೆ.

ಮನುಷ್ಯನು ಅವಿದ್ಯಾನಿಮಿತ್ತದಿಂದ ಅಭೂತಾಭಿನಿವೇಶವನ್ನು ಇಟ್ಟುಕೊಂಡು ದ್ವೈತಕಾರ್ಯಗಳಲ್ಲಿ ಪ್ರವರ್ತಿಸುತ್ತಾನೆ. ಅದೆಲ್ಲವೂ ಚಿತ್ತದ ಪ್ರೇರಣೆ, ಯಾವಾಗ ದ್ವೈತದ ಅಭಿನಿಫೇಶವು ತೊಲಗುತ್ತದೆಯೋ ಆಗ ಚಿತ್ತಸ್ಪಂದಿತವೇ ಇರುವುದಿಲ್ಲ. **ಅಭೂತ** = ಅಸತ್ಯವಾದದ್ದು, ದ್ವೈತ.

**ಕಾಮಾನ್ ಯಃ ಕಾಮಯತೇ ಮನ್ಯಮಾನಃ । ಸ ಕಾಮಭಿರ್ಜಾಯತೇ ತತ್ರ ತತ್ರ । ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥'' (ಮುಂ, ೩-೨-೨). ಟಿಪ್ಪಣಿ : ಕಾಮಭಿಃ = ಕಾಮೈಃ, ವೈದಿಕ ಪ್ರಯೋಗ. ''ಅಭಯಂ ಹ ವೈ ಬ್ರಹ್ಮ ಭವತಿ ಯ ಏವಂ ವೇದ'' (ಬೃಹ. ೪-೪-೨೫).**

**ನಿವೃತ್ತಸ್ಯಾಪ್ರವೃತ್ತಸ್ಯ ನಿಶ್ಚಲಾ ಹಿ ತದಾ ಸ್ಥಿತಿಃ ।**
**ವಿಷಯಃ ಸ ಹಿ ಬುದ್ಧಾನಾಂ ತತ್ಸಾಮ್ಯಮಜಮದ್ವಯಮ್ ॥೮೦॥**

**ನಿವೃತ್ತಸ್ಯ** = ದ್ವೈತ ವಿಷಯದಿಂದ ನಿವೃತ್ತವಾದ, **ಅಪ್ರವೃತ್ತಸ್ಯ** = ವಿಷಯಾಂತರದಲ್ಲಿ ಪ್ರವೃತ್ತವಾಗದ (ಚಿತ್ತಸ್ಯ = ಚಿತ್ತದ), **ಸ್ಥಿತಿಃ** = ಸ್ಥಿತಿಯು, **ತದಾ** = ಸತ್ಯಜ್ಞಾನವಾದಾಗ, **ನಿಶ್ಚಲಾ ಹಿ** = ಚಲನವರ್ಜಿತವಾಗಿ ಬ್ರಹ್ಮಸ್ವರೂಪವೇ ಆಗಿ ಬಿಡುವದಷ್ಟೆ. **ಸಃ** = ಹಾಗೆ ಅದ್ವಯ ವಿಜ್ಞಾನೈಕ ರಸಘನವಾಗಿ ಚಿತ್ತವಿರುವುದು, **ಬುದ್ಧಾನಾಂ** = ಪರಮಾರ್ಥದರ್ಶಿಗಳಿಗೆ ಮಾತ್ರಗೋಚರವಾದ, **ವಿಷಯಃ** = ವಿಷಯವಾಗಿರುತ್ತದೆ. **ತತ್** = ಆ ಚಿತ್ತವು, **ಸಾಮ್ಯಂ** = ಸಂಪೂರ್ಣವಾಗಿ ನಿರ್ವಿಶೇಷವೂ **ಅಜಂ** = ಅಜವೂ, **ಅದ್ವಯಂ** = ಅದ್ವಿತೀಯವೂ ಆದದ್ದು.

ಇಲ್ಲಿ ಬುದ್ಧರು ಎಂದರೆ ಜ್ಞಾನಿಗಳು ಎಂದರ್ಥ. ಅಜ್ಞಾನಿಗಳ ಚಿತ್ತವಾದರೋ ಅವಿದ್ಯಾಜನ್ಯವೂ ಸದ್ವಿತೀಯವೂ ಸ್ಪಂದನವುಳ್ಳದ್ದು ಆಗಿರುತ್ತದೆ.ಆದ್ದರಿಂದ ಅದು ಚಲಿಸುತ್ತದೆ, ಹುಟ್ಟುತ್ತದೆ ಮತ್ತು ನಶಿಸುತ್ತದೆ. **ಅಜಾತಿ ಸಮತಾಂಗತಂ** (೩-೩೮) – ಎಂಬುದನ್ನು ನೋಡಬಹುದು. ಇಲ್ಲಿ ಚಿತ್ತವೆಂದರೆ ಆತ್ಮವೆಂದರ್ಥ.

**ಅಜಮನಿದ್ರಮಸ್ವಪ್ನಂ ಪ್ರಭಾತಂ ಭವತಿ ಸ್ವಯಮ್ ।**
**ಸಕೃದ್‌ವಿಭಾತೋ ಹ್ಯೇವೈಷ ಧರ್ಮೋ ಧಾತುಸ್ವಭಾವತಃ ॥೮೧॥**

ಆತ್ಮಸ್ವರೂಪವು **ಅಜಂ** = ಜನ್ಮರಹಿತವೂ, **ಅನಿದ್ರಂ** = ನಿದ್ರಾರಹಿತವೂ, **ಅಸ್ವಪ್ನಂ** = ಸ್ವಪ್ನರಹಿತವೂ, **ಸ್ವಯಂಪ್ರಭಾತಂ** = ಸ್ವಯಂ ಪ್ರಕಾಶವೂ **ಭವತಿ** = ಆಗಿರುತ್ತದೆ. **ಏಷ ಧರ್ಮಃ** = ಈ ಆತ್ಮನು, **ಸಕೃದ್ ವಿಭಾತಃ, ಏವ** = ಸದಾ ಪ್ರಕಾಶ ಸ್ವರೂಪನಾಗಿಯೇ ಇರುತ್ತಾನೆ. ಹೀಗಿರುವುದು **ಧಾತು ಸ್ವಭಾವತಃ** = ವಸ್ತು ಸ್ವಭಾವದಿಂದಲೇ ಆಗಿರುತ್ತದೆ.

ತಾತ್ಪರ್ಯವು ಸ್ಪಷ್ಟವಾಗಿದೆ. **ಅನಾದಿಮಾಯಯಾ ಸುಪ್ತಃ** (೧-೧೬) ಎಂಬುದನ್ನೂ ನೋಡಬಹುದು. **'ತಮೇವ ಭಾಂತಮನುಭಾತಿಸರ್ವಂ ತಸ್ಯ**

**ಭಾಸಾ ಸರ್ವಮಿದಂ ವಿಭಾತಿ'** (ಮುಂ. ೨-೨-೧೦). **'ಧಾತುಃ ಸ್ವಭಾವತಃ'** ಎಂದು ಕಾರಿಕೆಯಲ್ಲಿ ವ್ಯಸ್ತಪಾಠವೂ ಉಂಟು. ಆಗ ಧಾತುವೆಂದರೆ ಆತ್ಮನೆಂದರ್ಥ **'ಅಣುರೇಷ ಧರ್ಮಃ'** (ಕಠ ೧-೧-೨೧).

**ಸುಖಮಾವ್ರಿಯತೇ ನಿತ್ಯಂ ದುಃಖಂ ವಿವ್ರಿಯತೇ ಸದಾ ।**
**ಯಸ್ಯ ಕಸ್ಯ ಚ ಧರ್ಮಸ್ಯ ಗ್ರಹೇಣ ಭಗವಾನಸೌ ॥೮೨॥**

**ಯಸ್ಯಕಸ್ಯ ಚ ಧರ್ಮಸ್ಯ** = ಯಾವುದೋ ಒಂದು ಕಲ್ಪಿತದ್ವೈತ ವಸ್ತುವಿನ ಆವೇಶದಿಂದ, **ಅಸೌ ಭಗವಾನ್** = ಆ ಭಗವಂತನಾದ ಅದ್ವಯಾತ್ಮನು, **ನಿತ್ಯಂ** = ಯಾವಾಗಲೂ, **ಸುಖಂ** = ಸುಲಭವಾಗಿ, **ಆವ್ರಿಯತೇ** = ಆಚ್ಛಾದಿತ ನಾಗುತ್ತಾನೆ, **ಸದಾ** = ಯಾವಾಗಲೂ, **ದುಃಖಂ** = ಬಹು ಕಷ್ಟದಿಂದ, **ವಿವ್ರಿಯತೇ** = ಪ್ರಕಟೀಕೃತನಾಗುತ್ತಾನೆ.

ಇಷ್ಟು ವಿವರವಾಗಿ ತಿಳಿಸಿದರೂ ಲೌಕಿಕರು ಪರಮಾರ್ಥ ತತ್ತ್ವವನ್ನು ಏಕೆ ಗ್ರಹಿಸುವುದಿಲ್ಲ. ಏಕೆಂದರೆ, ಈ ಲೌಕಿಕ ಜನರು ಹುಟ್ಟುತ್ತಿರುವಾಗಲೇ ಈ ದ್ವೈತ ಜಗತ್ತಿಗೆ ಮರುಳಾಗಿ ಬಿಟ್ಟಿರುತ್ತಾರೆ. ಉಪಯುಕ್ತವಲ್ಲದ ಯಾವ ಯಾವುದೋ ವಿಷಯವನ್ನು ತಲೆಗೆ ಅಂಟಿಸಿಕೊಳ್ಳುತ್ತಾರೆ. ಮಿಥ್ಯಾದ್ವೈತದಲ್ಲಿ ನಂಬಿಕೆ ಗಟ್ಟಿಯಾಗಿ ಬಿಡುವುದರಿಂದ ಅದ್ವಯಾತ್ಮನು ಸುಲಭವಾಗಿ ಮರೆಯಾಗಿ ಬಿಡುತ್ತಾನೆ. ಬಲ್ಲವರು ಎಷ್ಟು ಯುಕ್ತಿ ಪ್ರಮಾಣಗಳಿಂದ ತಿಳಿಸಿಕೊಟ್ಟರೂ ಅದ್ವೈತದಲ್ಲಿ ಶ್ರದ್ಧೆಯುಂಟಾಗು ವುದು ಈ ಜನರಿಗೆ ಕಷ್ಟವೇ ಸರಿ. ಹಾಗೆ ತಿಳಿಸಿಕೊಡುವ ಆಚಾರ್ಯನು ದೊರೆಯುವುದೂ ಕಷ್ಟವೇ. ಶ್ರುತಿಯು ಹೇಳುತ್ತದೆ **"ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ । ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ"** (ಕಠ. ೧-೨-೭).

**ಅಸ್ತಿ ನಾಸ್ತ್ಯಸ್ತಿನಾಸ್ತೀತಿ ನಾಸ್ತಿನಾಸ್ತೀತಿ ವಾ ಪುನಃ ।**
**ಚಲಸ್ಥಿರೋಭಯಾಭಾವೈರಾವೃಣೋತ್ಯೇವ ಬಾಲಿಶಃ ॥೮೩॥**

**ಅಸ್ತಿ** = ಆತ್ಮನು ಇದ್ದಾನೆ, **ನಾಸ್ತಿ** = ಆತ್ಮನು ಇಲ್ಲ, **ಅಸ್ತಿ ನಾಸ್ತಿ** = ಆತ್ಮನು ಇದ್ದಾನೆ ಮತ್ತು ಇಲ್ಲ, **ಇತಿ** = ಈ ಪ್ರಕಾರವಾಗಿಯೋ, **ವಾ** = ಅಥವಾ **ಪುನಃ** = ಮತ್ತೆ **ನಾಸ್ತಿ ನಾಸ್ತೀತಿ** = ಇಲ್ಲ ಇಲ್ಲ (ನಿಶ್ಚಯವಾಗಿ ಇಲ್ಲ) **ಇತಿ** = ಹೀಗೆಂದೋ, **ಬಾಲಿಶಃ** = ಅವಿವೇಕಿಯು, **ಚಲ** = ಚಲಭಾವ, **ಸ್ಥಿರ** = ಸ್ಥಿರಭಾವ, **ಉಭಯ** = ಚಲ ಸ್ಥಿರಗಳೆಂಬ ಉಭಯಭಾವ, **ಅಭಾವೈಃ** = ಆತ್ಮನು ಇಲ್ಲವೆಂಬ ಭಾವ – ಈ ಪ್ರಕಾರಗಳಿಂದ, **ಆವೃಣೋತ್ಯೇವ** = ಅದ್ವಯಾತ್ಮನನ್ನು, ಆಚ್ಛಾದಿಸಿ ಬಿಡುತ್ತಾನೆ.

೧. **ಅಸ್ತಿ** = ಆತ್ಮನು ಇದ್ದಾನೆಂಬುದು ವೈಶೇಷಿಕಾದಿಗಳ ಪಕ್ಷ,

೨. **ನಾಸ್ತಿ** = (ನಿತ್ಯನಾದ) ಆತ್ಮನು ಇಲ್ಲ. ಕ್ಷಣಿಕ ವಿಜ್ಞಾನಧಾರೆಯನ್ನು ಆತ್ಮನೆಂದುಕೊಳ್ಳಬಹುದು – ಎಂದು ಕ್ಷಣಿಕ ವಿಜ್ಞಾನವಾದಿಯಾದ ಬೌದ್ಧನು ಹೇಳುತ್ತಾನೆ.

೩. **ಅಸ್ತಿ ನಾಸ್ತಿ** = ಒಂದು ದೃಷ್ಟಿಯಿಂದ ಆತ್ಮನಿದ್ದಾನೆ, ಇನ್ನೊಂದು ದೃಷ್ಟಿಯಿಂದ ಇಲ್ಲ ಎಂದು ಸ್ಯಾದ್ವಾದಿಗಳಾದ ಜೈನರ ಮತ. ಉದಾ – ಸ್ಯಾತ್ ಆತ್ಮಾ ಚೇತನತ್ವೇನ ಅಸ್ತಿ, ಸ್ಯಾತ್ ಆತ್ಮಾ ಅಚೇತನತ್ವೇನ ನಾಸ್ತಿ. ಇದನ್ನು ಅನೇಕಾಂತ ವಾದ ಎಂದೂ ಹೇಳುತ್ತಾರೆ. ಸ್ಯಾತ್ ಎಂದರೆ ಕಥಂ ಚಿತ್ (ಹೇಗೋ ಒಂದು ರೀತಿಯಲ್ಲಿ) ಎಂದರ್ಥ.

೪. **ನಾಸ್ತಿ ನಾಸ್ತಿ** = ಆತ್ಮನು ಇಲ್ಲವೇ ಇಲ್ಲ ಎಂದು ಆತ್ಮನ ಅತ್ಯಂತಾಭಾವವನ್ನು ನಾಸ್ತಿಕರೂ ಶೂನ್ಯವಾದಿಗಳಾದ ಮಾಧ್ಯಮಿಕ ಬೌದ್ಧರ ಹೇಳುತ್ತಾರೆ.

**ವಿವರಣೆ :**

೧. ಅಸ್ತಿ– ಎನ್ನುವವರು ವೈಶೇಷಿಕರೇ ಮೊದಲಾದ ಕೆಲವು ದ್ವೈತಿಗಳೆಂದು ಇಲ್ಲಿ ವಿವಕ್ಷಿತ. ಆತ್ಮನು ಸವಿಶೇಷ (ಸಗುಣ)ನಾಗಿದ್ದಾನೆ. ಘಟಪಟಾದಿಗಳಂತೆ ಆತ್ಮನ ಗುಣಗಳು ಆಗಾಗರೂಪಾಂತರವನ್ನು ತಾಳುವುದರಿಂದ ಈ ಪಕ್ಷವು ಚಲ.

೨. ಈ ಕ್ಷಣಿಕ ವಿಜ್ಞಾನವಾದದಲ್ಲಿ ವಿಜ್ಞಾನವು ಗುಣರಹಿತ ಮತ್ತು ಕ್ಷಣಿಕ, ಸ್ಥಿರವಲ್ಲ.

೩. ಅಸ್ತಿ – ನಾಸ್ತಿ = ಇದು ಹಿಂದೆ ಹೇಳಿದಂತೆ ಜೈನರ ಮತ. ಇವರ ಸ್ಯಾದ್ವಾದದಲ್ಲಿ ಏಳು ಪ್ರಕಾರಗಳುಂಟು. ಇದಕ್ಕೆ ಸಪ್ತಭಂಗೀ ನಯವೆಂದು ಹೆಸರು. ಇದು ಆತ್ಮನಿಗೆ ಮಾತ್ರವಲ್ಲ, ಸಕಲ ಪದಾರ್ಥಗಳಿಗೂ ಅನ್ವಯಿಸುತ್ತದೆ.

೪. ನಾಸ್ತಿ ನಾಸ್ತಿ = ನಾಸ್ತಿಕರೂ ಮಾಧ್ಯಮಿಕ ಬೌದ್ಧರೂ ಆತ್ಮನ ಅತ್ಯಂತಾಭಾವವನ್ನು ಹೇಳುತ್ತಾರೆ. ಸಾಂಖ್ಯರೂ, ಮೀಮಾಂಸಕರೂ ಈಶ್ವರನನ್ನು ಒಪ್ಪುವುದಿಲ್ಲವಾದರೂ ನಿತ್ಯನಾದ ಜೀವಾತ್ಮನನ್ನು ಒಪ್ಪುತ್ತಾರೆ.

ಈ ಪ್ರಕಾರವಾಗಿ ವಿದ್ವಾಂಸರೂ ಸಹ ವಾದಿಸುತ್ತ ಆತ್ಮನ ಪರಮಾರ್ಥ ಸ್ವರೂಪವನ್ನು ತಿಳಿಯದೇ ಹೋಗಿದ್ದಾರೆ. ಇನ್ನು ವಿವೇಕಹೀನರಾದ ಮೂಢ ಜನರು ತಿಳಿದುಕೊಳ್ಳದೆ ಇರುವುದರಲ್ಲಿ ಅಚ್ಚರಿಯೇನು? – ಎಂದು ಅಭಿಪ್ರಾಯ.

**ಕೋಟ್ಯಶ್ಚತಸ್ರ ಏತಾಸ್ತು ಗ್ರಹೈರ್ಯಾಸಾಂ ಸದಾऽವೃತಃ ।**
**ಭಗವಾನಾಭಿರಸ್ಪೃಷ್ಟೋ ಯೇನ ದೃಷ್ಟಃ ಸ ಸರ್ವದೃಕ್ ॥೮೪॥**

**ಏತಾಃ** = ಉಕ್ತವಾದ ಈ, **ಚತಸ್ರಃ** = **ಅಸ್ತಿ ನಾಸ್ತಿ** = **ಕೋಟ್ಯಃ** = ಮುಂತಾದ ನಾಲ್ಕು ವಾದ ಪ್ರಕಾರಗಳು ಇರುತ್ತವೆ. **ಯಾಸಾಂ** = ಯಾವ ಈ ನಾಲ್ಕು ಕೋಟಿಗಳ, **ಗ್ರಹೈಃ** = ಇದೇ ಸತ್ಯವೆಂಬ ಮಿಥ್ಯಾನಿಶ್ಚಯಗಳಿಂದ, **ಭಗವಾನ್** = ಪರಮಾತ್ಮನು, **ಸದಾ** = ಯಾವಾಗಲೂ, **ಆವೃತಃ** = ಆಚ್ಛಾದಿತನಾಗಿ ಬಿಟ್ಟಿದ್ದಾನೆ. **ಅಭಿಃ** = ಈ ಮಿಥ್ಯಾನಿಶ್ಚಯಗಳಿಂದ, **ಅಸ್ಪೃಷ್ಟಃ** = ಸ್ಪರ್ಶವನ್ನೂ ಸಹ ಪಡೆಯದ, **ಭಗವಾನ್** = ಅದ್ವಯಾತ್ಮನು, **ಯೇನ** = ಯಾರಿಂದ, **ದೃಷ್ಟಃ** = ಸಮೀಚೀನವಾಗಿ ಜ್ಞಾತನಾಗುತ್ತಾನೋ, **ಸಃ** = ಆ ಪುರುಷನು, **ಸರ್ವದೃಕ್** = ಸರ್ವಜ್ಞನಾದ ವಿದ್ವಾಂಸನು.

ಶಾಸ್ತ್ರಜ್ಞರಾದ ಪಂಡಿತರು ಈ ನಾಲ್ಕೂ ಬಗೆಗಳಲ್ಲೊಂದು ಪಕ್ಷವನ್ನು ಹಿಡಿದು ವಾದ ಕೋಲಾಹಲಗಳನ್ನೆಬ್ಬಿಸಿ ಖಂಡನೆ ಮಂಡನೆಗಳಲ್ಲಿ ಮುಳುಗಿ ಹೋಗಿದ್ದಾರೆ. ಆತ್ಮನು ಅದ್ವೈತನೂ ನಿರ್ವಿಶೇಷನೂ ಆಗಿದ್ದಾನೆಂಬ ಸತ್ಯವನ್ನು ಇವರು ಅರಿತಿಲ್ಲ. ಈ ಪಂಡಿತರವಾದಗಳ ಸ್ಪರ್ಶವೂ ಅದ್ವಯನಿಗಿಲ್ಲ. ಈ ಪರಮಾರ್ಥವನ್ನರಿತವನೇ ಸರ್ವಜ್ಞನೆಂಬುದು ನಿಶ್ಚಿತವಾದದ್ದು. ಅವನೇ ಪರಮಾರ್ಥವಿತ್. ಆತ್ಮನು **'ಅಸ್ತಿ'** ಎಂಬ ವಾದ ಸರಣಿಗೂ ನಿಲುಕುವುದಿಲ್ಲ. **''ಸ ಏಷನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇ''** (ಬೃಹ: ೩–೯–೨೬)

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಎಂಬ ವಚನದ ಪ್ರಕಾರ ಷಡ್ಗುಣೈಶ್ವರ್ಯ ಸಂಪನ್ನನಾದವನೇ ಭಗವಾನ್ ಎನ್ನಿಸುತ್ತಾನೆ. ನಿರ್ಗುಣನೂ ನಿರ್ವಿಶೇಷನೂ ಆದ ಅದ್ವಯಾತ್ಮನನ್ನು ಇಲ್ಲಿ 'ಭಗವಾನ್' ಎಂದು ಹೇಳಿರುವುದು ಲೋಕವ್ಯವಹಾರವನ್ನನುಸರಿಸಿ ಎಂದು ತಿಳಿಯಬೇಕು. ಪೂಜಾರ್ಥವಾಗಿ ಪರಮಾತ್ಮನು ಸಗುಣನಾಗಿಯೂ ತೋರುತ್ತಾನೆ.

**ಅಶಬ್ದಗೋಚರಸ್ಯಾಪಿ ತಸ್ಯ ವೈ ಬ್ರಹ್ಮಣೋ ದ್ವಿಜ ।**
**ಪೂಜಾಯಾಂ ಭಗವಚ್ಛಬ್ದಃ ಕ್ರಿಯತೇ ಹ್ಯುಪಚಾರತಃ ॥**

ಎಂದು ವಿಷ್ಣು ಪುರಾಣದಲ್ಲಿದೆ (೬–೫–೭೧).

**ಪ್ರಾಪ್ಯ ಸರ್ವಜ್ಞತಾಂ ಕೃತ್ಸ್ನಾಂ ಬ್ರಾಹ್ಮಣ್ಯಂ ಪದಮದ್ವಯಮ್ ।**
**ಅನಾಪನ್ನಾದಿಮಧ್ಯಾಂತಂ ಕಿಮತಃ ಪರಮೀಹತೇ ॥೮೫॥**

ಈ ಪ್ರಕಾರವಾಗಿ, **ಕೃತ್ಸ್ನಾಂ** = ಸಮಗ್ರವಾದ, **ಸರ್ವಜ್ಞತಾಂ** = ಸರ್ವಜ್ಞತ್ವವನ್ನೂ, **ಅದ್ವಯಂ** = ಅದ್ವಿತೀಯವಾದ, **ಬ್ರಾಹ್ಮಣ್ಯಂ** = ಪರಮೋತ್ತಮ

ಬ್ರಾಹ್ಮಣ್ಯವನ್ನೂ, **ಅನಾಪನ್ನಾದಿಮಧ್ಯಾಂತಾಂ** = ಉತ್ಪತ್ತಿ–ಸ್ಥಿತಿ–ಲಯಗಳಿಲ್ಲದಿರುವ, **ಪದಂ** = ಸ್ವಸ್ವರೂಪವನ್ನು, **ಪ್ರಾಪ್ಯ** = ಪಡೆದಮೇಲೆ, **ಅತಃಪರಂ** = ಇದಕ್ಕೆ ಮುಂದೆ, **ಕಿಮೀಹತೇ?** = ಮನುಷ್ಯನು ಏಕೆ ಇನ್ನೊಂದು ಕಾರ್ಯದಲ್ಲಿ ತೊಡಗುತ್ತಾನೆ?

**ಈಹತೇ** = ಚೇಷ್ಟತೇ ಎಂಬ ಅರ್ಥವಲ್ಲದೆ ಇಚ್ಛತಿ ಎಂಬ ಅರ್ಥವೂ ಇದೆ. ಆಗ, **ಅತಃ ಪರಂ** = ಇದಕ್ಕೆ ಅಧಿಕವಾದ, **ಕಿಂ** = ಯಾವುದನ್ನು, **ಈಹತೇ** = ಇಚ್ಛಿಸುತ್ತಾನೆ? – ಎಂದೂ ಅರ್ಥಹೇಳಬಹುದು. ಅಧಿಕವಾದದ್ದು ಯಾವುದೂ ಇಲ್ಲ.

೧. **ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ** (ಬೃಹ. ೩–೮–೯)

೨. **ಆತ್ಮಾನಂ ಚೇದ್ವಿಜಾನೀಯಾತ್ ಅಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯ ಕಾಮಾಯ ಶರೀರ ಮನುಸಂಜ್ವರೇತ್ ॥**
(ಬೃಹ. ೪–೪–೧೨)

೩. **ಆತ್ಮಲಾಭಾನ್ನ ಪರಂ ವಿದ್ಯತೇ** (ಆಪ., ಧ. ಸೂತ್ರ)

**ವಿಪ್ರಾಣಾಂ ವಿನಯೋ ಹ್ಯೇಷ ಶಮಃ ಪ್ರಾಕೃತ ಉಚ್ಯತೇ ।**
**ದಮಃ ಪ್ರಕೃತಿದಾಂತತ್ವಾದೇವಂ ವಿದ್ವಾನ್ ಶಮಂ ವ್ರಜೇತ್॥೮೬॥**

**ಏಷಃ** = ಬ್ರಹ್ಮಸ್ವರೂಪವಾಗಿರುವ ಈ ಸ್ಥಿತಿಯು **ವಿಪ್ರಾಣಾಂ** = ಬ್ರಹ್ಮಜ್ಞಾನಿಗಳಾದ ವಿಪ್ರರಿಗೆ, **ವಿನಯಃ** = ಸಹಜವಾದ ನಮ್ರತೆಯಾಗಿರುತ್ತದೆ. **ಶಮಃ** = ಮನೋನಿಗ್ರಹವಾದ ಶಮವೂ ಸಹ **ಪ್ರಾಕೃತಃ** = ಸ್ವಾಭಾವಿಕವಾದದ್ದೆಂದು, **ಉಚ್ಯತೇ** = ಹೇಳಲ್ಪಡುತ್ತದೆ. **ಪ್ರಕೃತಿದಾಂತತ್ವಾತ್** = ಸಹಜವಾಗಿ ಬಹಿರಿಂದ್ರಿಯನಿಗ್ರಹವಾಗಿರುವುದರಿಂದ, **ದಮಃ** = ದಮವೂ ಸ್ವತಃ ಪ್ರಾಪ್ತವಾಗಿರುತ್ತದೆ, **ಏವಂ** = ಸ್ವಾಭಾವಿಕವಾಗಿ ಉಪಶಾಂತವಾದ ಬ್ರಹ್ಮವನ್ನು ವಿದ್ವಾನ್ ತಿಳಿದವನು, **ಶಮಂ ವ್ರಜೇತ್** = ಸ್ವಾಭಾವಿಕವಾದ ಶಮಗುಣವನ್ನು ಪಡೆದಿರುತ್ತಾನೆ.

ಬ್ರಹ್ಮಜ್ಞನು ಶಮದಮಾದಿಗುಣಗಳನ್ನು ಪಡೆಯಲು ಏನನ್ನೂ ಮಾಡಬೇಕಾಗಿಲ್ಲ, ಸ್ವಾಭಾವಿಕವಾಗಿಯೇ ಅವು ಪ್ರಾಪ್ತವಾಗುವುದರಿಂದ ಅವನು ಬ್ರಹ್ಮಸ್ವರೂಪನಾಗಿ ಇದ್ದುಬಿಡುತ್ತಾನೆ ಎಂದು ಅಭಿಪ್ರಾಯ. ಹಿಂದೆ ಹೇಳಿದಂತೆ ದ್ವೈತ ದರ್ಶನಗಳೆಲ್ಲವೂ ಖಂಡನಮಂಡನೆಗಳಲ್ಲಿ ತೊಡಗಿ ರಾಗದ್ವೇಷಾದಿ

ದೋಷಗಳಿಗೆ ಕಾರಣಗಳಾಗಿವೆ. ವೇದಾಂತ ದರ್ಶನಕ್ಕೆ ವಿರುದ್ಧಗಳಾದ್ದರಿಂದ ಅವೆಲ್ಲವೂ ಮಿಥ್ಯಾದರ್ಶನಗಳೆಂದೂ ಅದ್ವೈತ ದರ್ಶನವೇ ವೇದಸಂಮತವಾದ ಸಮ್ಯಗ್ ದರ್ಶನವೆಂದೂ ಇದುವರೆಗೆ ಉಪಪಾದಿಸಿದ್ದಾಯಿತು. ಈಗ ಶ್ರೀಗೌಡಪಾದಚಾರ್ಯರು ತಮ್ಮ ಪ್ರಕ್ರಿಯೆಯಾದ ಅವಸ್ಥಾತ್ರಯ ಪರಿಶೋಧನೆ ಯಿಂದ ಆತ್ಮತತ್ತ್ವವನ್ನು ಉಪದೇಶಿಸಲು ಉದ್ಯುಕ್ತರಾಗಿದ್ದಾರೆ. ಇದು ಸಾರ್ವತ್ರಿಕ ಅನುಭವ ಸಿದ್ಧವೂ ಉಪನಿಷತ್ ಪ್ರತಿಪಾದ್ಯವೂ ಆದದ್ದು. ಈ ಪ್ರಕ್ರಿಯೆಯಲ್ಲಿ ಕಲ್ಪಿತಯುಕ್ತಿಗಳಾಗಲಿ, ಪ್ರಧಾನ ಪರಮಾಣು ಮುಂತಾದುದರ ಸುಳಿವಾಗಲಿ ಇರುವುದಿಲ್ಲ.

**ಸವಸ್ತು ಸೋಪಲಂಭಂ ಚ ದ್ವಯಂ ಲೌಕಿಕಮಿಷ್ಯತೇ ।**
**ಅವಸ್ತು ಸೋಪಲಂಭಂ ಚ ಶುದ್ಧಂ ಲೌಕಿಕಮಿಷ್ಯತೇ ॥೮೭॥**

**ಸವಸ್ತು** = ಸಂವೃತವಸ್ತುಗಳಿಂದ ಸಹಿತವಾಗಿ, **ಸೋಪಲಂಭಂ** = ಇಂದ್ರಿಯಗಳಿಂದ ಉಪಲಬ್ಧವಾಗತಕ್ಕ, **ದ್ವಯಂ** = ದ್ವೈತವು, **ಲೌಕಿಕಂ** = ಲೋಕಸಿದ್ಧವಾದ ಜಾಗರಿತವೆಂದು, **ಇಷ್ಯತೇ** = ವೇದಾಂತಸಂಮತವಾಗಿದೆ. **ಅವಸ್ತು** = ಸಂವೃತಿಯು ಇಲ್ಲದಿದ್ದರೂ, **ಸೋಪಲಂಭಂ** = ವಸ್ತುವಿರುವಂತೆ ಮನಸ್ಸಿಗೆ ಉಪಲಬ್ಧವಾಗುವ (ದ್ವಯಂ) = ದ್ವೈತವು, **ಶುದ್ಧಂ ಲೌಕಿಕಂ** = ಕೇವಲ ಲೌಕಿಕವಾದ ಸ್ವಪ್ನವೆಂದು **ಇಷ್ಯತೇ** = ವೇದಾಂತಸಂಮತವಾಗಿದೆ.

ಸಂವೃತಿಯೆಂದರೆ ಅವಿದ್ಯಾವಿಷಯವಾದ ಲೋಕವ್ಯವಹಾರ. ಜಾಗ್ರತ್ತಿನಲ್ಲಿ ಕಾಣುವ ಸಕಲವಸ್ತುಗಳೂ ಸಂವೃತಿಯಿಂದ ಆಗತಕ್ಕವು. ಗುರು, ಶಿಷ್ಯ, ಶಾಸ್ತ್ರ – ಮುಂತಾದ ದ್ವೈತ ವ್ಯವಹಾರವು ನಡೆಯಲು ಇವೆಲ್ಲವೂ ಈಶ್ವರೇಚ್ಛೆಯಂತೆ ಕಲ್ಪಿತವಾಗಿವೆ. ಇದೆಲ್ಲವೂ ವ್ಯಾವಹಾರಿಕ ಸತ್ಯವೆಂದು ತಿಳಿಯಬೇಕು. ಮನುಷ್ಯನು ವ್ಯವಹಾರದಲ್ಲಿರುವವರೆಗೆ ಇವು ಸತ್ಯಗಳೇ. ಆದ್ದರಿಂದ ಧರ್ಮಶಾಸ್ತ್ರ ಮುಂತಾದ ವೆಲ್ಲವೂ ಸಾರ್ಥಕಗಳಾಗುತ್ತವೆ. ಈ ವಸ್ತುಗಳು ದೇಶಕಾಲ ವ್ಯಕ್ತಿಭೇದಗಳಿಲ್ಲದೆ ಲೋಕದಲ್ಲಿ ಏಕರೂಪವಾಗಿ ಪ್ರಸಿದ್ಧವಾದವು. ಇವು ಮನಸ್ಸಿಗೂ ಇಂದ್ರಿಯ ಗಳಿಗೂ ಒಂದೇ ಬಗೆಯಲ್ಲಿ ಸರ್ವದಾ ಸರ್ವರಿಗೂ ಗೋಚರಿಸುತ್ತವೆ.

ಸ್ವಪ್ನದಲ್ಲಾದರೋ ಈ ಸಂವೃತಿಯ ವಸ್ತುಗಳೂ ಇರುವುದಿಲ್ಲ. ಮನಸ್ಸಿನ ವಿಕಲ್ಪಗಳಾಗಿ ಕನಸು ಕಾಣತಕ್ಕವನಿಗೆ ಮಾತ್ರ ಗೋಚರಿಸುತ್ತವೆ. ಇತರರಿಗೆ ಅವು ಇನ್ನೊಂದು ಬಗೆಯಲ್ಲಿ ತೋರಬಹುದು. ಇಂದ್ರಿಯಗಳು ಸುಪ್ತವಾಗಿರುವುದರಿಂದ ನೇತ್ರಾದಿ ಇಂದ್ರಿಯಗಳಿಗೆ ಇವು ವಿಷಯಗಳಲ್ಲ. ವ್ಯವಹಾರಕ್ಕೆ ಈ ವಸ್ತುಗಳು ಬರತಕ್ಕವೂ ಅಲ್ಲ. ಕನಸಿನಲ್ಲಿ ಕಾಣುವುದನ್ನು ಪ್ರಾತಿಭಾಸಿಕ ಸತ್ಯವೆನ್ನುತ್ತಾರೆ.

**ಅವಸ್ತ್ವನುಪಲಂಭಂ ಚ ಲೋಕೋತ್ತರಮಿತಿ ಸ್ಮೃತಮ್ ।**
**ಜ್ಞಾನಂ ಜ್ಞೇಯಂ ಚ ವಿಜ್ಞೇಯಂ ಸದಾ ಬುದ್ಧೈಃ ಪ್ರಕೀರ್ತಿತಮ್॥೮೮॥**

**ಅವಸ್ತು** = ಯಾವ ಬಗೆಯ ವಸ್ತುವೂ ಇಲ್ಲದ್ದೂ, **ಅನುಪಲಂಭಂ** = ಆದ್ದರಿಂದಲೇ ಉಪಲಬ್ಧಿಯಿಲ್ಲದ್ದೂ ಆಗಿರುವುದು, **ಲೋಕೋತ್ತರಮಿತಿ** = ಲೋಕಾತೀತವಾದ ಸುಷುಪ್ತಿಯೆಂದು, **ಸ್ಮೃತಂ** = ಶಾಸ್ತ್ರದಲ್ಲಿ ಸ್ಮೃತವಾಗಿದೆ. **ಜ್ಞಾನಂ** = ಈ ಮೂರು ಅವಸ್ಥೆಗಳ ಜ್ಞಾನ, **ಜ್ಞೇಯ** = ಜ್ಞಾನಗೋಚರವಾಗುವ ಈ ಮೂರು ಅವಸ್ಥೆಗಳು, **ವಿಜ್ಞೇಯ** = ಪರಮಾರ್ಥ ಸತ್ಯವಾದ ಆತ್ಮತತ್ತ್ವವೆಂಬ ವಿಜ್ಞೇಯ – ಇವು ನಾಲ್ಕು, **ಸದಾ** = ಸರ್ವದಾ, **ಬುದ್ಧೈಃ** = ಬ್ರಹ್ಮವಿದರಿಂದ, **ಪ್ರಕೀರ್ತಿತಂ** = ಉಕ್ತವಾಗಿವೆ.

ಜಾಗ್ರತ್ತಿನಲ್ಲಿ ಗ್ರಾಹ್ಯವಾದ (ಜ್ಞಾನ ಗೋಚರವಾದ) ಬಾಹ್ಯವಸ್ತು ಇರುತ್ತದೆ. ಸ್ವಪ್ನದಲ್ಲಿ ಮನಃ ಕಲ್ಪಿತವಾದ ವಸ್ತುಸದೃಶವು ಗ್ರಾಹ್ಯವಾಗಿರುತ್ತದೆ. ಜಾಗ್ರತ್ತಿನಲ್ಲಿ ಮನಸ್ಸು ಮತ್ತು ಇಂದ್ರಿಯಗಳು ವಸ್ತುಗಳನ್ನು ತಿಳಿಯುವ ಗ್ರಾಹಕಗಳು. ಸ್ವಪ್ನದಲ್ಲಿ ಮನಸ್ಸು ಮಾತ್ರವೇ ಗ್ರಾಹಕ. ಹೀಗೆ ಗ್ರಾಹ್ಯಗ್ರಾಹಕಗಳಿರುವುದೇ ಲೋಕ. ಸುಷುಪ್ತಿಯಲ್ಲಿ ಗ್ರಾಹ್ಯವೂ ಇಲ್ಲ, ಗ್ರಾಹಕವೂ ಇಲ್ಲ. ಆದ್ದರಿಂದ ಸುಷುಪ್ತಿಯು ಲೋಕೋತ್ತರ – ಲೋಕಾತೀತವೆನಿಸುತ್ತದೆ. ಸುಷುಪ್ತಿಯಲ್ಲಿ ಬುದ್ಧಿಯು ಸುಪ್ತವಾಗಿದ್ದು, ಯಾವ ಪ್ರವೃತ್ತಿಯೂ ಇಲ್ಲದೆ ಬೀಜದಂತಿರುತ್ತದೆ. ಸ್ವಪ್ನದಲ್ಲಿ ಚಿಗುರಿ, ಜಾಗ್ರತ್ತಿನಲ್ಲಿ ಕವಲೊಡೆದು ಜ್ಞೇಯ ವಸ್ತುಗಳ ವಿಷಯದಲ್ಲಿ ಪ್ರವರ್ತಿಸುತ್ತದೆ. ಆದ್ದರಿಂದ ಸುಷುಪ್ತಿಯನ್ನು ಸರ್ವಪ್ರವೃತ್ತಿ ಬೀಜವೆನ್ನುತ್ತಾರೆ.

ತಾರ್ಕಿಕಾದಿಗಳ ವಿಚಾರಗಳೆಲ್ಲವೂ ಈ ಅವಸ್ಥಾತ್ರಯದ ಮತ್ತು ಅದರ ಜ್ಞಾನದ ಒಳಗಿನವು. ಅವರ ತರ್ಕಗಳೆಲ್ಲವೂ ಈ ಮೂರಕ್ಕೆ ಸೀಮಿತವಾಗಿವೆ. ಈ ಮೂರು ಅವಸ್ಥೆಗಳನ್ನು ಮೀರಿದ ತುರೀಯ ಒಂದಿದೆ ಎಂಬುದು ಅವರ ಗಮನಕ್ಕೇ ಬಂದಿಲ್ಲ. ತುರೀಯವಾದ ಈ ಅದ್ವಯಾತ್ಮತತ್ವವು ವಿಶೇಷೇಣ ಜ್ಞೇಯವಾದ್ದರಿಂದ ವಿಜ್ಞೇಯವೆನಿಸಿದೆ. ಇದೇ ವೇದಾಂತ ಪ್ರತಿಪಾದ್ಯವಾದದ್ದು. ಉಳಿದವೆಲ್ಲವೂ ಕೇವಲ ಜ್ಞೇಯಗಳು. ಜ್ಞಾನವೆಂದರೆ ಅವಸ್ಥಾತ್ರಯದ ಪರೀಕ್ಷೆಯು ತುರೀಯ ವನ್ನರಿಯಲು ಉಪಾಯವೆಂಬ ಜ್ಞಾನ.

**ಜ್ಞಾನೇ ಚ ತ್ರಿವಿಧೇ ಜ್ಞೇಯೇ ಕ್ರಮೇಣ ವಿದಿತೇ ಸ್ವಯಮ್ ।**
**ಸರ್ವಜ್ಞತಾ ಚ ಸರ್ವತ್ರ ಭವತೀಹ ಮಹಾಧಿಯಃ ॥೮೯॥**

**ಜ್ಞಾನೇ** = ಅವಸ್ಥಾತ್ರಯದ ಜ್ಞಾನ, **ತ್ರಿವಿಧೇ ಜ್ಞೇಯೇ** = ಮೂರು ವಿಧ ವಾದ ಅವಸ್ಥಾತ್ರಯವೆಂಬ ಜ್ಞೇಯ ಇವುಗಳ ಕ್ರಮದಿಂದ, **ವಿದಿತೇ** =

ತುರೀಯವಾದ ಅದ್ವಯಾತ್ಮವು ಜ್ಞಾತವಾಗಲು, **ಸ್ವಯಂ** = ತಾನಾಗಿಯೇ, **ಇಹ**= ಈ ಲೋಕದಲ್ಲಿಯೇ, **ಸರ್ವತ್ರ** = ಸರ್ವದಾ, **ಮಹಾಧಿಯಃ** = ಆತ್ಮತತ್ತ್ವ ವನ್ನರಿತ ಆ ಮಹಾ ಬುದ್ಧಿಶಾಲಿಗೆ, **ಸರ್ವಜ್ಞತಾ** = ಸರ್ವತ್ವವೂ, ಸರ್ವಜ್ಞತ್ವವೂ, **ಭವತಿ** = ಬರುತ್ತದೆ.

ಇಲ್ಲಿ ಅವಸ್ಥಾತ್ರಯದ ಜ್ಞಾನವನ್ನು ತಿಳಿಯುವುದೆಂದರೆ ಅವಸ್ಥಾತ್ರಯದ ಜ್ಞಾನವು ತುರೀಯವನ್ನರಿಯಲು ಉಪಾಯ ಎಂಬುದನ್ನು ತಿಳಿಯುವುದು. ಆಮೇಲೆ ಅವಸ್ಥಾತ್ರಯದ ಸ್ವರೂಪವೇನೆಂಬುದನ್ನು ಜಾಗ್ರತ್, ಸ್ವಪ್ನ, ಸುಷುಪ್ತಿಗಳ ಕ್ರಮದಿಂದ ತಿಳಿಯುವುದು. ಆಮೇಲೆ ಈ ಅವಸ್ಥಾತ್ರಯವನ್ನು ದಾಟಿದ ತುರೀಯಾತ್ಮನನ್ನರಿಯುವುದು.

೧. **ಜಾಗರಿತ** = ಗ್ರಾಹ್ಯಗ್ರಾಹಕ ಭಾವವಿರುವುದರಿಂದ ಇದು ಲೌಕಿಕ. ಇದರಲ್ಲಿ ತೋರುವ ವಸ್ತುಗಳು ಮಾಯಿಕಗಳಾದರೂ ಬಾಹ್ಯೇಂದ್ರಿಯಗಳಿಗೆ ಗೋಚರವಾಗುವುದರಿಂದಲೂ ಸರ್ವರಿಗೂ ಏಕಪ್ರಕಾರವಾಗಿ ಸರ್ವಕಾಲದಲ್ಲಿ ಗೋಚರಿಸುವುದರಿಂದಲೂ, ಶಾಸ್ತ್ರವ್ಯವಹಾರಕ್ಕೆ ವಿಷಯವಾಗಿ ವ್ಯಾವಹಾರಿಕ ಸತ್ಯವಾದ್ದರಿಂದಲೂ ಇದು ಸ್ಥೂಲ ಲೌಕಿಕವೆನಿಸುತ್ತದೆ.

೨. **ಸ್ವಪ್ನ** = ಎಲ್ಲರಿಗೂ ಕನಸು ಬೀಳುವುದರಿಂದ ಇದು ಲೌಕಿಕ. ಇದರಲ್ಲಿಯೂ ಗ್ರಾಹ್ಯ ಗ್ರಾಹಕ ಭಾವವಿದೆ. ಕನಸಿನ ವಸ್ತುಗಳು ಆಯಾ ಕನಸು ಕಾಣತಕ್ಕವನಿಗೆ ಮಾತ್ರ ಗೋಚರ. ಸರ್ವರಿಗೂ ಏಕ ಪ್ರಕಾರವಾಗಿ ಏಕಕಾಲದಲ್ಲಿ ಕನಸು ಬೀಳುವುದಿಲ್ಲ. ಈ ಕನಸಿನ ವಸ್ತುಗಳು ವ್ಯವಹಾರಕ್ಕೆ ಬರತಕ್ಕವಲ್ಲ. ಇದು ಕೇವಲ ಪ್ರಾತಿಭಾಸಿಕ. ಆದ್ದರಿಂದ ಸ್ವಪ್ನಾವಸ್ಥೆಯು ಶುದ್ಧಲೌಕಿಕ. ಜಾಗರಿತಕ್ಕಿಂತ ಸೂಕ್ಷ್ಮವಾದದ್ದು.

೩. **ಸುಷುಪ್ತಿ** = ಇದರಲ್ಲಿ ಯಾವುದೂ ಗೋಚರಿಸುವುದಿಲ್ಲವಾದ್ದರಿಂದ ಗ್ರಾಹ್ಯಗ್ರಾಹಕಭಾವವಿಲ್ಲ. ಆದ್ದರಿಂದಲೇ ಇದು ಲೋಕೋತ್ತರವೆನಿಸಿದೆ. ಗ್ರಾಹ್ಯ ಗ್ರಾಹಕಭಾವವಿರುವುದೇ ಲೋಕದ ಲಕ್ಷಣ.

ಈ ಮೂರು ಅವಸ್ಥೆಗಳಲ್ಲಿ ಇದ್ದ ಆತ್ಮನೇ ಅವಸ್ಥೆಗಳ ಅಂಟು ಇಲ್ಲದೆ ಶುದ್ಧನೂ ನಿರ್ಲೇಪನೂ ಆಗಿರತಕ್ಕವನು ತುರೀಯಾತ್ಮನೆನಿಸಿಕೊಳ್ಳುತ್ತಾನೆ. ಅದ್ವಯಾತ್ಮನೆಂದರೂ ಈತನೇ. ಈತನೇ ನಾನು, ನಾನೇ ಈತನು – ಎಂದು ತಿಳಿದವನು ಬ್ರಹ್ಮವಿತ್.

**ಹೇಯಜ್ಞೇಯಾಪ್ಯಪಾಕ್ಯಾನಿ ವಿಜ್ಞೇಯಾನ್ಯಗ್ರಯಾಣತಃ ।**
**ತೇಷಾಮನ್ಯತ್ರ ವಿಜ್ಞೇಯಾದುಪಲಂಭಸ್ತ್ರಿಷು ಸ್ಮೃತಃ ॥೯೦॥**

**ಹೇಯಜ್ಞೇಯಾಪ್ಯಪಾಕ್ಯಾನಿ = ಹೇಯ**–ಜಾಗರಿತ ಸ್ವಪ್ನ = ಸುಷುಪ್ತಿಗಳೆಂಬ ಅವಸ್ಥಾತ್ರಯವು ಆತ್ಮನಿಗಿಲ್ಲವಾದ್ದರಿಂದ ತ್ಯಾಜ್ಯವಾದವುಗಳು, **ಜ್ಞೇಯ** = ಜ್ಞೇಯವಾದದ್ದು ಪರಮಾರ್ಥತತ್ತ್ವ **ಆಪ್ಯ** – ಪಾಂಡಿತ್ಯ, ಬಾಲ್ಯ, ಮೌನ ಎಂಬ ಸಾಧನಗಳು ಪಡೆಯಬೇಕಾದವು. **ಪಾಕ್ಯಾನಿ** – ರಾಗ, ದ್ವೇಷ, ಮೋಹಾದಿದೋಷಗಳು ಪಕ್ತವ್ಯಗಳು – ಎಂದರೆ – ಕ್ರಮವಾಗಿ ನಾಶಗೊಳಿಸಬೇಕಾದವು ಎಂದು, **ಅಗ್ರಯಾಣತಃ** = ಮುಮುಕ್ಷುವಿನಿಂದ ಪ್ರಥಮದಲ್ಲಿ **ವಿಜ್ಞೇಯಾನಿ** = ತಿಳಿಯಬೇಕಾದವು. **ತೇಷಾಂ** = ಹೇಯಾದಿಗಳ ಮಧ್ಯದಲ್ಲಿ, **ವಿಜ್ಞೇಯಾತ್** = ಪರಮಾರ್ಥ ಸತ್ಯವಾದ ಬ್ರಹ್ಮವೊಂದನ್ನು ಬಿಟ್ಟು, **ಅನ್ಯತ್ರ** = ಉಳಿದ, **ತ್ರಿಷು** = ಹೇಯ ಆಪ್ಯ ಪಾಕ್ಯಗಳೆಂಬ ಮೂರರಲ್ಲಿ, **ಉಪಲಂಭಃ** = ಅವಿದ್ಯಾಕಲ್ಪಿತವಾದ ಉಪಲಬ್ಧಿಯುಂಟೆಂದು, **ಸ್ಮೃತಃ** = ಬ್ರಹ್ಮಜ್ಞಾನಿಗಳಿಂದ ಸ್ಮೃತವಾಗಿದೆ.

ಹಿಂದಿನ ಶ್ಲೋಕಗಳಲ್ಲಿ ಅವಸ್ಥಾತ್ರಯವು ಜ್ಞೇಯವೆಂದು ಉಕ್ತವಾಗಿದೆ. ಹಾಗಾದರೆ ಅವಸ್ಥಾತ್ರಯವು ಸತ್ಯವಾಗಿ ಇದೆಯೆಂಬ ಶಂಕೆ ಬಂದೀತು. ಆ ಶಂಕೆಯನ್ನು ಹೋಗಲಾಡಿಸಿ ಅವಸ್ಥಾತ್ರಯವು ಪರಮಾರ್ಥ ಸತ್ಯವಾದ್ದಲ್ಲವೆಂದು ತಿಳಿಸುವುದಕ್ಕಾಗಿ ಈ ಶ್ಲೋಕವು ಬಂದಿದೆ. ಅವಸ್ಥಾತ್ರಯವು ತ್ಯಾಜ್ಯವೆಂದರೆ, ಅದು ಸತ್ಯವೆಂಬ ಬುದ್ಧಿಯನ್ನು ತ್ಯಜಿಸಬೇಕು ಎಂದರ್ಥ. ಹಗ್ಗದಲ್ಲಿ ಹಾವು ಎಂಬ ಬುದ್ಧಿಯನ್ನು ತ್ಯಜಿಸಿದಂತೆ ಇದು.

ಪಾಂಡಿತ್ಯ, ಬಾಲ್ಯ, ಮೌನಗಳು ಬ್ರಹ್ಮವಿದ್ಯೆಗೆ ಸಾಧನಗಳು. ಪಾಂಡಿತ್ಯ = ವೇದಾಂತ ಶಾಸ್ತ್ರ ಪಾಂಡಿತ್ಯ, ಬಾಲ್ಯ = ದಂಭ ದರ್ಪಾದಿಗಳನ್ನು ತ್ಯಜಿಸಿ ಬಾಲಕರಂತೆ ಇರುವುದು. **ಮೌನ = ಮುನೇಃ ಕರ್ಮ ಮೌನಂ** = ಜ್ಞಾನಾಭ್ಯಾಸ, ನಿದಿಧ್ಯಾಸನ. **''ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್। ಬಾಲ್ಯ ಚ ಪಾಂಡಿತ್ಯಂ ಚ ನಿರ್ವಿದ್ಯ ಮುನಿಃ''** (ಬೃಹ. ೩–೫–೧). **ನಿರ್ವಿದ್ಯ** = ತ್ಯಜಿಸಿ ಎಂದರ್ಥ.

**ಪ್ರಕೃತ್ಯಾಽಽಕಾಶವಜ್ಞೇಯಾಃ ಸರ್ವೇ ಧರ್ಮಾ ಅನಾದಯಃ।**
**ವಿದ್ಯತೇ ನ ಹಿ ನಾನಾತ್ವಂ ತೇಷಾಂ ಕ್ವಚನ ಕಿಂಚನ ॥೯೧॥**

**ಸರ್ವೇ ಧರ್ಮಾಃ** = ಸಕಲ ಆತ್ಮಗಳೂ, **ಪ್ರಕೃತ್ಯಾ** = ಸ್ವಾಭಾವಿಕವಾಗಿ, **ಆಕಾಶವತ್** = ಆಕಾಶದಂತೆ ಸೂಕ್ಷ್ಮಗಳು ನಿಂಜನಗಳು ವಿಭುಗಳು ಎಂದೂ, **ಅನಾದಯಃ** = ನಿತ್ಯವಾದವುಗಳೆಂದೂ, **ಜ್ಞೇಯಾಃ** = ಮುಮುಕ್ಷುಗಳಿಂದ ತಿಳಿಯಲ್ಪಡಬೇಕು. **ತೇಷಾಂ** = ಆ ಜೀವಾತ್ಮಗಳಿಗೆ, **ಕ್ವಚನ** = ಎಲ್ಲಿಯೂ, **ಕಿಂಚನ** = ಚಿಕ್ಕ ಅಣುವಿನಷ್ಟೂ ಸಹ, **ನಾನಾತ್ವಂ** = ಅನೇಕತ್ವವು, **ನ ಹಿ ವಿದ್ಯತೇ** = ಇರುವುದಿಲ್ಲ.

ಚತುಷ್ಕೋಟಿವಿಮುಕ್ತವಾದದ್ದು ಪರಮಾರ್ಥತತ್ತ್ವವೆಂದು ಹೇಳಲಾಯಿತಷ್ಟೆ. ಅನಂತರ ಜಾಗರಿತಾದ್ಯವಸ್ಥಾಭೇದಗಳೂ ಅವುಗಳಲ್ಲಿ ಉಪಲಬ್ಧನಾಗುವ ವಿಶ್ವ, ತೈಜಸ, ಪ್ರಾಜ್ಞರ ವಿಷಯಗಳೂ ಹಿಂದೆ ಪ್ರಸ್ತುತವಾಗಿವೆ. ಈ ಚತುಷ್ಕೋಟಿಗಳಿಂದಾಗಲಿ, ಜಾಗರಿತಾದ್ಯವಸ್ಥೆಗಳಿಂದಾಗಲಿ, ವಿಶ್ವತೈಜಸಾದಿ ನಾಮ ಭೇದಗಳಿಂದಾಗಲಿ ಅನೇಕ ಜೀವಾತ್ಮರಿದ್ದಾರೆಂದು ತಿಳಿಯಬಾರದು. ಒಬ್ಬ ಆತ್ಮನಿಗೆ ಸ್ಥಾನಾದಿಭೇದಗಳಿಂದ ವಿಷಯವನ್ನು ಸ್ಫುಟಗೊಳಿಸುವುದಕ್ಕಾಗಿ ಸ್ಥಾನ ಭೇದಾದಿಗಳನ್ನು ತಿಳಿಸಿದೆ. ಪರಮಾರ್ಥ ಸತ್ಯವಾಗಿ ಒಬ್ಬನೇ ಆತ್ಮನಿದ್ದಾನೆ. ಜೀವಾತ್ಮ, ಪರಮಾತ್ಮ ಎಂಬ ಭೇದವೂ ಇಲ್ಲ. ಯಾವಕಾಲದಲ್ಲಿಯೂ ಭೇದವಿರುವುದಿಲ್ಲ. ತೋರುವ ಭೇದವೆಲ್ಲವೂ ಸಾಂವೃತಿಕವಾದದ್ದು. ಅವಿದ್ಯಾಕಲ್ಪಿತವಾದದ್ದು. ಮಿಥ್ಯೆ.

**ಟಿಪ್ಪಣಿ** : ಧರ್ಮ ಎಂಬ ಶಬ್ದವನ್ನು ಶ್ರೀ ಗೌಡಪಾದಾಚಾರ್ಯರು ಜೀವಾತ್ಮ ಬಾಹ್ಯಪದಾರ್ಥ – ಎಂಬ ಅರ್ಥಗಳಲ್ಲಿ ಬಳಸುತ್ತಾರೆ. ಪ್ರಕೃತಶ್ಲೋಕದಲ್ಲಿ ಆತ್ಮ ವಿಷಯವು ಪ್ರಕರಣ ವಶದಿಂದ ಬಂದಿದೆಯಾದ್ದರಿಂದ ಜೀವಾತ್ಮ ಎಂಬ ಅರ್ಥವನ್ನಿಲ್ಲಿ ಗ್ರಹಿಸಬೇಕು.

**ಆದಿಬುದ್ಧಾಃ ಪ್ರಕೃತ್ಯೈವ ಸರ್ವೇ ಧರ್ಮಾಃ ಸುನಿಶ್ಚಿತಾಃ ।**
**ಯಸ್ಯೈವಂ ಭವತಿ ಕ್ಷಾಂತಿಃ ಸೋಽಮೃತತ್ವಾಯ ಕಲ್ಪತೇ ॥೯೨॥**

**ಸರ್ವೇ ಧರ್ಮಾಃ** = ಎಲ್ಲ ಆತ್ಮರೂ, **ಪ್ರಕೃತ್ಯೈವ** = ಸಹಜವಾಗಿಯೇ, **ಆದಿಬುದ್ಧಾಃ** = ಸದಾ ಪ್ರಕಾಶಸ್ವರೂಪರೇ ಆಗಿರುತ್ತಾರೆ ಮತ್ತು **ಸುನಿಶ್ಚಿತಾಃ** = ನಿತ್ಯನಿಶ್ಚಿತಸ್ವರೂಪರೂ ಆಗಿರುತ್ತಾರೆ. **ಯಸ್ಯ** = ಯಾವ ಮುಮುಕ್ಷುವಿಗೆ, **ಏವಂ** = ಈ ಪ್ರಕಾರವಾಗಿ, **ಕ್ಷಾಂತಿಃ** = ಬೋಧ ನಿಶ್ಚಯ ರೂಪವಾದ ಶಾಂತಿಯು, **ಭವತಿ** = ಆಗುತ್ತದೆಯೋ, **ಸಃ** = ಆತನು, **ಅಮೃತತ್ವಾಯ** = ಅಮೃತ ಭಾವಕ್ಕೆ (ಮೋಕ್ಷಕ್ಕೆ), **ಕಲ್ಪತೇ** = ಅರ್ಹನಾಗುತ್ತಾನೆ.

ಹಿಂದಿನ ಕಾರಿಕೆಯಲ್ಲಿ, **ಆಕಾಶವತ್‌ಜ್ಞೇಯಾಃ**– ಎಂದು ಹೇಳಿದೆಯಷ್ಟೆ. ಆತ್ಮರು ಆಕಾಶದ ಹಾಗಿದ್ದಾರೆಂದು ತಿಳಿಯಬೇಕಾದದ್ದು ಸಂವೃತಿಯಿಂದಲೇ ಹೊರತು, ಪಾರಮಾರ್ಥಿಕವಾಗಿ ಮುಮುಕ್ಷುಗಳು ಹೊಸದಾಗಿ ತಿಳಿಯಬೇಕಾದ್ದಿಲ್ಲ. ಮುಮುಕ್ಷುಗಳೂ ಸಹ ಪಾರಮಾರ್ಥಿಕವಾಗಿ ಆದಿಬುದ್ಧರೇ ಆಗಿದ್ದಾರೆ. ಯಾವ ಸಂದೇಹವೂ ಇಲ್ಲದಂತೆ ಅವರು ನಿಶ್ಚಯದಿಂದ ತಿಳಿದು ಕೊಂಡವರೇ. ಆದರೆ ಅವಿದ್ಯೆಯ ಸೋಂಕಿನಿಂದ ಜೀವಾತ್ಮರ ಜ್ಞಾನವು ಮಾಸಿ ಹೋಗಿದೆ. ಸೂರ್ಯನು ಹೇಗೆ ನಿತ್ಯಪ್ರಕಾಶನೋ ಹಾಗೆಯೇ ಯಾವಾತನು ತಾನು ನಿತ್ಯಪ್ರಕಾಶನೆಂದೂ ನಿತ್ಯಬೋಧಸ್ವರೂಪನೆಂದೂ ತಿಳಿದು ನಿಶ್ಚಯಿಸಿಕೊಳ್ಳುತ್ತಾನೋ ಅವನು ಮುಕ್ತನೇ ಸರಿ.

**ಆದಿಶಾಂತಾ ಹ್ಯನುತ್ಪನ್ನಾಃ ಪ್ರಕೃತ್ಯೈವ ಸುನಿರ್ವೃತಾಃ ।**
**ಸರ್ವೇ ಧರ್ಮಾಃ ಸಮಾಭಿನ್ನಾ ಅಜಂ ಸಾಮ್ಯಂ ವಿಶಾರದಮ್ ॥೯೩॥**

**ಸರ್ವೇ ಧರ್ಮಾಃ** = ಎಲ್ಲ ಆತ್ಮರೂ, **ಪ್ರಕೃತ್ಯೈವ** = ಸಹಜವಾಗಿಯೇ **ಆದಿಶಾಂತಾಃ** = ಸದಾ ಶಾಂತಸ್ವರೂಪರೂ, **ಅನುತ್ಪನ್ನಾಃ** = ಉತ್ಪತ್ತಿ ಇಲ್ಲದೆ ನಿತ್ಯರೂ, **ಸುನಿರ್ವೃತಾಃ** = ನಿತ್ಯಾನಂದಸ್ವರೂಪರೂ ಆಗಿದ್ದಾರೆ. ಈ ಆತ್ಮರು, **ಸಮಾಭಿನ್ನಾಃ** = ಸಮಾಃ – ಎಲ್ಲ ವಿಧದಲ್ಲಿಯೂ ಸಮಾನರೂ, ಅಭಿನ್ನಾಃ – ವಸ್ತುತಃ ಭೇದವಿಲ್ಲದ ಅದ್ವಯರೂ ಆಗಿದ್ದಾರೆ. ಪರಮಾರ್ಥತತ್ತ್ವವು, **ಅಜಂ** = ನಿತ್ಯವೂ, **ಸಾಮ್ಯಂ** = ಶಾಂತವೂ, **ವಿಶಾರದಂ** = ಶುದ್ಧಜ್ಞಾನಸ್ವರೂಪವೂ ಆಗಿದೆ.

ಮುಮುಕ್ಷುವು ಹೊಸದಾಗಿ ಪೂರ್ವೋಕ್ತವಾದ 'ಕ್ಷಾಂತಿ'ಯನ್ನು ತನ್ನಲ್ಲಿ ತಂದುಕೊಳ್ಳಬೇಕಾದ್ದಿಲ್ಲ. ಸಕಲ ಜೀವಾತ್ಮರಿಗೂ ಆ ಬಗೆಯ 'ಕ್ಷಾಂತಿ'ಯು ಸದಾ ಇದ್ದೇ ಇರುತ್ತದೆ. ತಾನು ನಿತ್ಯಶುದ್ಧಬುದ್ಧಮುಕ್ತಸ್ವರೂಪನೆಂದು ತಿಳಿದುಕೊಂಡರೆ ಸಾಕಾಗುತ್ತದೆ. ಅಪೂರ್ವವಾದ ಮುಕ್ತಿಯು ಹೊಸದಾಗಿ ದೊರಕಬೇಕಾದದ್ದೂ ಇಲ್ಲ. ಸ್ವತಃ ಸದಾ ಮುಕ್ತನೇ ಆಗಿರುತ್ತಾನೆ.

**ವೈಶಾರದ್ಯಂ ತು ವೈ ನಾಸ್ತಿ ಭೇದೇ ವಿಚರತಾಂ ಸದಾ ।**
**ಭೇದನಿಮ್ನಾಃ ಪೃಥಗ್ವಾದಾಸ್ತಸ್ಮಾತ್ತೇ ಕೃಪಣಾಃ ಸ್ಮೃತಾಃ ॥೯೪॥**

**ಸದಾ** = ಯಾವಾಗಲೂ, **ಭೇದೇ** = ದ್ವೈತಮಾರ್ಗದಲ್ಲಿ, **ವಿಚರತಾಂ** = ಸಂಚರಿಸತಕ್ಕವರಿಗೆ, **ವೈಶಾರದ್ಯಂತು** = ಜ್ಞಾನ ಶುದ್ಧಿಯು **ನಾಸ್ತಿ ವೈ** = ಇಲ್ಲವೇ ಇಲ್ಲ, **ತೇ** = ಆ ಭೇದ ವಾದಿಗಳು, **ಪೃಥಗ್ ವಾದಾಃ** = ಆತ್ಮಗಳೂ ಪದಾರ್ಥಗಳೂ ಬೇರೆ ಬೇರೆಯಾಗಿ ಇವೆಯೆಂದು ವಾದಿಸತಕ್ಕವರಾಗಿ, **ಭೇದ ನಿಮ್ನಾಃ** = ದ್ವೈತದಲ್ಲಿ ಮುಳುಗಿ ಸಂಸಾರಿಗಳಾಗಿಯೇ ಇರುತ್ತಾರೆ. **ತಸ್ಮಾತ್** = ಆದ್ದರಿಂದ ಅವರು **ಕೃಪಣಾಃ** = ಕ್ಷುದ್ರರೆಂದು, **ಸ್ಮೃತಾಃ** = ಬ್ರಹ್ಮವಿದರಿಂದ ಸ್ಮೃತರಾಗಿರುತ್ತಾರೆ.

ಹಿಂದೆ ಹೇಳಿದಂತೆ ಪರಮಾರ್ಥತತ್ತ್ವವಾದ ಅದ್ವೈತವನ್ನು ತಿಳಿದು ನಂಬಿದವರು ಉತ್ತಮರು, ಭೇದವಾದಿಗಳು ಅಜ್ಞಾನಿಗಳು. ಅವರಿಗೆ ಜ್ಞಾನಶುದ್ಧಿಯಿಲ್ಲ, ದ್ವೈತವನ್ನು ನಂಬಿ ಅದನ್ನೇ ಹೇಳುತ್ತ ಸಂಸಾರ ಮಾರ್ಗದಲ್ಲಿ ತೊಳಲುತ್ತಲೇ ಇರುತ್ತಾರೆ.

**ಅಜೇ ಸಾಮ್ಯೇ ತು ಯೇ ಕೇಚಿದ್ ಭವಿಷ್ಯಂತಿ ಸುನಿಶ್ಚಿತಾಃ ।**
**ತೇ ಹಿ ಲೋಕೇ ಮಹಾಜ್ಞಾನಾಸ್ತಚ್ಚ ಲೋಕೋ ನ ಗಾಹತೇ ॥೯೫॥**

**ಅಜೇ ಸಾಮ್ಯೇ** = ನಿತ್ಯವೂ ಶಾಂತವೂ ಆದ ಪೂರ್ವೋಕ್ತಪರಮಾರ್ಥ ತತ್ತ್ವದಲ್ಲಿ, **ಯೇ ಕೇಚಿತ್** = ಲಿಂಗಜಾತಿಭೇದಗಳಿಲ್ಲದೆ ಯಾರೇ ಆಗಿರಲಿ, **ಸುನಿಶ್ಚಿತಾಃ** = ಅದ್ವಯಾತ್ಮವಾದ ಇದೇ ಸತ್ಯವೆಂದು ದೃಢನಿಶ್ಚಯವುಳ್ಳವರು, **ಭವಿಷ್ಯಂತಿ** = ಆಗಿರುತ್ತಾರೋ, **ತೇ** = ಅವರೇ, **ಲೋಕೇ** = ಲೋಕದಲ್ಲಿ, **ಮಹಾಜ್ಞಾನಾಃ** = ನಿರತಿಶಯ ತತ್ತ್ವಜ್ಞಾನಿಗಳು, **ತತ್** = ಅದರ ವಿಷಯವನ್ನು, **ಲೋಕಃ** = ಲೋಕದ ಜನರು, **ನ ಗಾಹತೇ** = ತಿಳಿಯಲಾರದೆ ಹೋಗಿದ್ದಾರೆ.

ಲೋಕದಲ್ಲಿ ಈ ರೀತಿಯ ತತ್ತ್ವಜ್ಞಾನಿಗಳು ದುರ್ಲಭ. ಎಲ್ಲಾದರೊಬ್ಬ ತತ್ತ್ವಜ್ಞಾನಿ ಇದ್ದರೆ ಜನರು ಅವನನ್ನು ಗುರುತಿಸಲಾರದೇ ಇದ್ದಾರೆ.

**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥** (ಗೀತಾ ೭–೩)

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ॥**
(ಗೀತಾ ೨–೬೨)

ಈ ಗೀತಾವಚನಗಳನ್ನು ಮನನ ಮಾಡಬೇಕು.

**ಅಜೇಷ್ವಜಮಸಂಕ್ರಾಂತಂ ಧರ್ಮೇಷು ಜ್ಞಾನಮಿಷ್ಯತೇ ।**
**ಯತೋ ನ ಕ್ರಮತೇ ಜ್ಞಾನಮಸಂಗಂ ತೇನ ಕೀರ್ತಿತಮ್ ॥೯೬॥**

**ಅಜೇಷು** = ಉತ್ಪತ್ತಿರಹಿತರಾದ, **ಧರ್ಮೇಷು** = ಜೀವಾತ್ಮರಲ್ಲಿ, **ಅಜಂ** = ನಿತ್ಯವಾದ, **ಜ್ಞಾನಂ** = ಜ್ಞಾನವು, **ಅಸಂಕ್ರಾಂತಂ** = ಚಲನ ರಹಿತವಾದದ್ದು ಎಂದು, **ಇಷ್ಯತೇ** = ನಮಗೆ ಸಂಮತವಾದದ್ದು. **ಯತಃ** = ಯಾವ ಕಾರಣ ದಿಂದ, **ಜ್ಞಾನಂ** = ಜ್ಞಾನವು, **ನ ಸಂಕ್ರಮತೇ** = ಚಲಿಸುವುದಿಲ್ಲವೋ, **ತೇನ** = ಆ ಕಾರಣದಿಂದ, **ಅಸಂಗಂ** = ಜ್ಞಾನವು ಸಂಗರಹಿತವೆಂದು, **ಕೀರ್ತಿತಂ** = ಉಕ್ತವಾಗಿರುತ್ತದೆ.

ಆತ್ಮಜ್ಞಾನಿಗಳು ಮಹಾಜ್ಞಾನರೆಂದು ಹೇಳಿದ್ದೀರಿ. ಜೀವಾತ್ಮನು ಜ್ಞಾತೃ, ಜ್ಞಾನವು ಮಹಾಜ್ಞಾನರಾಗುವುದಕ್ಕೆ ಸಾಧನ, ಪರಮಾತ್ಮನು ಜ್ಞೇಯ. ಹೀಗಿರುವಾಗ ಜ್ಞಾನವು ಜ್ಞಾತೃಜ್ಞೇಯಗಳಿಂದ ಪರಿಚ್ಛಿನ್ನವಾಯಿತು. ಜ್ಞೇಯವನ್ನು ತಿಳಿದಮೇಲೆ ಜೀವಾತ್ಮನು ಮಹಾಜ್ಞಾನನಾಗುತ್ತಾನೆ. ಅಲ್ಲಿಯವರೆಗೆ ಅಲ್ಪಜ್ಞಾನ ನಾಗಿರುತ್ತಾನೆಂದು ಸಿದ್ಧವಾಗುತ್ತದೆ. ಹೀಗಿರುವಾಗ ಜೀವರೆಲ್ಲರೂ ಮಹಾಜ್ಞಾನ ರಾಗುವುದು ಹೇಗೆ? ಇದಕ್ಕೆ ಉತ್ತರ ಹೀಗೆ–ಜ್ಞಾನವು ಎಂದೂ ಚಲಿಸುವುದಿಲ್ಲ. ಸೂರ್ಯಮಂಡಲದ ಉಷ್ಣತೆ, ಪ್ರಕಾಶಗಳು ಹೊರಗಿನಿಂದ ಬಂದವಲ್ಲ. ಅವು ಇನ್ನೊಬ್ಬ ಸೂರ್ಯನ ಬಳಿಗೆ ಹೋಗುವುದೂ ಇಲ್ಲ. ಹಾಗೆಯೇ ಜೀವಾತ್ಮನ ಜ್ಞಾನವು ಜ್ಞೇಯನಾದ ಪರಮಾತ್ಮನ ಬಳಿಗೆ ಹೋಗುವುದೂ ಇಲ್ಲ. ಅಲ್ಲಿಂದ ಬರಲೂ ಇಲ್ಲ.

ಜೀವಾತ್ಮರೆಲ್ಲರೂ ಪರಮಾತ್ಮನಿಗಿಂತ ಭಿನ್ನರಲ್ಲವಾದ್ದರಿಂದ ಅವರು ಯಾವಾಗಲೂ ಮಹಾಜ್ಞಾನರಾಗಿಯೇ ಇರುತ್ತಾರೆ. ಸೂರ್ಯನಿಗೆ ಮೋಡವು ಅಡ್ಡ ಬಂದಂತೆ ಅವಿದ್ಯೆಯು ಅಡ್ಡ ಬಂದಿರುವುದರಿಂದ ಆತ್ಮಜ್ಞಾನವಾಗಿಲ್ಲ ಎನ್ನುತ್ತೇವೆ. ಮೋಡವು ಸರಿದಂತೆ ಸೂರ್ಯನು ಪ್ರಕಾಶಿಸುವಂತೆ ಅವಿದ್ಯೆಯು ಕ್ಷೀಣಿಸಿದೊಡನೆ ಜೀವನು ಮಹಾಜ್ಞಾನನಾಗಿ ಪ್ರಕಾಶಿಸುತ್ತಾನೆ. ಇಲ್ಲಿ ಹೇಳಿರುವ ಜ್ಞಾನವು ವೃತ್ತಿಜ್ಞಾನವಲ್ಲ, ಇದು ಸ್ವರೂಪಜ್ಞಾನ. ಇದು ಅಸಂಗ. ಇನ್ನೊಂದರೊಡನೆ ಹೋಗಿ ಸೇರುವುದಿಲ್ಲ, ತನ್ನೊಡನೆ ಇನ್ನೊಂದನ್ನು ಸೇರಿಸುವುದೂ ಇಲ್ಲ. ಜ್ಞಾನಸ್ವರೂಪನೇ ಆತ್ಮನಾದ್ದರಿಂದ ಆತ್ಮನೂ ಅಸಂಗನೇ. ಇಲ್ಲಿ ಜ್ಞಾನವೇ ಆತ್ಮಸ್ವರೂಪವೆಂದು ತಿಳಿಯಬೇಕು.

**ಅಣುಮಾತ್ರೇಽಪಿ ವೈಧರ್ಮ್ಯೇ ಜಾಯಮಾನೇಽವಿಪಶ್ಚಿತಃ ।**
**ಅಸಂಗತಾ ಸದಾ ನಾಸ್ತಿ ಕಿಮುತಾವರಣಚ್ಯುತಿಃ ॥೯೭॥**

(ಈ ಅಜಾತಾದ್ವಯ ವಾದವನ್ನುಳಿದು ಇತರ ದ್ವೈತವಾದಗಳಲ್ಲಿ) **ಅಣುಮಾತ್ರೇಽಪಿ** = ಒಂದು ಪರಮಾಣುವಿನಷ್ಟು, **ವೈಧರ್ಮ್ಯೇ** = ವ್ಯತ್ಯಾಸವು, **ಜಾಯಮಾನೇ** = ಆಗುತ್ತಿರುವಾಗ, **ಅವಿಪಶ್ಚಿತಃ** = ಹಾಗೆ ವಾದಿಸುವ ವಿವೇಕಹೀನನ ಮತದಲ್ಲಿ, **ಅಸಂಗತಾ** = ಜ್ಞಾನಕ್ಕೆ ಸಂಗರಾಹಿತ್ಯವು, **ಸದಾ** = ಸರ್ವದಾ, **ನಾಸ್ತಿ** = ಇರುವುದೇ ಇಲ್ಲ, ಇನ್ನು **ಆವರಣಚ್ಯುತಿಃ** = ಆವರಣವಾದ ಅಜ್ಞಾನದ ನಾಶವು, **ಕಿಮುತ** = ಆಗುವುದೇ ಇಲ್ಲವೆಂದು ಹೇಳಬೇಕಾದ್ದೇನಿದೆ?

ಅಜಾತವೂ ಅಧ್ವಯವೂ ಆದ ಆತ್ಮವು ನಿತ್ಯಜ್ಞಾನಸ್ವರೂಪವಾಗಿದೆ. ಇನ್ನೊಂದು ವಸ್ತು ಹುಟ್ಟುವುದೇ ಇಲ್ಲ–ಎಂದು ನಮ್ಮ ಅದ್ವೈತಸಿದ್ಧಾಂತವನ್ನು ಹೇಳಿದ್ದಾಗಿದೆ. ಇದಕ್ಕೆ ವಿಲಕ್ಷಣವಾದ ದ್ವೈತವಾದದಲ್ಲಿ ಆತ್ಮರೂ ಬಾಹ್ಯವಸ್ತುಗಳೂ ಅನಂತವಾಗಿವೆ. ಬಾಹ್ಯ ವಸ್ತುಗಳಿಗೆ ಹುಟ್ಟು ಸಾವುಗಳಿವೆ. ಈ ದ್ವೈತವಾದದಲ್ಲಿ ಜ್ಞಾನವು ಅಸಂಗವಾಗುವುದಿಲ್ಲ, ಬೇರೆ ಬೇರೆ ವಸ್ತುಗಳ ಜ್ಞಾನವು ಹೊಸದಾಗಿ ಉಂಟಾಗುವುದರಿಂದ ಜ್ಞಾನವು ಸಸಂಗವಾಗುತ್ತದೆ. ಆಗ ಜೀವಾತ್ಮನಿಗೆ ಆವರಣವಾದ ಅಜ್ಞಾನವು ಪೂರ್ತಿಯಾಗಿ ತೊಲಗುವುದೇ ಇಲ್ಲ, ಪರಮಾತ್ಮನ ಜ್ಞಾನವೂ ಪೂರ್ಣವಾಗುವುದಿಲ್ಲ, ಆಗ ಅಜ್ಞಾನಿಗೆ ಮೋಕ್ಷವೂ ಇಲ್ಲವೆಂಬುದು ಸ್ಪಷ್ಟವಾಗಿದೆ.

**ಅಲಬ್ಧಾವರಣಾಃ ಸರ್ವೇ ಧರ್ಮಾಃ ಪ್ರಕೃತಿನಿರ್ಮಲಾಃ ।**
**ಆದೌ ಬುದ್ಧಾಸ್ತಥಾ ಮುಕ್ತಾ ಬುಧ್ಯಂತ ಇತಿ ನಾಯಕಾಃ ॥೯೮॥**

(ನಮ್ಮ ಸಿದ್ಧಾಂತದಲ್ಲಾದರೋ) **ಸರ್ವೇ ಧರ್ಮಾಃ** = ಸಮಸ್ತ ಜೀವಾತ್ಮರೂ, **ಅಲಬ್ಧಾವರಣಾಃ** = (ಪರಮಾರ್ಥದಲ್ಲಿ) ಅಜ್ಞಾನ (ಅವಿದ್ಯೆ)

ಏಕೆಂದರೆ, ಅದು ಅಸ್ತಿ, ನಾಸ್ತಿ ಮುಂತಾದ ಚತುಷ್ಕೋಟಿವರ್ಜಿತವಾದದ್ದು. ವೇದಾಂತದಲ್ಲಿ ಪರಿಶ್ರಮಿಸದವರಿಗೆ ಸಮುದ್ರದಂತೆ ಅತಿಗಂಭೀರವಾಗಿದ್ದು ವಿಚಾರಕ್ಕಿಳಿಯಲು ಸಹ ಹೆದರಿಕೆಯನ್ನು ಉಂಟುಮಾಡುವಂತಹದು. ಜನ್ಮಾದಿ ವಿಕಾರ ಶೂನ್ಯವೂ ಸಾಮ್ಯವೂ ವಿಶಾರದವೂ ಆದದ್ದು. ಆದ್ದರಿಂದ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಲ್ಲ. ಅಖಂಡಚೈತನ್ಯರೂಪವಾದ ಇದು ಪ್ರತ್ಯಗ್ ದೃಷ್ಟಿಯುಳ್ಳವರು ಗುರುವಿನ ಅನುಗ್ರಹಕ್ಕೆ ಪಾತ್ರರೂ ಆದ ಮುಮುಕ್ಷುಗಳಿಗೆ ಸ್ವಯಂಪ್ರಕಾಶವಾಗಿ ತಿಳಿದು ಬರುತ್ತದೆ. ಅದ್ವಯಾತ್ಮವನ್ನು ತಿಳಿದನಾವು ಅದ್ವಯಾತ್ಮರೇ ಆಗಿ ಅದ್ವಯಾತ್ಮನಿಗೆ ಯಥಾ ಶಕ್ತಿ ನಮಸ್ಕರಿಸುತ್ತೇವೆ. ವ್ಯವಹಾರ ವಿಷಯದಲ್ಲಿ ಆತ್ಮತತ್ತ್ವವು ವೇದ್ಯವೂ ಆಗುತ್ತದೆ. ನಮಸ್ಕಾರಕ್ಕೆ ವಿಷಯವೂ ಆಗುತ್ತದೆ. ಈ ನಮಸ್ಕಾರವು ಶಿಷ್ಯರಿಗೆ ಮಾರ್ಗದರ್ಶನಕ್ಕಾಗಿ ಬಂದಿದೆ.

ಇಲ್ಲಿಗೆ ನಾಲ್ಕನೆಯ ಅಲಾತ ಶಾಂತಿ ಪ್ರಕರಣವು ಸಮಾಪ್ತವಾಯಿತು.

ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯದ ಸಮಾಪ್ತಿಯಲ್ಲಿ ರಚಿಸಿರುವ ಮೂರು ಮಂಗಳ ಶ್ಲೋಕಗಳು ಮತ್ತು ಅವುಗಳ ತಾತ್ಪರ್ಯ.

**ಅಜಮಪಿ ಜನಿಯೋಗಂ ಪ್ರಾಪದೈಶ್ವರ್ಯಯೋಗಾತ್**
**ಅಗತಿ ಚ ಗತಿಮತ್ತಾಂ ಪ್ರಾಪದೇಕಂ ಹ್ಯನೇಕಮ್ ।**
**ವಿವಿಧ ವಿಷಯ ಧರ್ಮಗ್ರಾಹಿ ಮುಗ್ಧೇಕ್ಷಣಾನಾಂ**
**ಪ್ರಣತಭಯವಿಹಂತೃ ಬ್ರಹ್ಮ ಯತ್ತನ್ನತೋಽಸ್ಮಿ ॥೧॥**

ಯಾವ ಬ್ರಹ್ಮವು ಜನ್ಮರಹಿತವಾಗಿದ್ದರೂ ಈಶ್ವರಶಕ್ತಿಯೆಂಬ ಅವಿದ್ಯೆಯ ಸಂಬಂಧದಿಂದ ಆಕಾಶಾದಿರೂಪದಲ್ಲಿ ಜನ್ಮವನ್ನು ಪಡೆದಿದೆಯೋ, ಚಲನರಹಿತ ವಾದರೂ ಚಲನಸಹಿತವಾಗಿ ತೋರುತ್ತದೆಯೋ, ಸ್ವತಃ ದ್ವಿತೀಯ ವಸ್ತುವಿಲ್ಲದ ಅದ್ವಯವಾದರೂ ನಾನಾ ವಿಷಯಧರ್ಮಗಳನ್ನು ಗ್ರಹಿಸುವ ಮೂಢ ದೃಷ್ಟಿಯವ ರಿಗೆ ಅನೇಕ ವಸ್ತುಗಳ ರೂಪದಲ್ಲಿ ಗೋಚರಿಸುತ್ತದೆಯೋ, ಶರಣಾಗತರಾದವರ ಸಂಸಾರ ಭಯವನ್ನು ಹೋಗಲಾಡಿಸುವ ಆ ಬ್ರಹ್ಮವಸ್ತುವನ್ನು ನಮಸ್ಕರಿಸುತ್ತೇನೆ.

**ಪ್ರಜ್ಞಾವೈಶಾಖ ಮಂಥಕ್ಷುಭಿತಜಲನಿಧೇರ್ವೇದನಾಮ್ನೋಽಂತರಸ್ಥಂ**
**ಭೂತಾನ್ಯಾಲೋಕ್ಯ ಮಗ್ನಾನ್ಯವಿರತ ಜನನ ಗ್ರಾಹಘೋರೇಸಮುದ್ರೇ ।**
**ಕಾರುಣ್ಯಾದುದ್ದಧಾರಾಮೃತಮಿದಮಮರೈರ್ದುರ್ಲಭಂ ಭೂತಹೇತೋಃ**
**ಯಸ್ತಂ ಪೂಜ್ಯಾಭಿಪೂಜ್ಯಂ ಪರಮಗುರುಮಹಂ ಪಾದಪಾತೈರ್ನತೋಽಸ್ಮಿ ॥೨॥**

ಹುಟ್ಟು (ಸಾವು)ಗಳೆಂಬ ಮೊಸಳೆಗಳಿಂದ ಘೋರವಾದ ಈ ಸಂಸಾರ ಸಾಗರದಲ್ಲಿ ತೆರಪಿಲ್ಲದೆ ಮುಳುಗಿ ಹೋಗಿರುವ ಜನರನ್ನು ನೋಡಿ ನಮ್ಮ ಪರಮ

ಗುರುಗಳಿಗೆ ಕಾರುಣ್ಯ ಉಂಟಾಯಿತು. ಆಗ ಅವರು ವೇದವೆಂಬ ಮಹಾಸಾಗರವನ್ನು ತಮ್ಮ ಪ್ರಜ್ಞಾಶಕ್ತಿಯೆಂಬ ಮಂಥನಸದಂಡದಿಂದ ಕಡೆದು ಕ್ಷೋಭೆಗೊಳಿಸಿ ದಿವ್ಯವಾದ ಈ ಜ್ಞಾನಾಮೃತವನ್ನು ತೆಗೆದು ಈ ಜನರಿಗಾಗಿ ಕೊಟ್ಟಿದ್ದಾರೆ. ಈ ಅಮೃತವು ದೇವತೆಗಳಿಗೂ (ಕ್ಷೀರ ಸಮುದ್ರವನ್ನು ಕಡೆದಾಗ) ದೊರಕಲಿಲ್ಲ. ನನ್ನ ಪೂಜ್ಯ ಗುರುಗಳಿಗೂ ಪೂಜ್ಯರಾದ (ಶ್ರೀ ಗೌಡಪಾದಾಚಾರ್ಯರೆಂಬ) ಪರಮಗುರುಗಳನ್ನು ಅವರ ಪಾದದ ಬಳಿ ಮತ್ತೆ ಮತ್ತೆ ಅಡ್ಡಬಿದ್ದು ನಮಸ್ಕರಿಸುತ್ತೇನೆ.

**ಯತ್ಪ್ರಜ್ಞಾಲೋಕಭಾಸಾ ಪ್ರತಿಹತಿಮಗಮತ್ ಸ್ವಾಂತಮೋಹಾಂಧಕಾರೋ**
**ಮಜ್ಜೋನ್ಮಜ್ಜಂ ಚ ಘೋರೇ ಹ್ಯಸಕೃದುಪಜನೋದನ್ವತಿ ತ್ರಾಸನೇ ಮೇ ।**
**ಯತ್ಪಾದಾವಾಶ್ರಿತಾನಾಂ ಶ್ರುತಿಶಮವಿನಯ ಪ್ರಾಪ್ತಿರಗ್ರ್ಯಾ ಸಮಗ್ರಾ**
**ತತ್ಪಾದೌ ಪಾವನೀಯೌ ಭವಭಯವಿನುದೌ ಸರ್ವಭಾವೈರ್ನಮಸ್ಯೇ ॥೩॥**

ಯಾವ ನನ್ನ ಗುರುಗಳ ಜ್ಞಾನವೆಂಬ ಬೆಳಕಿನ ಪ್ರಕಾಶದಿಂದ ನನ್ನ ಅಜ್ಞಾನವೆಂಬ ಕತ್ತಲೆಯು ನಾಶವಾಯಿತೋ, ಹುಟ್ಟು (ಸಾವು)ಗಳೆಂಬ ಭೀಕರವಾದ ಘೋರಸಮುದ್ರದಲ್ಲಿ ಮುಳುಗಿ ಏಳುವುದೂ ತಪ್ಪಿ ಹೋಯಿತೋ, ಯಾರ ಪಾದಗಳನ್ನು ಆಶ್ರಯಿಸಿದ ಶಿಷ್ಯರಿಗೆ ವೇದಾರ್ಥಜ್ಞಾನ, ಶಮ, ವಿನಯ ಮುಂತಾದ ಗುಣಗಳು ಉತ್ತಮ ರೀತಿಯಲ್ಲಿ ಪ್ರಾಪ್ತವಾಗುತ್ತವೆಯೋ ಅಂತಹ ನನ್ನ ಗುರುಗಳಾದ ಶ್ರೀ ಗೋವಿಂದಭಗವತ್ಪಾದರ ಪವಿತ್ರ ಪಾದಗಳಿಗೆ ಮನೋವಾಕ್ಕಾಯಗಳಿಂದ ನಮಸ್ಕರಿಸುತ್ತೇನೆ.

ಟಿಪ್ಪಣಿ : **ಮಜ್ಜನಾಂ ಉನ್ಮಜ್ಜನಾಂ ಚ ಸಮಾಹಾರಃ ಮಜ್ಜೋನ್ಮಜ್ಜಮ್.**

ಮಸ್ಜ ಧಾತುವಿನ ಮೇಲೆ ಭಾವೇಘಞ್ ಪ್ರತ್ಯಯ. **ಮಜ್ಜಃ** = ಮುಳುಗುವುದು.

**ಶ್ರೀ ಶಂಕರಾಚಾರ್ಯ ಕೃತ ಪ್ರಣಾಮಂ**
**ಶ್ರೀ ಗೌಡಪಾದಾರ್ಯ ಪದಾರವಿಂದಮ್ ।**
**ಧನ್ಯೋ ದ್ವಯೋರ್ವಾಗಮೃತೇನ ಸಿಕ್ತಃ**
**ಪೂಜ್ಯಂ ಪವಿತ್ರಂ ಶರಣಂ ಪ್ರಪದ್ಯೇ ॥**

**ಇಲ್ಲಿಗೆ ಶ್ರೀ ಗೌಡಪಾದಕಾರಿಕಾ ಸಂವಲಿತ**
**ಮಾಂಡೂಕ್ಯ ಪ್ರವಚನವು ಸಮಾಪ್ತವಾಯಿತು**

ಏಕರೂಪವಾಗಿ ಕಾಣುತ್ತಲೇ ಇರುತ್ತವೆ. ಹೀಗಿರುವಾಗ ಜಗತ್ತು ಮಿಥ್ಯೆ. ಜಗತ್ತೇ ಇಲ್ಲ – ಎಂದು ಹೇಳಬಹುದೇ? ಈ ಪ್ರಶ್ನೆ ಹುಟ್ಟುತ್ತದೆ. ಆದರೆ ವಿಚಾರ ಮಾಡಿದಾಗ ಜಾಗ್ರತ್, ಸ್ವಪ್ನ ಈ ಎರಡು ಅವಸ್ಥೆಗಳೂ ಒಂದೇ ಬಗೆಯವೆಂದು ಗೊತ್ತಾಗುತ್ತದೆ. ಗ್ರಾಹ್ಯ, ಗ್ರಾಹಕ (ದೃಕ್–ದೃಶ್ಯ) ಎಂಬುದೂ ಆದ್ಯಂತಗಳಲ್ಲಿ ಇಲ್ಲವೆಂಬುದೂ ಎರಡು ಅವಸ್ಥೆಗಳಲ್ಲಿಯೂ ಸಮ. ಯಾವುದಕ್ಕೆ ಹುಟ್ಟುನಾಶ ಗಳಿವೆಯೋ ಅದು ಸ್ವಪ್ನ ದೃಶ್ಯದಂತೆಯೇ ಮಿಥ್ಯೆ. ಜಾಗ್ರತ್ತಿನ ವಸ್ತುಗಳಿಗೂ ಹುಟ್ಟುಸಾವುಗಳಿವೆ. **ಆದಾವಂತೇಚಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ॥** ''ಯಾವುದು ಆದಿಯಲ್ಲಿಯೂ ಅಂತ್ಯದಲ್ಲಿಯೂ ಇಲ್ಲವೋ ಅದು ವರ್ತಮಾನ ಕಾಲದಲ್ಲಿಯೂ ಇಲ್ಲವೆಂದು ತಿಳಿಯಬೇಕು'' ಉದಾಹರಣೆಗೆ – ಹಗ್ಗದಲ್ಲಿ ಹಾವು ಕಾಣುತ್ತದೆ. ಅದು ಆದಿಯಲ್ಲಿಯೂ ಇರಲಿಲ್ಲ, ಅಂತ್ಯದಲ್ಲಿಯೂ ಇರುವುದಿಲ್ಲ. ವರ್ತಮಾನದಲ್ಲಿ ಕಾಣುವುದು ಭ್ರಾಂತಿಯಿಂದ ಹಾವು ಮಿಥ್ಯೆ ಎಂದು ಸಿದ್ಧವಾಗುತ್ತದೆ. ಎಚ್ಚರವಾದ ಮೇಲೆ ಕನಸಿನ ಸ್ವಪ್ನದೃಶ್ಯವಿರುವುದಿಲ್ಲ. ಹಾಗೆಯೇ ಜಾಗ್ರತ್‌ನಿಂದ ಮನುಷ್ಯನು ಎಚ್ಚರಗೊಂಡು ಅದ್ವಿತೀಯಾತ್ಮನ ಬೆಳಕನ್ನು ಕಂಡಾಗ ಜಾಗ್ರತ್ತಿನ ದೃಶ್ಯ ಇರುವುದೇ ಇಲ್ಲ. ಯಾವುದು ಶಾಶ್ವತವಲ್ಲವೋ ಅದು ಮಿಥ್ಯೆ. ಅದ್ವಿತೀಯಾತ್ಮನೊಬ್ಬನೇ ಸತ್ಯ. ಆದ್ದರಿಂದ ಭ್ರಾಂತಿಯಿಂದ ಕಾಣುವ ಜಗತ್ತು ಮಿಥ್ಯೆ.

ಅನಾದಿಯಾದ ಅವಿದ್ಯೆಯಿಂದ ಆತ್ಮನಲ್ಲಿ ಜೀವ ಜಗತ್ತು – ಎಂಬ ವಿಕಲ್ಪ ಗಳು ತೋರುತ್ತವೆ. ಧರ್ಮಾಧರ್ಮಗಳೆಂಬ ಹೇತು, ದೇಹಾಂತರ ಪ್ರಾಪ್ತಿ ಎಂಬ ಫಲ, ಸುಖ ದುಃಖಗಳ ಭೋಗ – ಇವೆಲ್ಲವೂ ಆತ್ಮನಲ್ಲಿ ತೋರುವ ವಿಕಲ್ಪಗಳು ಇದೇ ಸಂಸಾರದ ಕಲ್ಪನೆ. ಯಾವಾಗ ಮಾನವನು ಆತ್ಮನೊಬ್ಬನೇ ಪರಮಾರ್ಥ, ಆ ಪರಮಾರ್ಥವೇ ನಾನು ಎಂದು ನಿಶ್ಚಯಿಸಿ ತಿಳಿದುಕೊಳ್ಳುತ್ತಾನೋ ಆಗ ಈ ಸಂಸಾರ ವಿಕಲ್ಪಗಳು ತೊಲಗಿ ಹೋಗುತ್ತವೆ.

ಪಂಚಪ್ರಾಣಗಳು, ಪಂಚಭೂತಗಳು, ಶಬ್ದಾದಿ ಪಂಚ ವಿಷಯಗಳು, ಇಂದ್ರಿಯ, ಮನಸ್ಸು, ಚರ, ಸ್ಥಿರ, ಲೋಕ, ದೇವತೆ, ವೇದ, ಯಜ್ಞ, ಸೂಕ್ಷ್ಮ ಸ್ಥೂಲ, ಹೆಂಗಸು, ಗಂಡಸು, ನಪುಂಸಕ, ಸೃಷ್ಟಿ, ಸ್ಥಿತಿ, ಲಯ – ಇತ್ಯಾದಿ ನಾನಾ ವಿಕಲ್ಪಗಳು ಅವಿದ್ಯೆಯಿಂದ ತೋರುತ್ತವೆ. ಆತ್ಮವಿದನಾದ ಗುರುವಿನ ಉಪದೇಶ ದಿಂದ ಈ ವಿಕಲ್ಪಗಳೆಲ್ಲವೂ ತೊಲಗುತ್ತವೆ. ಆತ್ಮನು ಸದಾ ಮಂಗಲ ಸ್ವರೂಪ ನಾಗಿದ್ದಾನೆ. ಈ ಎಲ್ಲ ದೃಶ್ಯಗಳಿಗೂ ಅವನೇ ಅಧಿಷ್ಠಾನ. ಸರ್ಪಭ್ರಾಂತಿಗೆ ಹಗ್ಗವು ಹೇಗೆ ಅಧಿಷ್ಠಾನವೋ ಹಾಗೆ ಜಗದ್‌ಭ್ರಾಂತಿಗೆ ಆತ್ಮನು ಅಧಿಷ್ಠಾನ. ಕಾಮ, ಕ್ರೋಧಾದಿ ಚಿತ್ತದೋಷಗಳೆಲ್ಲವೂ ನಾಶವಾಗಿ ಚಿತ್ತವು ಪರಶುದ್ಧವಾದಾಗ ಮಾತ್ರ ಈ ವೇದಾಂತ ತತ್ತ್ವವು ಸ್ಪಷ್ಟವಾಗಿ ಗೋಚರಿಸುತ್ತದೆ. ಯಾರು ವಿದ್ಯಾವಿನಯ

ಗಳಿಂದ ಭೂಷಿತರಾಗಿ, ಸದಾ ಸಂತುಷ್ಟ ಚಿತ್ತರಾಗಿ, ಯಾವ ಅಪೇಕ್ಷೆಯನ್ನೂ ಇಟ್ಟುಕೊಳ್ಳದೆ ಸದಾ ಆತ್ಮನಿಷ್ಠರಾಗಿರುತ್ತಾರೋ ಅವರೇ ಧನ್ಯರು, ಅವರೇ ಕೃತಕೃತ್ಯರು.

## ೩. ಅದ್ವೈತ ಪ್ರಕರಣ

ಹಿಂದಿನ ವೈತಥ್ಯ ಪ್ರಕರಣದಲ್ಲಿ ದ್ವೈತವೆಲ್ಲವೂ ಮಿಥ್ಯೆಯೆಂದು ಯುಕ್ತಿಯಿಂದ ನಿರ್ಣಯಿಸಿ. ಅದ್ವೈತವೇ ಸತ್ಯವೆಂದು ತಿಳಿಸಲಾಗಿದೆ. ಹಾಗೆ ಅದ್ವೈತವೇ ಸತ್ಯವೆಂಬುದನ್ನು ಯುಕ್ತಿಯಿಂದಲೂ ಸಾಧಿಸಬಹುದೆಂಬುದನ್ನು ತೋರಿಸುವುದಕ್ಕಾಗಿ ಈ ಪ್ರಕರಣವು ಹೊರಟಿದೆ. ಉಪನಿಷತ್ತುಗಳಲ್ಲಿ ಉಪಾಸನಾ ವಿಧಿಗಳೇ ಪ್ರಧಾನವಾಗಿ ಕಂಡು ಬರುತ್ತವೆ. ಬ್ರಹ್ಮವು ಜಗದ್ರೂಪವಾಗಿ ಪರಿಣಮಿಸಿದೆಯೆಂದೂ ಜೀವನು ಬ್ರಹ್ಮೋಪಾಸನೆಯಿಂದ ಅದ್ವಯಾತ್ಮನಾಗಬೇಕೆಂದೂ ಕೆಲವರ ಹೇಳಿಕೆ ಇದೆ. ಅದ್ವಯಾತ್ಮನು ಜಗದ್ರೂಪವಾಗಿ ಪರಿಣಮಿಸುವುದೇ ಇಲ್ಲವೆಂದು ತಿಳಿಸುವುದಕ್ಕಾಗಿ ಮೊದಲು ಅಜಾತಿವಾದವನ್ನು ಆರಂಭಿಸಿದ್ದಾರೆ.

ಜೀವರಾಗಲಿ ಅವರಿಗೆ ಉಪಾಧಿಗಳಾದ ಪಂಚಭೂತಗಳಾಗಲಿ ಹುಟ್ಟುವುದೇ ಇಲ್ಲ. ಬ್ರಹ್ಮವೇ ನಾನಾ ಜೀವಗಳಾಗಿಯೂ ಪಂಚಭೂತಗಳ ಮೂಲಕ ಶರೀರಗಳಾಗಿಯೂ ತನ್ನನ್ನು ತೋರಿಸಿಕೊಳ್ಳುತ್ತದೆ. **"ಆತ್ಮನ ಆಕಾಶಃ ಸಂಭೂತಃ, ಆಕಾಶಾತ್‌ವಾಯುಃ"** ಮುಂತಾದ ಶ್ರುತಿಗಳಿಗೆ ಆಕಾಶಾದಿ ಭೂತಗಳ ಉತ್ಪತ್ತಿಯಲ್ಲಿ ತಾತ್ಪರ್ಯವಿಲ್ಲ. ರೂಪಾಂತರವನ್ನು ಪಡೆದಂತೆ ಬ್ರಹ್ಮವು ತನ್ನನ್ನು ತೋರಿಸಿಕೊಳ್ಳುತ್ತದೆ ಎಂಬುದರಲ್ಲಿ ಅವುಗಳಿಗೆ ತಾತ್ಪರ್ಯವಿದೆ. ಕನಸಿನಲ್ಲಿ ಕಾಣುವ ಶರೀರಾದಿಗಳಂತೆ ಜಾಗ್ರತ್ತಿನಲ್ಲಿ ಕಾಣುವ ಜಗತ್ತೂ, ಅವಿದ್ಯೆಯಿಂದ ಕಾಣುವುದರಿಂದ ಮಿಥ್ಯೆಯಾಗಿರುತ್ತದೆ.

ಜೀವಬ್ರಹ್ಮರ ಏಕತ್ವವೂ ತೈತ್ತಿರೀಯದ ಬ್ರಹ್ಮಾನಂದವಲ್ಲಿ, ಬೃಹದಾರಣ್ಯಕದ ಮಧುಬ್ರಾಹ್ಮಣ ಹೀಗೆಯೇ ಇತರ ಸ್ಥಳಗಳಲ್ಲಿಯೂ ಸ್ಪಷ್ಟವಾಗಿದೆ. **'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ"** – ಎಂದು ಸೃಷ್ಟಿಯೆಲ್ಲವೂ ಬರಿಯ ಮಾತಿನಿಂದ ತೋರುವ ವಿಕಲ್ಪ ವೆಂದು ಶ್ರುತಿಯು ಹೇಳುತ್ತದೆ. ಏಕತ್ವಜ್ಞಾನಕ್ಕೆ ಪರಮ ಪುರುಷಾರ್ಥವಾದ ಮೋಕ್ಷವು ಫಲವೆಂದು ಶ್ರುತಿಯು ಹೇಳುತ್ತದೆ. ಆದರೆ ಸೃಷ್ಟಿಕ್ರಮದ ಜ್ಞಾನಕ್ಕೆ ಯಾವ ಫಲವನ್ನು ಹೇಳಿಲ್ಲ. ಆದ್ದರಿಂದ ಸೃಷ್ಟಿಯ ವಿಷಯದಲ್ಲಿ ಶ್ರುತಿಗೆ ತಾತ್ಪರ್ಯವೇ ಇಲ್ಲವೆಂದು ನಿಶ್ಚಯಿಸಬಹುದು.

ಶ್ರುತಿಯಲ್ಲಿ ಉಪಾಸನಾಪ್ರಕಾರಗಳನ್ನೂ ವಿವಿಧಕರ್ಮಗಳನ್ನು ಹೇಳಿರುವುದೇಕೆಯೆಂಬ ಪ್ರಶ್ನೆ ಹುಟ್ಟಬಹುದು. ಅಧ್ಯಾತ್ಮವಿಚಾರ ಮಾಡುವುದಕ್ಕೆ ಮಂದ,

ಏಕೆಂದರೆ, ಇದು ಯಾವ ದರ್ಶನವನ್ನೂ ವಿರೋಧಿಸುವುದಿಲ್ಲ. ಎಲ್ಲ ದರ್ಶನ ಗಳನ್ನೂ ತನ್ನಲ್ಲಿ ಸಮನ್ವಯಿಸಿಕೊಳ್ಳುತ್ತದೆ.

ಅಜನಾದ ಆತ್ಮನೊಬ್ಬನೇ ಇದ್ದಾನೆಂದೂ ದೃಶ್ಯವಾದ ಜಗತ್ತು ಮಾಯಿಕ ವೆಂದೂ ಅದ್ವೈತದ ನಿರ್ಣಯ. ಅಜವಾದ ಬ್ರಹ್ಮವು ಜಗತ್ತಾಗಿ ಹುಟ್ಟುತ್ತದೆ ಎಂಬ ವಾದವು ಯುಕ್ತವಲ್ಲ. ಹುಟ್ಟತಕ್ಕದ್ದು ಅಜವೆಂದು ಹೇಳುವುದು ಬಾಧಿತವಾಗುತ್ತದೆ. ಧರ್ಮಾಧರ್ಮಗಳೆಂಬ ಹೇತುವಿನಿಂದ ಶರೀರವೆಂಬ ಫಲವು ಹುಟ್ಟುತ್ತದೆ ಎನ್ನುವುದೂ ಸರಿಯಲ್ಲ, ಶರೀರವಿಲ್ಲದೆ ಧರ್ಮಾಧರ್ಮಗಳು ಹುಟ್ಟಲಾರವು. ಹೀಗೆ ಫಲದಿಂದ ಹೇತು, ಹೇತುವಿನಿಂದ ಫಲವೆಂಬ ಅನವಸ್ಥೆ ಪ್ರಾಪ್ತವಾಗು ವುದು. ಬೀಜಾಂಕುರನ್ಯಾಯದಂತೆ, ಧರ್ಮಾಧಮಗಳೆಂಬ ಹೇತು, ಶರೀರವೆಂಬ ಫಲ–ಇವೂ ಅನಾದಿಗಳೆಂದು ಹೇಳಬಹುದಲ್ಲವೆ? ಇಲ್ಲ! ಬೀಜಾಂಕುರ ನ್ಯಾಯದಲ್ಲಿಯೂ ಈ ಪ್ರಶ್ನೆ ಹುಟ್ಟುವುದರಿಂದ ಆ ನ್ಯಾಯವೂ ಸಾಧ್ಯವೇ ಹೊರತು ಸಿದ್ಧವಲ್ಲ. ಹೇಗೆಂದರೆ, ಅನಾದಿಯಾಗಿ ಇದ್ದದ್ದು ಬೀಜವೆ? ಅಂಕುರವೆ? ಅದನ್ನು ನಿರ್ಣಯಿಸಲಾಗುವುದೇ ಇಲ್ಲವಾದ್ದರಿಂದ ಹೇತು ಫಲಗಳೆರಡೂ ಕಲ್ಪಿತಗಳು, ಅವು ಹುಟ್ಟಿಯೇ ಇಲ್ಲವೆಂಬ ಅಜಾತಿವಾದವೇ ಸಿದ್ಧಾಂತವಾಗಿ ಉಳಿಯುತ್ತದೆ.

ಚಿತ್ತಕ್ಕೆ ವಿಷಯವಾಗುವ ಶಬ್ದಾದಿ ವಿಷಯಗಳನ್ನು ಚೇತ್ಯವೆಂದು ಬೌದ್ಧರ ವ್ಯವಹಾರವಿದೆ. ಸುಖದುಃಖಾದಿಗಳು ಚಿತ್ತದಲ್ಲುಂಟಾಗುವುದರಿಂದ ಚೇತ್ಯವಾದ ವಸ್ತುವೂ ಇದೆಯೆಂದು ಬೌದ್ಧರಲ್ಲಿ ಕೆಲವರ ಮತವಿದೆ. ವಿಜ್ಞಾನವಾದಿಬೌದ್ಧರು ಚಿತ್ತಕ್ಕಿಂತ ವ್ಯತಿರಿಕ್ತವಾಗಿ ಬಾಹ್ಯವಸ್ತು ಇಲ್ಲವೆಂದು ಸಾಧಿಸಿ ಚೇತ್ಯವನ್ನು ನಿರಾಕರಿಸುತ್ತಾರೆ. ಹಾಗೆಯೇ ಆತ್ಮನಿಗೆ ವ್ಯತಿರಿಕ್ತವಾಗಿ ಚಿತ್ತವೂ ಇಲ್ಲವೆಂದು ಸಾಧಿ ಸಬಹುದಾದ್ದರಿಂದ ವಿಜ್ಞಾನವಾದಿ ಬೌದ್ಧರ ಮತವೂ ನಿರಾಕೃತವಾಗುತ್ತದೆ. ಹೀಗೆಯೇ ಬಂಧಮೋಕ್ಷಗಳನ್ನೂ ನಿರಾಕರಿಸಬಹುದು. ಬಂಧವು ಅನಾದಿ ಯಾದರೆ ಅನಂತವೆಂದೂ ಹೇಳಬೇಕಾಗುತ್ತದೆ. ಆಗ ಮೋಕ್ಷವಿಲ್ಲದೆ ಹೋದೀತು. ಮೋಕ್ಷವು ಹೊಸದಾಗಿ ಹುಟ್ಟುವುದಾದರೆ ಅದಕ್ಕೆ ನಾಶವೂ ಇದೆಯೆಂದು ಒಪ್ಪಬೇಕಾಗುತ್ತದೆ. ಆದ್ದರಿಂದ ಬಂಧಮೋಕ್ಷಗಳೂ ಇಲ್ಲವೆನ್ನುವುದೇ ಯುಕ್ತಿ ಸಂಮತವಾಗುತ್ತದೆ. ಹೀಗೆಯೇ ಸ್ವಪ್ನಜಾಗರಿತಗಳೂ ಮಿಥ್ಯೆಯೆನ್ನುವುದೆ ಯುಕ್ತವಾಗಿದೆ.

ಆದ್ದರಿಂದ ಜಾಗ್ರತ್ತಿನಲ್ಲಿ ತೋರುವ ಬಾಹ್ಯವಸ್ತುಗಳೆಲ್ಲವೂ ಕೇವಲ ಚಿತ್ತದ ಸ್ಪಂದಿತಗಳೇ ಹೊರತು ಸತ್ಯವಾದವುಗಳಲ್ಲ, ಅಜಾದ್ವಯನಾದ ಆತ್ಮನು ವೇದಾಂತ ಪ್ರತಿಪಾದ್ಯನಾಗಿರುವುದರಿಂದ ದ್ವಿತೀಯ ವಸ್ತುವಿನ ಅಸ್ತಿತ್ವಕ್ಕೆ

ಅವಕಾಶವೇ ಇಲ್ಲ. ಅಲಾತವನ್ನು ದೃಷ್ಟಾಂತವಾಗಿ ಇಟ್ಟುಕೊಳ್ಳಬಹುದು. ಚಿತ್ರವಿಚಿತ್ರವಾಗಿ ಕಾಣುವ ಅಲಾತಚಕ್ರವು ನಮ್ಮ ಹಸ್ತದ ಚಲನೆಯಿಂದ ಹಾಗೆ ತೋರುವುದೇ ಹೊರತು ಆ ವೈಚಿತ್ರ್ಯವು ಎಲ್ಲಿಂದ ಬಂದೂ ಇಲ್ಲ, ಎಲ್ಲಿಗೆ ಹೋಗುವುದೂ ಇಲ್ಲ. ವಸ್ತುತಃ ಚಿತ್ತವೆಂಬುದೂ ಅದ್ವಯಾತ್ಮನಲ್ಲಿ ಕಲ್ಪಿತವಾದದ್ದು.

ಎಲ್ಲವೂ ಆತ್ಮನೇ ಆಗಿರುವುದರಿಂದ ಬಾಹ್ಯವಸ್ತುಗಳೇ ಇರುವುದಿಲ್ಲ. ಅವೆಲ್ಲವೂ ಅವಿದ್ಯೆಯಿಂದ ಕಾಣಿಸಿಕೊಳ್ಳತಕ್ಕವು. ಧರ್ಮಾಧರ್ಮಗಳೆಂಬ ಹೇತುವೂ ಶರೀರಪ್ರಾಪ್ತಿಯೆಂಬ ಫಲವೂ ಇವೆಯೆಂಬ ಭ್ರಾಂತಿಯಿಂದ ಅಜ್ಞಾನಿಗಳು ಸಂಸಾರಕ್ಕೆ ಬದ್ಧರಾಗಿ ಕಷ್ಟಪಡುತ್ತಿದ್ದಾರೆ. ಅಜನೂ ಅನಿದ್ರನೂ ಅಸ್ವಪ್ನನೂ ಆದ ಪರಮಾತ್ಮನೊಬ್ಬನೇ ಪರಮಾರ್ಥಸತ್ಯವೆಂದು ತಿಳಿದವನೇ ಸರ್ವಜ್ಞ ಬ್ರಾಹ್ಮಣ. ಅವನೇ ಕೃತಕೃತ್ಯನು.

ಜೀವಾತ್ಮರೆಲ್ಲರೂ ನಿತ್ಯಶುದ್ಧ ಬುದ್ಧ ಮುಕ್ತ ಸ್ವರೂಪರೇ ಆಗಿ ಪರಮಾತ್ಮನೇ ಆಗಿರುತ್ತಾರೆ. ತಮ್ಮ ನಿಜ ಸ್ವರೂಪವನ್ನು ಸಂವೃತಿಯೆಂಬ ಆವರಣದ ದೆಸೆಯಿಂದ ತಿಳಿಯದೆ ಇದ್ದಾರೆ. ಜ್ಞಾತೃ, ಜ್ಞಾನ, ಜ್ಞೇಯ ಎಂಬ ವಿಭಾಗವೇ ವಾಸ್ತವವಾಗಿ ಇಲ್ಲ. ಅಖಂಡ ಚೈತನ್ಯ ಒಂದೇ ಇರತಕ್ಕದ್ದು ಅದೇ ಪರಮಾರ್ಥ. ಇದನ್ನು ಗೌತಮಬುದ್ಧನು ಹೇಳಿಲ್ಲ. ಬೌದ್ಧ ಮತದ ಸೋಂಕು ವೇದಾಂತದಲ್ಲಿಲ್ಲ. ಅಜವೂ ಸಾಮ್ಯವೂ ಪರಿಶುದ್ಧವೂ ಆಗಿರುವ ಈ ಆತ್ಮತತ್ತ್ವಕ್ಕೆ ಯಥಾಶಕ್ತಿಯಾಗಿ ನಮ್ಮ ನಮಸ್ಕಾರವಿರಲಿ!

## ಅನುಬಂಧ–೨

## ಬೌದ್ಧಮತ ಮತ್ತು ಅದ್ವೈತ ಸಿದ್ಧಾಂತ

ಬುದ್ಧನು ಮುಖ್ಯವಾಗಿ ಸದಾಚಾರ ಸಂಹಿತೆಯನ್ನು ಬೋಧಿಸಿದ್ದಾನೆ. ಅಹಿಂಸೆ, ಅಸ್ತೇಯ, ಸತ್ಯಭಾಷಣ, ಶುದ್ಧವಾದ ಆಹಾರ, ದೇಹಶುದ್ಧಿ, ಮದ್ಯಪಾನ ನಿಷೇಧ – ಮುಂತಾದ ಆತನ ಉಪದೇಶಗಳು ಸರ್ವರಿಗೂ ಗ್ರಾಹ್ಯವಾದವುಗಳು. ಅಧ್ಯಾತ್ಮದ ವಿಚಾರವಾಗಿ ಶಿಷ್ಯರ ಪ್ರಶ್ನೆಗೆ ಉತ್ತರಕೊಡದೆ ಮೌನವಾಗಿರುತ್ತಿದ್ದನೆಂದು ತಿಳಿದು ಬರುತ್ತದೆ. ಕೆಲವು ವೇಳೆ ಅಂತಹ ಪ್ರಶ್ನೆಗಳನ್ನು ಕೇಳದಂತೆ ಶಿಷ್ಯರನ್ನು ನಿರೋಧಿಸುತ್ತಿದ್ದುದೂ ಉಂಟೆಂದು ಬೌದ್ಧನಿಕಾಯಗಳಿಂದ ಗೊತ್ತಾಗುತ್ತದೆ. ದಾರ್ಶನಿಕ ವಿಚಾರದಿಂದ ಪ್ರಯೋಜನವಿಲ್ಲವೆಂದೂ ಈ ದುಃಖ ಪ್ರಪಂಚದಿಂದ ಉದ್ಧಾರವಾಗಲು ಆಚಾರ ಪರಿಪಾಲನೆಯೇ ಉತ್ತಮಮಾರ್ಗವೆಂದೂ ಬುದ್ಧನ ಆಶಯವಾಗಿತ್ತು.

ಉಪನಿಷತ್ತುಗಳ ಮತ್ತು ಮಹಾಭಾರತದಲ್ಲಿರುವ ಮೋಕ್ಷಧರ್ಮಪರ್ವದ ಪ್ರತಿಬಿಂಬ ಎನ್ನಬಹುದು. ಅಸಂಗ, ನಾಗಾರ್ಜುನ, ಧರ್ಮಕೀರ್ತಿ ಮೊದಲಾದ ಬೌದ್ಧವಿದ್ವಾಂಸರು ಮೊದಲು ಬ್ರಾಹ್ಮಣರೇ ಆಗಿದ್ದು ಯಾವುದೋ ನಿಮಿತ್ತದಿಂದ ಬೌದ್ಧಮತಕ್ಕೆ ಸೇರಿದರೆಂದು ಇತಿಹಾಸವೇ ಹೇಳುತ್ತದೆ. ಶ್ರೀ ಗೌಡಪಾದರು ಪರಮವೈದಿಕರು. ಶ್ರೀಶಂಕರಾಚಾರ್ಯರೇ ಹೇಳಿದಂತೆ ವೇದವೆಂಬ ಮಹಾಸಾಗರ ವನ್ನು ತಮ್ಮ ಪ್ರಜ್ಞಾ ಬಲದಿಂದ ಕಡೆದು ಅದ್ವೈತಾಮೃತವನ್ನು ತೆಗೆದವರು. ಅವರು ಬೌದ್ಧಮತವನ್ನು ಆಳವಾಗಿ ಅಭ್ಯಾಸಮಾಡಿದ್ದರು. ಬೌದ್ಧಮತದಲ್ಲಿರುವ ದೋಷಗಳನ್ನು ಅವರಿಗೆ ತಿಳಿಸುವ ಸಲುವಾಗಿ, ಬೌದ್ಧರು ಅರ್ಥವಿಶೇಷದಲ್ಲಿ ಬಳಸಿದ ಧರ್ಮ, ಚಿತ್ತ, ಸಂವೃತಿ – ಮುಂತಾದ ಶಬ್ದಗಳನ್ನು ಕಾರಿಕೆಗಳಲ್ಲಿ ಬಳಸಿದ್ದಾರೆ – ಎಂದು ಹೇಳಬಹುದು. ಆದ್ದರಿಂದಲೇ **''ನೈತದ್‌ಬುದ್ಧೇನ ಭಾಷಿತಂ''** ಎಂದು ಈ ಕಾರಿಕೆಗಳ ಕಡೆಯಲ್ಲಿ ಹೇಳಿದ್ದಾರೆ (೪–೯೯).

ಶ್ರೀ ಯಾಮುನಾಚಾರ್ಯರು ತಮ್ಮ 'ಸಿದ್ಧಿತ್ರಯ'ದಲ್ಲಿ **''ಅನಾದ್ಯ ವಿದ್ಯಾವಶಾಚ್ಛ ಸಮಾರೋಪಿತಾವಾಸ್ತವಗ್ರಾಹ್ಯಗ್ರಾಹಕವಿಕಲ್ಪೋಲ್ಲೇಖಿನೀ ಸ್ವಯಂಪ್ರಕಾಶಾ ಸಂವಿದೇವ ಪರಮಾರ್ಥಸತೀ ಸೈವ ಆತ್ಮೇತಿ ಸೌಗತಾಃ ಪ್ರಕಟಾಃ ಪ್ರಚ್ಛನ್ನಾಶ್ಚ''** ಎಂದು ಬರೆದು ಅದ್ವೈತ ವೇದಾಂತಿಗಳು ಪ್ರಚ್ಛನ್ನ ಬೌದ್ಧರೆಂದು ಸೂಚಿಸಿದ್ದಾರೆ. ವಿದ್ವಾಂಸರಿಗೆ ಅದು ಶೋಭೆಯನ್ನು ತರತಕ್ಕದ್ದಲ್ಲ. ಅದೇ ಮಾತನ್ನು ಹಿಂತಿರುಗಿಸಿ, ವೇದಾಂತಿಗಳೆಂದು ಹೇಳಿಕೊಳ್ಳುವ ದ್ವೈತವಾದಿ ಗಳು **''ಪ್ರಚ್ಛನ್ನ ಮಹಮ್ಮದೀಯರು ಪ್ರಚ್ಛನ್ನ ಕ್ರಿಶ್ಚಿಯನ್ನರು, ಇದೇ ಅವರ ವಿಶಿಷ್ಟತೆ''** ಎಂದು ನುಡಿದರೆ ಹೇಗೆ? ಸರ್ವಥಾ ಹಾಗೆ ನುಡಿಯಬಾರದು.

ಪ್ರತಿಯೊಂದು ವಿಷಯಕ್ಕೂ ಶ್ರೀ ಶಂಕರಾಚಾರ್ಯರು ಶ್ರುತಿಯನ್ನು ಪ್ರಮಾಣ ವಾಗಿ ಉದಾಹರಿಸುತ್ತಾರೆ. ಅದ್ವೈತವು ವೇದಸಂಮತವಾದದ್ದು. ಬೌದ್ಧಮತವು ವೇದಬಾಹ್ಯವಾದದ್ದು.



